ಸಂಪುಟ ೨ ಸಂಚಿಕೆ ೧ ಜನವರಿ ೨೦೦೦

# ಮಹಿಳಾ ಅಧ್ಯಯನ

## ಉತ್ತರಾಯಣ ಸಂಚಿಕೆ





ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ಮಹಿಳಾ ಅಧ್ಯಯನ

## (ಉತ್ತರಾಯಣ ಸಂಚಿಕೆ)

ಸಂಪಾದಕರು

ಡಾ. ಎಚ್.ಎಸ್. ಶ್ರೀಮತಿ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

**MAHILA ADHYAYANA** (Half Yearly) Vol 2-1 (Jan-June 2000)
Ed. by Dr. H.S.Sreemathi
Published by The Director, Prasaranga
Kannada University, Hampi, Vidyaranya - 583 276

ಪುಟ: VIII+ 144





ಪ್ರಕಾಶಕರು
ಪ್ರೊ. ಎ.ವಿ.ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಬಿಡಿ ಪ್ರತಿ: ರೂ.೧೫.೦೦
ವಾರ್ಷಿಕ ಚಂದಾ: ರೂ.೩೦.೦೦

ಮುಖಪುಟ ವಿನ್ಯಾಸ
ಕೆ. ಕೆ. ಮಕಾಳಿ

ಅಕ್ಷರ ಸಂಯೋಜನೆ
ಋತ್ವಿಕ್ ಕಂಪ್ಯೂಟರ್ಸ್, ಹೊಸಪೇಟೆ

ಮುದ್ರಣ
ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್
ಗದಗ

# ನಿಮ್ಮೊಂದಿಗೆ

ಮಹಿಳಾ ಅಧ್ಯಯನ ಪತ್ರಿಕೆಯ ಮೂರನೆಯ ಸಂಚಿಕೆಯನ್ನು ಹೊರತರುತ್ತಿರುವಾಗ ಸಂತೋಷ, ಅಭಿಮಾನ, ದುಃಖ, ದುಮ್ಮಾನಗಳು ಒಟ್ಟೊಟ್ಟಿಗೆ ತುಂಬಿ ಬರುತ್ತಿವೆ. ಸೂಕ್ತವಾದ ಲೇಖನಗಳನ್ನು ದೊರಕಿಸಿಕೊಳ್ಳುವಲ್ಲಿ, ಉಳಿದೆಷ್ಟೋ ತಾಂತ್ರಿಕ ನಿರ್ವಹಣೆಗಳಲ್ಲಿ ಎದುರಿಸುತ್ತಿರುವ ಎಷ್ಟೆಷ್ಟೋ ತೊಂದರೆಗಳಲ್ಲೂ ಹೊರಬಂದಿರುವ ಮೊದಲಿನೆರಡು ಸಂಚಿಕೆಗಳ ಬಗ್ಗೆ ಹಲವು ಒಳ್ಳೆಯ ಮಾತುಗಳನ್ನು ಕೇಳುವ ಸೌಭಾಗ್ಯ ನಮ್ಮದಾಗಿದೆ. ಈ ಕ್ಷೇತ್ರದಲ್ಲಿ ಪರಿಣತರೆನಿಸಿದವರು ಪತ್ರಿಕೆಯನ್ನು ಆಸಕ್ತಿ, ಕುತೂಹಲಗಳಿಂದ ಓದಿ ತುಂಬು ನಿರೀಕ್ಷೆಯನ್ನು ವ್ಯಕ್ತಪಡಿಸಿದ್ದಾರೆ. ಇದು ಅಭಿಮಾನದ, ಸಂತೋಷದ ವಿಷಯ. ಜೊತೆಗೇ ನಮ್ಮ ಜವಾಬ್ದಾರಿಯನ್ನು ನಿರ್ವಹಿಸುವಲ್ಲಿ ಎಷ್ಟು ಜಾಗರೂಕರಾಗಿರಬೇಕು ಎಂಬ ಕಿವಿಮಾತು ಕೂಡ ಹೌದು. ಪತ್ರಿಕೆಯ ಯಶಸ್ಸು ಇಂಥಾ ಕ್ರಿಯಾತ್ಮಕ ಪ್ರತಿಕ್ರಿಯೆಗಳನ್ನು ತುಂಬಾ ಅವಲಂಬಿಸಿರುತ್ತದೆ.

ದುಃಖದುಮ್ಮಾನಗಳಿಗೆ ಕಾರಣವಾದ ಸಂಗತಿಯೂ ಇದೆ. ಪತ್ರಿಕೆಯನ್ನು ತರುವಲ್ಲಿ ಹಲವು ನಿರ್ವಹಣಾ ಹಂತಗಳಿವೆ. ಹಲವಾರು ತಾಂತ್ರಿಕ ತೊಂದರೆಗಳಲ್ಲಿ ಸಿಲುಕಿ ಪತ್ರಿಕೆ ಸಮಯಕ್ಕೆ ಸರಿಯಾಗಿ ಬರದೆ, ಬಂದ ಮೇಲೂ ಓದುಗರಿಗೆ ನಿಯತವಾಗಿ ತಲುಪದೆ ಓದುಗರೊಂದಿಗೆ ಅರ್ಥಪೂರ್ಣವಾದ ಸಂವಾದವನ್ನು ಬೆಳೆಸುವುದು ಕಷ್ಟಕರವಾಗಿದೆ. ಸಾಧ್ಯವಾದಷ್ಟು ಬೇಗನೆ ಈ ತೊಡಕುಗಳನ್ನು ಬಿಡಿಸಿಕೊಳ್ಳಲು ಯತ್ನಿಸಲಾಗುವುದು. ಸಹೃದಯ ಓದುಗ ಬಳಗವು ನಾವು ತಡವರಿಸಿ ಹೆಜ್ಜೆ ಇಟ್ಟರೆ ಸ್ನೇಹದಿಂದ ಕೈಹಿಡಿದು ಪತ್ರಿಕೆಯನ್ನು ಉಳಿಸಿ ಬೆಳೆಸಬೇಕು ಎಂದು ಕೇಳಿಕೊಳ್ಳುತ್ತೇನೆ.

ಈ ಸಂಚಿಕೆಯ ಸಿದ್ಧತೆಯ ಹಿನ್ನೆಲೆಯಲ್ಲಿ ಬೆಂಬಲವಾಗಿ ನಿಂತಿರುವ ನಮ್ಮ ನೆಚ್ಚಿನ ಕುಲಪತಿ ಡಾ. ಎಂ.ಎಂ.ಕಲಬುರ್ಗಿಯವರನ್ನು ಮೊದಲಿಗೆ ವಂದಿಸುತ್ತೇನೆ. ಲೇಖನಗಳನ್ನು ನೀಡಿದ ಎಲ್ಲ ವಿದ್ವಾಂಸರನ್ನೂ, ಎಷ್ಟೋ ಬಗೆಯಲ್ಲಿ ನನ್ನ ನೆರವಾಗಿ ನಿಂತ ನನ್ನ ವಿಭಾಗದ ಎಲ್ಲ ಸಹೋದ್ಯೋಗಿಗಳನ್ನು ನಾನು ಪ್ರೀತಿಯಿಂದ ನೆನೆಯುತ್ತೇನೆ. ಸಿದ್ಧಗೊಂಡ ಹಸ್ತಪ್ರತಿಯನ್ನು ಪರಿಶೀಲಿಸಿ ಸೂಕ್ತ ಸಲಹೆ ಸೂಚನೆಗಳನ್ನಿತ್ತ ಪತ್ರಿಕೆಯ ಸಲಹಾ ಸಮಿತಿಗೆ ನಾನು ಆಭಾರಿ.

ಡಿ.ಟಿ.ಪಿ., ಮುದ್ರಣ, ರಕ್ಷಾಕವಚದ ಸಿದ್ಧತೆ ಮೊದಲಾದವುಗಳಲ್ಲಿ ಆಸ್ಥೆ ವಹಿಸಿದ ನಮ್ಮ ಪ್ರಸಾರಾಂಗದ ನಿರ್ದೇಶಕರನ್ನೂ, ಅವರ ಸಿಬ್ಬಂದಿಯವರನ್ನೂ ನೆನೆಯುವುದು ನನ್ನ ಕರ್ತವ್ಯವಾಗಿದೆ.

**ಎಚ್. ಎಸ್. ಶ್ರೀಮತಿ**

# ಪರಿವಿಡಿ

# ಮಹಿಳಾ ಪೋಲಿಸ್ ಪೇದೆಗಳು:ಕಮಲಾಪುರ ಪೋಲಿಸ್ ಠಾಣೆ

ಸಂದರ್ಶನ : ಎ.ಎಸ್.ದಿನೇಶ್

ಮಹಿಳೆ ಅನ್ನುವ ಕಾರಣಕ್ಕಾಗಿ ಪ್ರವೇಶ ಪಡೆಯಲಾಗದ ಹಲವು ಕ್ಷೇತ್ರಗಳು ನಮ್ಮ ಸಮಾಜದಲ್ಲಿನ್ನೂ ಇವೆ. ಆದರೆ ಹಲವು ಕಾರಣಗಳಿಂದ ಈ ಎಲ್ಲಾ ಭ್ರಮೆಗಳೂ ಬಿದ್ದು ಹೋಗಿ ಮಹಿಳೆ ಎಲ್ಲಾ ಕ್ಷೇತ್ರಗಳಿಗೂ ಕಾಲಿರಿಸುತ್ತಿದ್ದಾಳೆ. ಇಂತಹ ಸಂದರ್ಭದಲ್ಲಿ ಈ ಬದಲಾವಣೆಗಳನ್ನು ಗುರುತಿಸಿ, ಬದಲಾವಣೆಯ ಸುತ್ತ ಇರುವ ಕಾರಣಗಳನ್ನು ಬಿಗಿಗೊಳಿಸಿದರೆ ಕಾಲನ ಜೊತೆ ಕಾಲು ಹಾಕುವುದಕ್ಕಿಂತ ಮುಂದೆ ಹೋಗಿ ಲಿಂಗ ಸಮಾನತೆಯನ್ನು ಸಾಧಿಸಬಹುದು. ಈ ಕಾರಣದಿಂದಲೇ ಮಹಿಳೆಯ ಪ್ರಗತಿಗೆ ಸಂಬಂಧಪಟ್ಟ ಸಣ್ಣ ಸಣ್ಣ ಸಂಗತಿಗಳನ್ನು ಬಹಳ ಆಸಕ್ತಿಯಿಂದ ಸೂಕ್ಷ್ಮವಾಗಿ ಅಧ್ಯಯನ ಮಾಡುವುದು ಅವಶ್ಯ. ಹಾಗಾಗಿ ಈ ಸಲದ ಸಂದರ್ಶನದಲ್ಲಿ ಕಮಲಾಪುರ ಪೋಲಿಸ್ ಠಾಣೆಯಲ್ಲಿರುವ ಮಹಿಳಾ ಪೇದೆಗಳ ಸಂದರ್ಶನ ಮಾಡಲಾಯಿತು.

ಮಹಿಳೆಯರ ಸಾಮರ್ಥ್ಯದ ಬಗ್ಗೆ ಪೂರ್ವಗ್ರಹ ಇರಿಸಿಕೊಂಡ ಪುರುಷಚಿಂತನೆ ಪೋಲಿಸ್ ಇಲಾಖೆಗಳಂತಹ ಹಲವು ಕ್ಷೇತ್ರಗಳಿಗೆ ಸ್ತ್ರೀಯರಿಗೆ ಪ್ರವೇಶ ನಿರಾಕರಿಸಿತ್ತು. ಆದರೆ ಅಂತಹ ಕ್ಷೇತ್ರಗಳಿಗೆ ಸ್ತ್ರೀಯರು ಪ್ರವೇಶ ಮಾಡಿದಾಗಲೂ ತಮ್ಮ ಸಂದೇಹವನ್ನು ಉಳಿಸಿಕೊಂಡೇ, ಸ್ತ್ರೀಯರಿಗೆ ತೋರಿಸುವ ಕಾರ್ಯವ್ಯಾಪ್ತಿ ಸಾಮಾನ್ಯವಾಗಿ ಪುರುಷನಿಗಿಂತ ಕೆಳಸ್ತರದ್ದೇ ಆಗಿರುತ್ತದೆ. ಅಲ್ಲಿಯ ಈ ಹೊಸತರದ ತಾರತಮ್ಯ ಮೇಲ್ನೋಟಕ್ಕೆ ಗೋಚರವಾಗದೇ ಇದ್ದರೂ ಸೂಕ್ಷ್ಮವಾಗಿ ನೋಡಿದರೆ ತಿಳಿಯುತ್ತದೆ. ಹೀಗಾಗಿ ಪುರುಷ ಇರುವ ಕಾರ್ಯ ಕ್ಷೇತ್ರಗಳಿಗೆ ಸ್ತ್ರೀ ಪ್ರವೇಶ ಪಡೆದ ತಕ್ಷಣ ಸಮಾನತೆ ಸಾಧ್ಯವಾಗುತ್ತದೆನ್ನುವ ಭರವಸೆ ಏನೂ ಇಲ್ಲ. ಆದಾಗ್ಯೂ ಇದರಿಂದಾಗಿ ಸ್ತ್ರೀಯರಿಗೆ ಲಭ್ಯವಾಗುವ ಆರ್ಥಿಕ ಸ್ವಾತಂತ್ರ್ಯ, ವೃದ್ಧಿಯಾಗುವ ಆತ್ಮವಿಶ್ವಾಸ, ಬದಲಾಗುವ ಸಮಾಜವನ್ನು ನೋಡುವ ದೃಷ್ಟಿಕೋನ ನಮಗೆ ಮುಖ್ಯವಾಗುತ್ತವೆ.

ಈ ಸಂದರ್ಶನ ತೌಲನಿಕವಾಗಿರಬೇಕೆನ್ನುವ ಅಪೇಕ್ಷೆಯಿಂದ ಅದೇ ಠಾಣೆಯ ಒಬ್ಬ ಪುರುಷ ಪೇದೆಯನ್ನು ಸಂದರ್ಶಿಸಲಾಯಿತು. ಒಂದೇ ಠಾಣೆಯ ಒಳಗಡೆ ಸ್ತ್ರೀ ಮತ್ತು ಪುರುಷ ಕಾರ್ಯವ್ಯಾಪ್ತಿಯ ಸ್ವರೂಪ ಅರಿಯಲು ಇದರಿಂದ ಸಹಾಯವಾಗುತ್ತದೆ. ಸಂದರ್ಶನಕ್ಕೆ ಸಂಬಂಧಪಟ್ಟ ಪ್ರಶ್ನೆಗಳನ್ನು ಒಂದು ತತ್ವದ (ಸ್ತ್ರೀವಾದ) ಅಡಿಯಲ್ಲಿ ರೂಪಿಸಬೇಕೆನ್ನುವ

ಆಶಯವಿದ್ದಾಗ್ಯೂ ಅದನ್ನು ಮೀರಿರುವ ಸಾಧ್ಯತೆ ಇದೆ. ಏಕೆಂದರೆ ಸಂದರ್ಶನ ನೀಡುವ ವ್ಯಕ್ತಿಗಳು ಹಾಗೂ ಕ್ಷೇತ್ರದ ಆಶಯಕ್ಕೆ ಹೊಂದಿಕೊಳ್ಳುವ ಕಾರಣಗಳೂ ಸೇರಿಕೊಳ್ಳುತ್ತವೆ.

**ಇಂದಿರಾ ಅವರೊಂದಿಗೆ**

ದಿ: ನಿಮ್ಮ ಹೆಸರೇನು?

ಇಂ: ನನ್ನ ಹೆಸರು ಇಂದಿರಾಂತ. ನಾನಿಲ್ಲಿ ಸೇರಿ ಸವೆನ್ ಇಯರ್ಸ್ ಆಯ್ತು.

ದಿ: ಇಲ್ಲಿ ನಿಮ್ಮ ಹುದ್ದೆ ಏನು?

ಇಂ: ನಾನಿಲ್ಲಿ ಪೋಲಿಸ್ ಹೆಡ್ ಕಾನ್ಸ್ಟೇಬಲ್ ಆಗಿದ್ದೀನಿ.

ದಿ: ನೀವು ಪೋಲಿಸ್ ಡಿಪಾರ್ಟಮೆಂಟ್‌ಗೆ ಸೇರೋಕೆ ಏನ್ ಕಾರಣ?

ಇಂ: ನನಗೆ ಇಂಟರಸ್ಟ್ ಇತ್ತು, ಹಾಗೇ ಮನೇದು ಕೂಡ ಪ್ರಾಬ್ಲಮ್ ಇತ್ತು. ಹಾಗಾಗಿ ಸೇರಿದೆ. ಮನೇಲಿ ಮೆಂಟೆನೆನ್ಸ್ ಪ್ರಾಬ್ಲಮ್ ಇತ್ತು.

ದಿ: ಆದ್ರೆ ನೀವು ಈ ಕೆಲಸ ಅಲ್ದೆ ಇದ್ರೆ ಬೇರೆ ಕೆಲ್ಸಕ್ಕೆ ಹೋಗ್ತಿದ್ರಾ?

ಇಂ: ಹೋಗ್ತಿದ್ದೆ. ಆದ್ರೆ ಇದರಲ್ಲಿ ಇಂಟರೆಸ್ಟ್ ಇತ್ತು, ಇಂಟರ್ ವ್ಯೂ ಬಂತು, ಸೆಲೆಕ್ಷನ್ ಆಯ್ತು. ಬಂದ್ಬಿ.

ದಿ: ನೀವು ಈ ಕೆಲಸಕ್ಕೆ ಸೇರಿದ್ದಕ್ಕೆ ಮನೇಲಿ ಯಾವ ತರ ಪ್ರೋತ್ಸಾಹ ಸಿಕ್ತು.?

ಇಂ: ನಮ್ಮನೇಲಿ ಪ್ರೊತ್ಸಾಹ ಕೊಡ್ತಾರೆ. ಸಂಬಂಧಿಕರು ನಮ್ಮಲ್ಲಿ ಯಾರೂ ಸೇರಿಲ್ಲ. ನೀನಾದ್ರು ಸೇರಿದಿಯಲ್ಲಾಂತ ಗೌರವ ಕೊಡ್ತಾರೆ.?

ದಿ: ನೀವು ಚಿಕ್ಕಂದಿನಲ್ಲಿ ಓದೋವಾಗ ನಿಜವಾಗಿಯೂ ಪೋಲಿಸ್ ಆಗ್ಬೇಕಂತ ಅಂದ್ಕೊಂಡಿದ್ರಾ?

ಇಂ: ಹೌದು, ಪೋಲಿಸ್ ಆಗ್ಬೇಕಂತ ನಾನು ಏಯ್ತ್ ಸ್ಟಾಂಡರ್ಡ್‌ನಿಂದನೂ ಅಂದ್ಕೊಂಡಿದ್ದೆ.

ದಿ: ನಿಮ್ಮ ಎಜುಕೇಷನ್‌ಗೆ ನಿಮ್ಮ ಮನೆಯವರ ಪ್ರೋತ್ಸಾಹ ಹೇಗಿತ್ತು.?

ಇಂ: ನಮ್ಮ ತಂದೆಯವರು ಚೆನ್ನಾಗಿ ಪ್ರೋತ್ಸಾಹ ಕೊಟ್ರು. ಏನು ತೊಂದ್ರೆ ಆಗ್ಲಿಲ್ಲ. ಬಿ.ಎ.ವರೆಗೆ ಓದಿಸಿದ್ರು.

ದಿ: ನೀವು ಪೋಲಿಸ್ ಇಲಾಖೆಗೆ ಸೇರ್ಕೊಂಡಾಗ ಇಲಾಖೆಯವರ ಪ್ರತಿಕ್ರಿಯೆ ಹೇಗಿತ್ತು.?

ಇಂ: ಜೆಂಟ್ಸ್ ಎಲ್ಲಾ ನಮಗೆ ಬ್ರದರ್ ಟೈಪ್ ಹೊಂದ್ಕೊಂಡ್ ಹೋಗಿದಾರೆ.

ದಿ: ಮೊದ್ಲು ಮೊದ್ಲು ಹಿಂಜರಿಕೆ ಇತ್ತಾ?

ಇಂ: ಮೊದ್ಲು, ಮೊದ್ಲು ಸ್ವಲ್ಪ ತ್ರಾಸಾಗ್ತಿತ್ತು. ಈವಾಗ ಪರ್ವಾಗಿಲ್ಲ. ಅಡ್ಜಸ್ಟ್ ಮಾಡ್ಕೊಂಡು, ಹೆಲ್ಪ್ ಮಾಡ್ತಾರೆ, ಲೇಡೀಸ್ ಅಂತ ಹೇಳಿ ಒಂದು ಇದರಿಂದ ಒಬ್ರುನೇ ಲೇಡೀಸ್‌ನ ಯಾಕೆ ಹೊರಗಡೆ ಕಳಿಸ್ಬೇಕಂತ ಹೇಳಿ ಜೊತೆಗೆ ಬರ್ತಾರೆ. ಯಾವ್ದಾದ್ರೂ ಬಂದೋಬಸ್ತ್‌ಗೆ ಹೋದ್ರೂ ಕೂಡ ಜೊತೆಗೇ ಇರ್ತಾರೆ.

ದಿ: ಇಲ್ಲಿ ಪೇದೆ ಅಂದ್ಮೇಲೆ ಗಂಡಸಿಗಾಗಲೀ ಹೆಂಗಸಿಗಾಗಲೀ ಒಂದೇತರ ಕೆಲಸ. ಆದ್ರೆ

ಒಮ್ಮೊಮ್ಮೆ ಹೆಂಗಸು ಅನ್ನೋ ಕಾರಣದಿಂದ ನಿಮ್ಮ ಮೇಲಧಿಕಾರಿಗಳು ನಿಮ್ಮನ್ನು ಕಷ್ಟದ ಕೆಲಸಗಳಿಗೆ ಕಳಿಸಲ್ಲ. ಸ್ವಲ್ಪ ಸುಲಭದ ಕೆಲಸಗಳಿಗೆ ನೇಮಿಸಬಹುದು. ಆತರ ಏನಾದ್ರೂ ಅನುಭವ ನಿಮಗಾಗಿದೆಯಾ?

ಇಂ: ಇಲ್ಲಾ, ಹೋಗ್ಬೇಕಾಗ್ತದೆ. 'ಲಾ ಅಂಡ್ ಆರ್ಡ್‌ರ್' ಪ್ರಾಬ್ಲಂ ಇರೋವಾಗ ಹೋಗ್ಲೇಬೇಕಾಗ್ತದೆ.

ದಿ: ಹೊರಗಡೆ ನಿಮ್ಗೇನೂ ತೊಂದರೆ ಆಗಿಲ್ವಾ?

ಇಂ: ಇಲ್ಲಾ ಆಗಿಲ್ಲ. ಜೊತೆಗೆ ಇರ್ತಾರಲ್ಲ. ನಾವು ಲೇಡಿಸ್ ಹತ್ತು ಹನ್ನೆರಡು ಜನ ಹೊರಗೆ ಹೋಗಿರ್ತೀವಿ. ಒಬ್ಬೊರಿಗೊಬ್ಬರು ಹೆಲ್ಪ್ ಮಾಡ್ಕೊತೀವಿ.

ದಿ: ನೀವು ಪುರುಷ ಪೇದೆಗಳು ಮಾಡೋ ಅಷ್ಟು ಕೆಲ್ಸಾನೇ ಮಾಡ್ತೀರಲ್ವಾ?

ಇಂ: ಹೌದು, ಆದರೆ ನೈಟ್ ಮಾತ್ರ ಮಾಡೋದಿಲ್ಲ. ಜೆಂಟ್ಸ್ ಅವರು ನೈಟ್ ರೌಂಡ್ಸ್ ಎಲ್ಲಾ ಹೋಗ್ತಾರೆ. ನಮ್ದೇನಿದ್ರೂ ಸ್ಟೇಷನ್ ಒಳಗೇ ವರ್ಕ್ ೯.ಮತ್ತೆ ಬಂದೋಬಸ್ತ್ ಅವೇನಾದ್ರು ಇದ್ರೆ ಹೋಗ್ತೀವಿ.

ದಿ: ನಿಮ್ಗೆ ಈ ಕೆಲಸ ತೃಪ್ತಿ ಕೊಟ್ಟಿದೆಯಾ?

ಇಂ: ಹೌದು ತೃಪ್ತಿ ಕೊಟ್ಟಿದೆ.

ದಿ: ಮುಂದೆ ನೀವು ಏನಾಗ್ಬೇಕ್ಕಂತ ಇದ್ದೀರಾ? ಅಂದ್ರೆ ಇನ್‌ಸ್ಪೆಕ್ಟ್‌ರ್ ಆಗ್ಬೇಕು ಹಾಗೇ ಇನ್ನೂ ಮೇಲಧಿಕಾರಿಯಾಗ್ಬೇಕ್ಕಂತ ಅನ್ನಿಸೋಲ್ವ?

ಇಂ: ಆಗ್ಬೇಕಂತಿದೆ, ಮತ್ತೆ ಆ ಚಾನ್ಸ ಸಿಗಬೇಕಲ್ಲ ನಮಗೆ.

ದಿ: ಇನ್‌ಸ್ಪೆಕ್ಟರ್ ಆಗಿ ಅಥವಾ ಮೇಲಧಿಕಾರಿಯಾಗಿ ಈ ಸಮಾಜ ಎದುರಿಸಬೇಕಾದ್ರೆ ಭಯ ಇಲ್ವಾ

ಇಂ: ಏನೂ ಭಯ ಇಲ್ಲ.

ದಿ: ಅಂದ್ರೆ ಮಹಿಳೆ ಎಲ್ಲವನ್ನು ನಿಭಾಯಿಸಬಲ್ಲಳು ಅನ್ನೊ ಆತ್ಮವಿಶ್ವಾಸವಿದೆ. ಹಿಂಜರಿಕೆ ಇಲ್ಲಾ.

ಇಂ: ಹೌದು ಮಾಡಬಹುದು. ಹಿಂಜರಿಕೆ ಏನೂ ಇಲ್ಲ.

ದಿ: ಸಮಾಜದಲ್ಲಿ ಪುರುಷ ಪೇದೆಗಳಿಗೆ ಸಿಗೋವಷ್ಟೇ ಗೌರವ ನಿಮ್ಗೂ ಸಿಕ್ತಾ ಇದೆಯಾ?

ಇಂ: ಈಗ ಮೊದಲಿದ್ದಾಂಗಿಲ್ಲಾರಿ. ಈಗ ಎಲ್ಲರೂ ಮರ್ಯಾದೆ ಕೊಡ್ತಾರೆ. ಮೇಡಂ ಬಂದಿದಾರೆ, ಮೇಡಂ ಬಂದಿದಾರೆ ಅಂತಾರೆ. ಅದು ಮೊದ್ಲು ಇತ್ತರಿ. ಯಾರೂ ಡಿಪಾರ್ಟಮೆಂಟ್‌ಗೆ ಬರೋ ಇಂಟರೆಸ್ಟ್ ತೋರಿಸ್ದೇ ಇರೋವಾಗ. ಬಟ್,ಇವಾಗ ಎಲ್ಲಾರೂ ಓದಿದಾರಲ್ಲಾ, ಓದ್ನಲ್ಲಿ ಮುಂದೆ ಬಂದಿರೋ ಹಾಗೆ ಈ ಡಿಪಾರ್ಟಮೆಂಟೂ ಹೊರತಲ್ಲ ಅಂದ್ಕೊಂಡಾರೆ.

ದಿ: ನೀವು ಇದುವರೆಗೆ ಇಲಾಖೆಯಲ್ಲಿ ಕೆಲ್ಸ ಮಾಡೋವಾಗ ನಿಮಗೆ ಸವಾಲಾಗಬಹುದಾದ ಕಾರ್ಯ ಎದುರಾಗಿದೆಯಾ?

ಇಂ: ಸವೆನ್ ಇಯರ್ಸ್‌ನಲ್ಲಿ ಬೇಕಾದಷ್ಟು ಬಂದೋಬಸ್ತ್ ಮಾಡಿದೀವಿ. ಆದ್ರೆ ಅಷ್ಟೇನೂ ಪ್ರಾಬ್ಲಂ ಬಂದಿಲ್ಲ. ಈಗ ಮೈಲಾರ ಜಾತ್ರೆಗೂ ಹೋಗ್ತೀವಿ, ಅಲ್ಲಿನೂ ಬಂದೋಬಸ್ತ ಮಾಡ್ತೀವಿ.

ದಿ: ಅಕಸ್ಮಾತ್ ನೀವು ಹೊರಗೆ ಕಾರ್ಯ ನಿರ್ವಹಿಸುವಾಗ ರಾತ್ರಿ ಉಳಿಬೇಕಾಗಿ ಬಂದಾಗ ಏನು ಮಾಡ್ತೀರಿ?

ಇಂ: ಸಾಮಾನ್ಯವಾಗಿ ಇಬ್ರಿರ್ತೀವಿ. ಒನ್ ಪ್ಲಸ್ ಒನ್, ಈಗ ನಾಲ್ಕು ದಿವಸ ಹಂಪೆನಲ್ಲಿ ಮಾಡಿದ್ವಲ್ಲಾ ಬಂದೋಬಸ್ತ. ನಮ್ಜೊತೆಗೊಬ್ರು ಜೆಂಟ್ಸ್ ಇರ್ತಾರೆ. ನಾವ್ ರಾತ್ರಿ ಹನ್ನೆರಡು ಒಂದು ಘಂಟೆವರೆಗೆ ತಿರುಗಾಡ್ಕೊಂಡು ಮತ್ತೆ ಅಲ್ಲೆ ಹಾಲ್ಟ್ ಆಗಿ ಬೆಳಿಗ್ಗೆ ಬರ್ತೀವಿ.

ದಿ: ನಿಮ್ಗೆ ಈ ಕೆಲಸದಲ್ಲಿ ಖುಶಿ ತರೋ ವಿಷಯಗಳೇನು?

ಇಂ: ಖುಶಿ ಅಂದ್ರೆ ಎಲ್ಲಾರೂ ನಮ್ಗೆ ಸಹಾಯ ಮಾಡ್ತಾರೆ, ಎಲ್ಲರೂ ನಮ್ಗೆ ಮರ್ಯಾದಿ ಕೊಡ್ತಾರೆ. ಮುಖ್ಯವಾಗಿ ಈ ಸ್ಟೇಷನ್‌ನಲ್ಲಿ ಗಂಡ ಹೆಂಡತಿರ ಜಗಳಗಳು ಬರ್ತವೆ. ಗಂಡ ಹೊಡ್ದಾಂತ ಬರ್ತವೆ. ಅವ್ರ್ಗೆ ಅಷ್ಟಕಷ್ಟಕ್ಕೆ ಸಮಾಧಾನ ಮಾಡಿ ಕಳಿಸ್ಕೊಡ್ತೀವಿ. ಜಡ್ಜ್, ಪಿ.ಎಸ್.ಐ. ಅವರತ್ರ ಹೇಳಲಾರ್ದ ಸಮಸ್ಯೆಗಳನ್ನು ಲೇಡೀಸ್ ಹತ್ರ ಹೇಳ್ತಾರಲ್ಲ. ಅದರ ಬಗ್ಗೆ ನಾವು ಹಂಗಲ್ಲಾ ಹೀಗ್ ಮಾಡ್ಬೇಕು. ಹೀಗ್ ಹೇಳ್ಬೇಕು ಅಂತೇಳಿ ಅದನ್ನು ಅಲ್ಲೇ ಕೇಸ್ ಆಗೋದಿಕ್ಕೆ ಮುಂಚೆ ಸಾಲ್ವು ಮಾಡಿ ಕಳಿಸಿಬಿಡ್ತೀವಿ.

ದಿ: ಈಗ ನೀವು ಇಲ್ಲಿ ಸಂಜೆವರೆಗೂ ಕೆಲ್ಸ ಮಾಡಿ ಹೋಗ್ತೀರ. ಮತ್ತೆ ಮನೇಲಿ ಹೋಗಿ ಮನೆ ಕೆಲ್ಸಾ ಎಲ್ಲಾ ನೀವೇ ಮಾಡ್ತೀರಾ?

ಇಂ: ಹೌದು ನಾವೇ ಮಾಡ್ತೀವಿ. ಅವೆಲ್ಲಾ ಅಡ್ಜಸ್ಟ್ ಆಗಿದೆ. ಗಂಡ ಅಡಿಗೆ ಮಾಡಲ್ಲ. ಸಣ್ಣ ಪುಟ್ಟ ಕೆಲ್ಸ ಮಾಡಿಕೊಡ್ತಾರೆ.

ದಿ: ನಿಮ್ಮ ಮಕ್ಕಳನ್ನು ಪೋಲೀಸ್ ಇಲಾಖೆಗೆ ಕಳಿಸ್ತೀರಾ?

ಇಂ: ಇಲ್ಲ,ಇಲ್ಲ. ನಮ್ಗೆ ಇಷ್ಟ ಇಲ್ಲ. ನಾವೊಂದು ಫ್ಯಾಮಿಲಿಯಲ್ಲಿ ಆಗ್ಬಿಟ್ಟಿದ್ದೀವಲ್ಲಾ. ನಮ್ಮಗನಿಗೇನೋ ದೊಡ್ಡ ಓದು ಓದಿಸ್ಬೇಕೂಂತ.

ದಿ: ಸರಿ ಮಗಳಿಗೆ?

ಇಂ: ಮಗಳಿಗೆ ಇಲ್ಲ, ಮಗಳಿಗೆ ಬೇಡ, ಏನೋ ಒಂದು ಟಿ.ಸಿ.ಎಚ್. ಮಾಡ್ಸಿ, ಏನೋ ಒಂದು ಮಾಡಿ ಮದ್ವೆ ಮಾಡೋದು.

ದಿ: ಅಲ್ಲ ಯಾಕೆ ಈ ಪೋಲಿಸ್ ಡಿಪಾರ್ಟಮೆಂಟು, ಮಿಲ್ಟ್ರಿ ತರದ ಡಿಪಾರ್ಟಮೆಂಟ್‌ಗಳಿಗೆ ಮಗಳನ್ನು ಕಳಿಸಲ್ಲ.

ಇಂ: ಬೇಡ ನಮ್ದು ಸಾಕು. ಯಾಕಂದ್ರೆ ನನ್ಗಂಡನಂತೋರು ಅವ್ರುಗೂ ಸಿಗಬೇಕಲ್ಲಾ, ಅವ್ರ ಫ್ಯಾಮಿಲೀ ಒಪ್ಕೊಬೇಕಲ್ಲಾ. ಎಲ್ಲಾ ಫ್ಯಾಮಿಲೀಲು ಒಪ್ಗೆ ಕೊಡಂಗಿಲ್ಲಲ್ಲ. ಪೋಲಿಸ್ ಡಿಪಾರ್ಟಮೆಂಟ್ ಇಂತವಕ್ಕೆಲ್ಲಾ ಕೊಡಂಗಿಲ್ಲ.

ದಿ: ಅಲ್ಲ ಪೋಲಿಸ್ ಡಿಪಾರ್ಟಮೆಂಟ್ ಅಂತಲ್ಲ, ಈ ತರದ ಚಾಲೆಂಜಿಂಗ್ ಆದ ಕೆಲ್ಸಗಳನ್ನು ಕೊಡಿಸ್ಬಹುದಲ್ಲಾ?

ಇಂ: ನಮ್ಮಗಳಿಗೆ ಏನ್ 'ಏಮ್' ಇದೇಂತ ನಮ್ಗೇನು ಗೊತ್ತು. ಅವಳಿನ್ನೂ ಎಂಟನೇ ಕ್ಲಾಸ್ ಓದ್ತಾಳೆ. ನಮ್ಗೂ ಅವಳ್ಗೆ ಯಾವ್ದಾದ್ರು ಜಾಬ್ ಕೊಡ್ಸೆ ಮ್ಯಾರೇಜ್ ಮಾಡ್ಬೆಕೂಂತಾನೆ ಇದೆ ತಲೇಲಿ.

ದಿ: ಅದು ಸರಿ, ಆದ್ರೂ ಕೇಳ್ತೀನಿ. ಮಗಳು ದೊಡ್ಡೋಳಾದ್ಮೇಲೆ ಇಲ್ಲಮ್ಮ ನಾನು ಪೋಲಿಸ್ ಕೆಲಸಕ್ಕೆ ಹೋಗ್ತೀನಿಂದ್ರೆ ಕಳಿಸ್ತೀರಾ?

ಇಂ: ಇಲ್ಲಿಲ್ಲ. ಹೇಳಲ್ಲ. ಯಾಕಂದ್ರೆ ನಾವ್ ಟೈಂ ಸರಿಯಾಗಿ ಮನೆ ಸೆರಲ್ಲಾಂತ ಗೊತ್ತು. ಯಾಕಂದ್ರೆ ಈ ಜಾತ್ರೆಗಳಿಗೆ ಹೋದ್ರೆ ಮೂರ್ ದಿನ ಹೊರಗಡೆ ಹೋಗ್ಬಿಡ್ತೀವಿ. ಮನೇಲಿ ಆ ಹುಡ್ಗುರೇ ಮಾಡ್ಕೊಬೇಕು. ನಮ್ ಹಸ್‌ಬೆಂಡ್‌ಯೇ ಮಾಡ್ಬೇಕು. ಮಕ್ಕಳಿಗೆ ಸ್ವಲ್ಪ ಪ್ರಾಬ್ಲಂ ಆಗಿಬಿಡ್ತದೆ. ಈಗ ನಮ್ಮ ಮನೇರು ದಾಂಡೇಲಿ ಮ್ಯಾರೇಜ್‌ಗೆ ಹೋಗಿದ್ರು. ನಾವು ಇಲ್ಲಿ ಬಂಧ್ಬಿಟದ್ವಿ. ಮನೇಲಿ ಎರಡೇ ಹುಡುಗ್ರು.

ದಿ: ನಿಮ್ಗೆ ಕಿರಣ್ ಬೇಡಿಯವರ ತರ ರಾಷ್ಟ್ರಮಟ್ಟದಲ್ಲಿ ಅಥವಾ ರಾಜ್ಯಮಟ್ಟದಲ್ಲಿ ಕೆಲ್ಸ ಮಾಡ್ಬೇಕೂಂತ ಆಸೆ ಇದೆಯಾ?

ಇಂ: ಮುಂದುವರೀಬೇಕಂತ ಆಸೆ ಇದೆ. ಕೈಗೂಡುತ್ತೋ ಇಲ್ವೋ ಗೊತ್ತಿಲ್ಲ.

## ಮೀನಾಕ್ಷಿ ಅವರೊಂದಿಗೆ

ದಿ: ನೀವು ಪೋಲಿಸ್ ಕಾನ್ಸ್ಟೇಬಲ್ ಆಗಿ ಎಷ್ಟು ವರ್ಷ ಆಯ್ತು?

ಮೀ: ಸವೆನ್ ಇಯರ್ಸ್ ರನ್ನಿಂಗ್.

ದಿ: ನಿಮಗೆ ಪೋಲಿಸ್ ಇಲಾಖೆ ಸೇರ್ಲಿಕ್ಕೆ ನಿಜವಾಗಿಯೂ ಆಸಕ್ತಿ ಇತ್ತಾ?

ಮೀ: ಆಸಕ್ತಿ ಏನಿಲ್ಲ. ಕೆಲಸ ಮಾಡ್ಬೇಕೂಂತ ಆಸಕ್ತಿ ಏನಿರ್ಲಿಲ್ಲಾ.

ದಿ: ಮತ್ತೆ ಯಾವ ಕಾರಣದಿಂದ ಈ ಇಲಾಖೆಗೆ ಬಂದ್ರಿ?

ಮೀ: ಎಸ್.ಎಸ್.ಎಲ್.ಸಿ. ಆದ್ಮೇಲೆ ಎಂಪ್ಲಾಯ್ ಮೆಂಟ್ ಮಾಡ್ಸಿದ್ವಲ್ಲಾ ಆರ್ಡ್‌ರ್ ಬಂತು ಹೋದ್ವಿ.

ದಿ: ಬೇರೆ ಕೆಲಸಗಳು ಸಿಕ್ಕುವ ಭರವಸೆ ಇರ್ಲಿಲ್ವಾ?

ಮೀ: ಇರ್ಲಿಲ್ಲ. ಗಂಡನ ಮನೇಲಿದ್ವಿ ನಾವು, ಅಕಸ್ಮಾತ್ ಬೇರೆ ಕೆಲ್ಸ ಸಿಕ್ಕಿದ್ರೆ ಹೋಗ್ತಿದ್ವಿ.

ದಿ: ಇಷ್ಟಾಗಿಯೂ ಪೋಲಿಸ್ ಸ್ಟೇಷನ್ ಅಂದ್ರೆ ಗಂಡಸ್ರು ಮಾಡೋ ಕೆಲ್ಸ, ಅಲ್ಲಿ ಕಾನ್ಸ್ಟೆಬಲ್‌ಗಳು ಸ್ಟ್ರೈಕು ಅದಿಕ್ಕೆ ಇದಿಕ್ಕೇಂತ ಹೊರಗಡೆ ಹೋಗ್ಬೇಕಾಗ್ತದೆ ಅಂತ ಸಾಮಾನ್ಯವಾಗಿ ಗೊತ್ತಿದ್ರೂ, ನೀವು ಈ ಕೆಲಸವನ್ನು ಒಪ್ಕೊಂಡ್ರಲ್ಲಾ ಹ್ಯಾಗೆ?

ಮೀ: ಭಯ ಇತ್ತು ಮೊದ್ಲಿಗೆ ಪೋಲೀಸ್ ಇಲಾಖೆ ಅಂದ್ರೆ. ನಾವು ಡಿಪಾರ್ಟ್‌ಮೆಂಟ್ ಸೇರಿರ್ಲಿಲ್ವಲ್ಲಾ. ಮತ್ತೆ ಕಾಮನ್ನಾಗಿ ಭಯ ಪಟ್ತಾ ಇದ್ವಿ, ನೋಡೋಣ ಮತ್ತೆ ಸೆಲೆಕ್ಟಾಗಿದೆಯಲ್ಲಾ ಧೈರ್ಯ ತಂದ್ಕೋಂಡು ಬಂದ್ವಿ. ಇಷ್ಟಾದರೆ ಮಾಡೋದು ಆಮೇಲೆ

ಬಿಡೋದಂತ ಬಂದಿದ್ವಿ ನಾವು.

ದಿ: ನೀವು ಪೋಲೀಸ್ ಇಲಾಖೆ ಸೇರ್‍ದ್ಾಗ ಮನೇಲಿ ಪ್ರತಿಕ್ರಿಯೆ ಹೇಗಿತ್ತು?

ಮೀ: ನಮ್ಮ ತಾಯಿಯರೇನಿಲ್ಲ ಇಷ್ಟಪಟ್ರು, ನಮ್ ತಂದೆ ಇಷ್ಟ ಪಟ್ರು, ನಮ್ಮತ್ತೆ ಬೇಡಾಂದ್ರು. ಮನೇಲಿ ಪ್ರೋತ್ಸಾಹ ಇತ್ತು.

ದಿ: ಚಿಕ್ಕಂದಿನಲ್ಲಿ ನೀವು ಓದೋವಾಗ ಯಾವ್ದೆ ಅಡ್ಡಿ ಇರ್ಲಿಲ್ವಾ? ಹುಡುಗಿ ಇವಳಿಗ್ಯಾಕೆ ಓದು ಅನ್ನೋತರದ ಅಭಿಪ್ರಾಯಗಳೇನು ಇರ್ಲಿಲ್ವಾ?

ಮೀ: ಆತರ ಏನಿಲ್ಲ. ಬಹಳ ಇದಿತ್ತು ನಮ್ಮನೇಲಿ ಹಳ್ಳೀಲಿ ಹುಟ್ಟಿದ್ರೇನೂ ನಮ್ಮ ಮನೆತನದಲ್ಲಿ, ನಮ್ಮಮದರ್ರು ಮುಂದು ಬರ್ಬೇಕು ಮಕ್ಕಳು, ನಾವು ಹೊಲದ ಕೆಲಸ ಮಾಡುದ್ರೂನು ನಮ್ಮ ಮಕ್ಕಳು ಆತರ ಮಾಡ್ಬಾರ್ದೂಂತ ಇತ್ತು.

ದಿ: ನೀವು ಪೋಲಿಸ್ ಇಲಾಖೆಗೆ ಬಂದ್ಮೇಲೆ ಹೊಸ ಪರಿಸರದಲ್ಲಿ ಗಂಡಸರ ಜೊತೆ ಕೆಲ್ಸ ಮಾಡ್ಬೇಕಲ್ಲ ಆಗ ಏನು ಅನ್ನಿಸ್ತು?

ಮೀ: ಆತರ ಏನಿಲ್ಲ. ಮನೇಲಿ ಬ್ರದರ್ಸ್ ಹ್ಯಾಗಿದಾರೆ ಆತರ ಇರ್ತಾರೆ.

ದಿ: ಇಲಾಖೆಯಲ್ಲಿ ಸಾಮಾನ್ಯವಾಗಿ ಗಂಡಸು, ಹೆಂಗಸರಿಗೆ ಸಮಾನವಾದ ಕೆಲಸ ಇರ್ತದೆ. ಆದರೆ ಕೆಲವೊಮ್ಮೆ ಕಠಿಣ ಕೆಲಸಗಳಿಗೆ ಮಹಿಳೆಯರನ್ನು ಕಳಿಸಲ್ಲ. ಅವರಿಗೆ ಆ ಕೆಲ್ಸ ನಿಭಾಯಿಸಲಿಕ್ಕೆ ಆಗಲ್ಲಾಂತ. ಆತರದ ವ್ಯತ್ಯಾಸ ನಿಮ್ಮಲ್ಲೂ ಇದೆಯಾ?

ಮೀ: ಸ್ಟ್ರೈಕುಗಳಿಗೆ ಮಹಿಳೆಯರನ್ನು ಕಳಿಸ್ತಾರೆ. ಲೇಡೀಸ್ ಕಂಪಲ್‌ಸರಿ ಬೇಕಂದ್ರೆ, ಮೇಲಧಿಕಾರಿಗಳಿಂದ ಮೆಸೇಜ್ ಬಂದಿರುತ್ತೆ. ಅದರ ಪ್ರಕಾರ ನಾವು ಹೋಗ್ಲೇ ಬೇಕು. ಕಂಪಲ್‌ಸರಿ ಇಲ್ಲಾಂದ್ರೆ, ಅನ್ ಎಕ್ಸ್‌ಪೆಕ್ಟೆಡ್ ಆಗಿ ನಮ್ಮನ್ನು ಕಳಿಸಲ್ಲ.

ದಿ: ಯಾಕೆ ಕಳಿಸಲ್ಲ?

ಮೀ: ಯಾಕೆ ಕಳಿಸಲ್ಲಾಂದ್ರೆ ಅದರಲ್ಲಿ ಲೇಡೀಸ್ ಯಾರು ಭಾಗವಹಿಸಲ್ಲಾಂತ ಅರ್ಥ.

ದಿ: ಲೇಡೀಸ್ ಭಾಗವಹಿಸಿದ್ರೆ ಮಾತ್ರ ನಿಮ್ಮನ್ನು ಕಳಿಸ್ಬೇಕು ಯಾಕೆ? ಅಂದ್ರೆ ನಿಮಗೆ ಪುರುಷರನ್ನು ನಿಭಾಯಿಸುವ ಶಕ್ತಿ ಇಲ್ವಾ?

ಮೀ: ಇದೆ.

ದಿ: ಮತ್ಯಾಕೆ ಕಳಿಸಲ್ಲಾ?

ಮೀ: ನಮ್ಮನ್ನ ತಗೊಂಡಿರದೇ ಲೇಡೀಸ್ ಕಂಪ್ಲೇಂಟ್ ಏನಾದ್ರು ಬಂದ್ರೆ ಅಂತ. ಈಗ ಜೆಂಟ್ಸ್ ಕೇಳಿದ್ರೆ ಈಗಿನವರು ರಗಳೆ ಮಾಡ್ತಾರಲ್ಲಾ.

ದಿ: ಹಾಗೇನಿಲ್ಲಾನ್ಸುತ್ತೆ. ನಿಮ್ಮನ್ನು ಪೋಸ್ಟ್‌ಗೆ ತಗೊಂಡಿರೋದು ನೀವು ಒಬ್ಬ ಪುರುಷ ಪೇದೆಗೆ ಸಮಾನಾಂತಾನೇ.

ಮೀ: ಸರಿಸಮಾಂತ ತಗೊಂಡ್ರೂನೂ. ಇವಾಗ ಜೆಂಟ್ಸ್ ಇದ್ದಲ್ಲಿ ನಮ್ಮನ್ನು ಕಳಿಸಲ್ಲ.

ದಿ: ಅದನ್ನೇ ನಾನು ಕೇಳೋದು. ಯಾಕೇಂತ? ಅದನ್ನ ಡಿಪಾರ್ಟ್‌ಮೆಂಟ್ ಇನ್‌ಸ್ಪೆಕ್ಟರ್ ಬೇಡಾಂತಾರ ಅಥ್ವಾ ನೀವೇ ಬೇಡಾಂತೀರಾ?

ಮೀ: ಇಲ್ಲ ಡಿಪಾರ್ಟಮೆಂಟ್‌ನವರೇ ಬೇಡಾಂತಾರೆ. ನಮ್ಮನ್ನ ಎಲ್ಲಾಕಾದ್ರು. ಜೆಂಟ್ಸ್ ಜೊತೆ ನೌಕರಿ ಕೊಟ್ರೂನೂ ಹೋಗ್ತೀವಿ.

ದಿ: ನಿಮ್ಗೆ ಸ್ಟೇಷನ್ ನಲ್ಲಿ ಯಾವ ಕೆಲ್ಸ ಖುಶಿಕೊಟ್ಟಿದೆ?

ಮೀ: ರೈಟಿಂಗ್ ಕೆಲ್ಸಾನೆ ನಮಗೆ ಖುಶಿ ಕೊಟ್ಟಿದೆ.

ದಿ: ಯಾಕೆ? ರೈಟಿಂಗ್ ಕೆಲ್ಸಾನೇ ಖುಶಿ ಕೊಡುತ್ತೆ?

ಮೀ: ಯಾಕಂದ್ರೆ, ಜಾಸ್ತಿ ಹೊರಗಡೆ ಹೋಗೋದಿಲ್ವಲ್ಲಾ, ಸ್ಟೇಷನ್‌ನಲ್ಲಿ ಕುತ್ಕೊಂಡು ರಿಜಿಸ್ಟರ್ ಮೆಂಟೇನ್ ಮಾಡ್ತಾ ಇರ್ಬಹುದು. ಮನೇಲಿ ಮಕ್ಕಳಿರ್ತಾರಲ್ಲ, ಔಟ್ ಸೈಡ್ ಹೋಗ್ಬೇಕೂಂದ್ರೆ ಪ್ರಾಬ್ಲಂ.

ದಿ: ಮನೇಲಿ ನಿಮ್ಮ ಗಂಡ ಇರ್ತಾರಲ್ಲಾ?

ಮೀ: ಇದ್ರೂನೂ ನಾವ್ ಮಾಡೋದ್ ಮಾಡ್ಬೇಕಲ್ಲಾ. ಗಂಡ ಅಡಿಗೆ ಮಾಡ್ತಾರಾ? ನಾವು ಮಾಡ್ಬಿಟ್ಟುಬಂದ್ರೆ, ಮಕ್ಕಳಿಗೆ ಕಳಿಸ್ತಾರೆ ಅಷ್ಟೆ. ತಾಯಿಗಿಂತ ತಂದೆಗೆ ಜವಾಬ್ದಾರಿ ಕಡಿಮೆ.

ದಿ: ಪುರುಷರನ್ನ ಹೊರಗೆ ಡ್ಯೂಟಿ ಮೇಲೆ ಕಳಿಸಿದ್ರೆ, ಅವರು ಮನೆ, ಮಕ್ಕಳು ಹೆಂಡ್ತೀಂತ ಯೋಚನೆ ಮಾಡ್ದೆ ಕೆಲಸದ ಮೇಲೆ ಹೋಗಿ ಬರ್ತಾರೆ. ಆದ್ರೆ ಅದೇ ಮಹಿಳೆ ಮನೆ ಮಕ್ಕಳು ಅಂತ ತುಂಬಾ ರಿಸ್ಕ್ ತಗೋತಾರೆ. ಈ ವ್ಯತ್ಯಾಸ ನಿಮಗೆ ಏನನ್ಸುತ್ತೆ.?

ಮೀ: ಅದು ಮೊದಲಿಂದ ನಡೆದು ಬಂದ ಸಂಪ್ರದಾಯನೇ ಹಾಗಿದೆಯಲ್ಲಾ, ಪದ್ಧತಿನೇ ಹಾಗಿದೆ. ಮೊದಲಿಂದಾನೇ ನಡ್ಕೊಂಡ್ ಬಂದಿದೆಯಲ್ಲಾ. ಇವಾಗ ಕೆಲ್ಸ ಬಂದಿದೆ ಅನಿವಾರ್ಯವಾಗಿ ಮಾಡ್ಬೇಕು. ಇವಾಗ ನಾವು ಹಳ್ಳೀಲಿದ್ದು ಮಕ್ಕಳು ಫ್ಯೂಚರ್ ಹಾಳಾಗುತ್ತೆ. ಕೆಲಸ ಬಂದಿದೆ ಬಿಡಬಾರ್ದು ಅಂತ ಬಂದಿದ್ದು.

ದಿ: ನಿಮ್ಗಿರೋ ಕಾಳಜಿ ಪುರುಷರಿಗೂ ಇರ್ಬೇಕಲ್ಲಾ?

ಮೀ: ಇರಬೇಕದು, ಅವರಿಗೊತ್ತಿರ್ಬೇಕದು.

ದಿ: ನೀವು ಡ್ಯೂಟಿ ಮಾಡಿ ಸಂಜೆ ಸುಸ್ತಾಗಿ ಹೋಗಿಯೂ ಮನೆ ಕೆಲ್ಸ ಮಾಡೋವಾಗ ನಿಮ್ಗೆ ಬೇಸರ ಆಗುತ್ತಾ?

ಮೀ: ತಗೋಬೇಕು ಪೇಶನ್ಸ್.

ದಿ: ಅಲ್ಲ ನೀವು ಎಷ್ಟೂಂತ ರಿಸ್ಕ್ ತಗೋತೀರಿ?

ಮೀ: ಈವಾಗಿಲ್ಲಿ, ಸ್ವಲ್ಪ ಅಷ್ಟು ಹೆವಿ ಇರಲ್ಲ ಡ್ಯೂಟಿ. ಇಲ್ಲೆಲ್ಲಾ ರೈಟಿಂಗ್ ಕೆಲ್ಸ ಅದೂ ಇದೂ ಮಾಡ್ಕೊಂಡು ಹೋಗ್ತೀವಿ. ನಮ್ಮ ಫ್ರೆಂಡ್ಸ್ ಒಬ್ಬಳು ಟೈಪ್ ಹೊಡೀತಾರೆ. ಟಿ.ಎ.ಬಿಲ್. ಮಾಡ್ತೀವಿ.ಇಲ್ಲಿ ಅದೂ ಇದೂ ವರ್ಕ್ ಇದ್ರೆ ಮುಗಿಸ್ಕೊಂಡು ಬೇಗ ಹೋಗ್ತೀವಿ ಮನೆಗೆ.

ದಿ: ನಿಮ್ಗೆ ಇಲಾಖೆಯಲ್ಲಿ ಅಥ್ವಾ ಹೊರಗಡೆ ಇನ್ನೂ ಹೆಚ್ಚಿನ ಸಾಧನೆ ಮಾಡಿ ಹೆಸರು ಪಡೀಬೇಕೂಂತ ಆಸೆ ಇದೆಯಾ?

ಮೀ: ಆಸೆ ಏನೂ ಇಲ್ಲ ಆತರ.

ದಿ: ಯಾಕೆ?

ಮೀ: ಸುಮ್ನೆ ಡಿಪಾರ್ಟ್‌ಮೆಂಟ್ ನಲ್ಲಿ ಇದೀವಲ್ಲಾ. ಪ್ರೊಮೋಶನ್ ಬಂದ್ರೆ ಅನಿವಾರ್ಯ ವಾಗಿ ಮಾಡೇ ಮಾಡ್ತೀವಿ. ಈಗ ಎಜುಕೇಷನ್ ತಕ್ಕಂತೆ ಪ್ರಮೋಶನ್ ಬರ್ತವೆ. ಡಿಗ್ರಿ ಆಗಿರ್ಬೇಕು. ಟೆನ್ ಇಯರ್ಸ್ ಎಕ್ಸ್‌ಪೀರಿಯನ್ಸ್ ಆಗಿರ್ಬೇಕು.

ದಿ: ಒಂದ್ವೇಳೆ ಮುಂದೆ ನೀವು ಇನ್‌ಸ್ಪೆಕ್ಟ್ ರ್ ಆದ್ರಿ ಅನ್ಕೊಂಡ್ರೆ, ನಿಮ್ಮ ಕೈಕೆಳಗೆ ಪುರುಷ ಪೋಲೀಸ್ ಪೇದೆಗಳು ಕೆಲ್ಸ ಮಾಡ್ತಿರ್ತಾರೆ. ಅವರಿಗೆಲ್ಲಾ ನೀವು ಆರ್ಡ್‌ರ್ ಕೊಡ್ಬೇಕಾಗ್ತದೆ. ಆಗ ಅವ್ರು ಗಂಡಸ್ರು ಅನ್ನೋ ಕಾರಣದಿಂದ ನಿಮ್ಗೆ ಮುಜುಗರ ಆಗುತ್ತಾ?

ಮೀ: ನಮ್ಮ ಕೈಕೆಳಗೆ ಜೆಂಟ್ಸ್ ಇರೋದಿಲ್ಲ. ಇನ್‌ಸ್ಪೆಕ್ಟರ್ ಆದ್ರೂನು ನಮ್ಗೆ ಕೊಡೋದಿಲ್ಲ. ಯಾಕಂದ್ರೆ ಓನ್ಲಿ ಲೇಡೀಸ್ ಪೋಲಿಸ್ ಸ್ಟೇಷನ್‌ಗಳಿಗೆ ಹಾಕ್ತಾರೆ. ಆ ಪೋಲಿಸ್ ಸ್ಟೇಷನ್ ಡಿಸ್ಟ್ರಿಕ್ಟ್‌ಗೊಂದೇ ಆಗಿಲ್ಲ ಇನ್ನ. ಮುಂದೆ ಹೇಗೋ ಗೊತ್ತಿಲ್ಲ. ಈಗ ಸದ್ಯ ಜೆಂಟ್ಸ್ ಇಲ್ಲ. ಹಂಗೇನಾದ್ರು ಇದ್ರೆ ಮುಜುಗರ ಪಡೋದಿಲ್ಲ ಕೆಲ್ಸ ಹೇಳೋಕೆ.

ದಿ: ಇದುವರೆಗೆ ನಮ್ಮ ಸಮಾಜದಲ್ಲಿ ಹಲವು ಕ್ಷೇತ್ರಗಳಿಗೆ ಮಹಿಳೆಯರಿಗೆ ಪ್ರವೇಶ ಇರ್ಲಿಲ್ಲ. ಆದ್ರೆ ಈಗ ಎಲ್ಲಾ ಕಡೆ ಮಹಿಳೆಯರು ಪ್ರವೇಶ ಪಡೀತಿದ್ದಾರೆ ಮತ್ತು ಅವರೂ ಕೂಡ ಪುರುಷರಷ್ಟೇ ಸಾಮರ್ಥ್ಯವನ್ನು ತಮ್ಮ ಕೆಲಸಗಳಲ್ಲಿ ತೋರ್ಸಿದಾರೆ. ಈ ಹೊತ್ತಲ್ಲಿ ನಿಮ್ಗೆ ಸಮಾಜ ಇದುವರೆಗೆ ಸ್ತ್ರೀಯರ ಮೇಲೆ ಹೇರಿದ ನಿರ್ಬಂಧಗಳ ಬಗ್ಗೆ ಏನು ಅನ್ಸುತ್ತೆ.

ಮೀ: ತಪ್ಪನ್ಸುತ್ತೆ. ಮನೇಲಿ ತಿದ್ದಿ ಹೇಳ್ಬೇಕು ಏನಾಗಲ್ಲ ಮುಂದುವರೀರೀಂತ. ಇದಿಲ್ಲಾಂದ್ರೆ ಇದುಬಿಟ್ಟು ಇನ್ನೊಂದು ಕೆಲ್ಸಾಂತ. ಹಳ್ಳಿ ಆಗಲಿ ಸಿಟಿ ಆಗಲಿ ತಂದೆ ತಾಯಿ ಇರ್ತಾರಲ್ಲ ಹೇಳ್ಬೇಕು. ಹೆಣ್ಮಕ್ಕಳು ಏನಾದರಾಗಲೀ ನುಗ್ಗಿ ಮಾಡ್ತಿರ್ಬೇಕು. ನಿಮ್ ಕಾಲ್ಮೇಲೆ ನೀವು ನಿಂತ್ಕೊಂಡ್ರೆ ನಿಮ್ಮ ಬಾಳು ಚೆನ್ನಾಗಿರುತ್ತೆ, ದುಡ್‌ಕಂಡ್ ತಿನ್ಬೊಹುದೂಂತ ಹೇಳ್ಬೇಕು. ತಪ್ಪೇನಿಲ್ಲ.

ದಿ: ಒಬ್ಬ ಸಾಮಾನ್ಯ ಸ್ತ್ರೀಗಿಂತ ನಿಮ್ಮ ತರ ಕೆಲಸಕ್ಕೆ ಸೇರಿದ ಸ್ತ್ರೀಯರಿಗೆ ಸಮಾಜದ ಹಲವು ಮುಖಗಳ ಪರಿಚಯ ಆಗಿರುತ್ತೆ. ಯಾಕಂದ್ರೆ ಮನೆ ವಾತಾವರಣಕ್ಕಷ್ಟೇ ಸೀಮಿತಗೊಂಡಿರೋಲ್ಲ. ಈ ತರದ ಆರ್ಥಿಕ ಸ್ವಾವಲಂಬನೆಯ ಸ್ಥಿತಿ ನಿಮಗೆ ಖುಶಿ ಕೊಟ್ಟಿದೆಯಾ?

ಮೀ: ತುಂಬಾ ಖುಶಿಕೊಟ್ಟಿದೆ.

ದಿ: ನಿಮ್ಮ ಹೆಣ್ಮಕ್ಕಳನ್ನು ಈ ತರ ಸಾಂಪ್ರದಾಯಿಕ ಸಮಾಜದಿಂದ ಹೊರಗೆ ಕಳಿಸ್ತೀರಾ? ಯಾವ ನೌಕರಿ ಸಿಕ್ಕಿದ್ರೂನೂ?

ಮೀ: ಯಾವ್ದಾದ್ರೂ ನೌಕರಿಯಾದ್ರು ಸರಿ ಕಳಿಸ್ತೀವಿ. ದುಡ್ಕೊಂದು ತಿನ್ನೋಕೆ ಯಾವ ನೌಕರಿ ಆದ್ರೆ ಏನು?

ದಿ: ಅಕಸ್ಮಾತ್ ನಿಮ್ಮ ಮಗಳು ಸಣ್ಣ ವಯಸ್ಸಲ್ಲೇ ಮದ್ವೆ ಆಗ್ತೀನೀಂದ್ರೆ? ಮದ್ವೆ ಮಾಡ್ತೀರಾ?

ಮೀ: ಚಿಕ್ಕವಯಸ್ಸಲ್ಲೇ ಮದ್ವೆ ಮಾತ್ರ ಮಾಡದಿಲ್ಲ. ಓದಿಸ್ತೀವಿ, ಹೇಳ್ತೀವಿ ತಿಳಿಸೇಳ್ತೀವಿ. ಈಗ್ಲೆ ಬೇಡ ಜೀವನ ಹಾಳಾಗುತ್ತೆ ಮನೆ, ಮಕ್ಕಳು, ಸಂಸಾರದ ಜಂಜಾಟ ಬೇಡಾಂತ ಹೇಳ್ತೀವಿ.

ದಿ: ನೀವು ಕೆಲಸದ ಮೇಲೆ ಬೇರೆ ಬೇರೆಕಡೆ ಹೋಗೋದಿರುತ್ತೆ. ಸಂಜೆ ಮನೆಗೆ ಹೋದಾಗ ಮನೇಲಿ ಕೇಳ್ತಾರ ಎಲ್ಲಿಗೋಗಿದ್ದೆ ಏನೂಂತ?

ಮೀ: ನಾವೇ ಅವರಿಗೆ ಇಷ್ಟಪಟ್ಟು ಹೇಳ್ತೀವಿ.

ದಿ: ಪ್ರತಿದಿನ ಹೇಳ್ತೀರಾ?

ಮೀ: ಡೈಲಿ ಹೇಳ್ತೀವಿ.

ದಿ: ಯಾಕೆ?

ಮೀ: ಅದೇನೋ ಆಸಕ್ತಿ ಹೆಳ್ಬೇಕೂಂತ. ಎಲ್ಲಾ ವಿಷಯ ಹೇಳ್ಬೇಕು ನಾವು. ಅಲ್ಲಿ ವಿಚಾರಾನ್ನ ಅವ್ರು ತಿಳ್ಕೋಬೇಕು.

ದಿ: ನೀವು ಕೇಳ್ತೀರಾ ಅವರನ್ನ?

ಮೀ: ಹೌದು ಕೇಳ್ತೀವಿ. ಪ್ರತಿಯೊಂದನ್ನು ಅವರೂ ಹೇಳ್ಬೇಕು. ಪ್ರತಿಯೊಂದನ್ನು ನಾವೂ ಹೇಳ್ತೀವಿ.

ದಿ: ನೀವು ಡಿಪಾರ್ಟಮೆಂಟ್ ಹೊರಗೆ ಏನಾದರೂ ಸಾಧಿಸ್ಬೇಕೂಂತ ಆಸೆ ಇದೆಯಾ? ಅಂದ್ರೆ ಇದುವರೆಗೆ ಸಮಾಜದ ಎಲ್ಲ ಕಾರ್ಯಗಳನ್ನು ನಿಭಾಯಿಸುತ್ತಿದ್ದೋರು ಪುರುಷರು. ಅವರೇ ಸಮಾಜದ ಎಲ್ಲಾ ಕಾರ್ಯಗಳನ್ನು ನಿಭಾಯಿಸುತ್ತಿದ್ದೋರು. ಆ ತರದ ಸ್ಥಾನಗಳಲ್ಲಿ ನಿಂತು ಸಮಾಜದ ಮುಖ್ಯ ಭಾಗವಾಗಿ ಸ್ತ್ರೀ ಇರೋಹಾಗೆ ಮಾಡ್ಬೇಕೂ ಅಂತ ಕನಸಿದೆಯಾ?

ಮೀ: ನಾವು ಮಾಡ್ತೀವಿ. ಆ ಇದಿದೆ. ಆ ಸಮಸ್ಯೇನ್ನ ಬಗೆಹರಿಸ್ತೀವನ್ನೋ ಧೈರ್ಯ ಇದೆ.

ದಿ: ಕೊನೆಯ ಪ್ರಶ್ನೆ. ನಿಮ್ಗೆ ಈ ಕೆಲಸಕ್ಕೆ ಸೇರಿದ್ಮೇಲೆ ಆತ್ಮವಿಶ್ವಾಸ ಹೆಚ್ಚಾಗಿದೆ ಅಂದ್ಕೊಂಡಿದೀನಿ. ಆ ತರದ ಹುಮ್ಮಸ್ಸು ನಿಮಗೆ ರಾಷ್ಟ್ರ ಅಥವಾ ರಾಜ್ಯಮಟ್ಟದಲ್ಲಿ ಸಾಧನೆ ಮಾಡೋಕೆ ಕಾರಣವಾಗುತ್ತಾ?

ಮೀ: ಸಾಧನೆ ಮಾಡೋ ಆಸೆ ಇದೆ. ಜೊತೆಗೆ ಬಂದ್ರೆ ಮಾಡ್ತೀವಿನ್ನೋ ಧೈರ್ಯಾನು ಇದೆ. ಕಷ್ಟ ಅಂತ ಅನ್ನೊಲ್ಲ. ಈ ಡಿಪಾರ್ಟಮೆಂಟ್ ಸೇರಿದ್ಮೇಲೆ ಅಷ್ಟು ಅನುಭವ ಆಗಿದೆ.

**ಎಂ.ಕೆ.ಶ್ರೀನಿವಾಸ್ ಜೊತೆ.**

ದಿ: ನೀವು ಪೋಲಿಸ್ ಕಾನ್‌ಸ್ಟೇಬಲ್ ಆಗೋಕೆ ಚಿಕ್ಕಂದಿನಿಂದಲೂ ಆಸೆ ಇತ್ತಾ?

ಶ್ರೀ: ಎಸ್.ಎಸ್.ಎಲ್.ಸಿ. ಓದ್ಬೇಕಾದ್ರೆ ಆತರದ ಆಸೆ ಇತ್ತು ಸಾರ್. ಈ ಪೋಲಿಸರನ್ನು ನೋಡಿ ಹಂಗನ್ನಿಸ್ತಾ ಇತ್ತು. ಆಮೇಲೆ ನಾನು ಕೆ.ಇ.ಬಿ.ಗೆ. ಟ್ರೈ ಮಾಡ್ದೆ. ನಮ್ಮ ತಂದೆ

ಕೆ.ಇ.ಬಿ. ನಲ್ಲಿದ್ರು ಸಾರ್. ಆದರೆ ಕೆಲಸ ಸಿಕ್ಲಿಲ್ಲ.

ದಿ: ಅಂದರೆ ಪೋಲಿಸ್ ಕೆಲ್ಸ ಏನೂ ಬಯಸಿ ಬಂದ ಫೀಲ್ಡ್ ಅಲ್ಲ.

ಶ್ರೀ: ಹೌದು ಸಾರ್. ಉದ್ಯೋಗ ಬೇಕಿತ್ತು ಬಂದೆ.

ದಿ: ನಿಮ್ಮ ಆರಂಭಿಕ ಶಿಕ್ಷಣಕ್ಕೆ ಮನೇಲಿ ಯಾವತರ ಪ್ರೋತ್ಸಾಹ ಇತ್ತು?

ಶ್ರೀ: ತುಂಬ ಪ್ರೋತ್ಸಾಹ ಕೊಟ್ರು. ನಾನು ಮೂರು ವರ್ಷ ಹಳ್ಳೀಲಿ ಓದ್ದೆ. ಆಮೇಲೆ ಬೆಂಗಳೂರು ಹತ್ರ ಬಿಡದಿ ಅನ್ನೊ ಸ್ಥಳದಲ್ಲಿ ಹಾಸ್ಟಲ್‌ನಲ್ಲಿ ಓದಿದೆ.

ದಿ: ನಿಮಗೆ ಹೊಸಪೇಟೇಲಿ ಶಿಕ್ಷಣಕ್ಕೆ ಅನುಕೂಲ ಇದ್ರೂ, ಯಾಕೆ ನಿಮ್ಮನ್ನು ಬೆಂಗಳೂರಿಗೆ ಕಳಿಸಿದ್ರು?

ಶ್ರೀ: ನಾವಿದ್ದ ಏರಿಯಾ ಇತ್ತಲ್ಲ ಸಾರ್, ಅಲ್ಲಿ ನಮ್ತಂದೆ,ತಾಯಿಯರಿಗೆ ಸರಿ ಅನ್ನಿಸಲಿಲ್ಲ. ದೂರ ಇದ್ರೆ, ಹಾಸ್ಟೆಲ್ ನಲ್ಲಿ ಇದ್ರೆ. ಭಯ ಭಕ್ತಿ ಇರುತ್ತೆ. ಚೆನ್ನಾಗಿ ಬುದ್ದಿ ಕಲಿಸ್ತಾರೆ, ಓದು ಕಲಿಸ್ತಾರೆ ಅಂತ.

ದಿ: ನೀವು ಈ ಪೋಲಿಸ್ ಇಲಾಖೆಗೆ ಬಂದ್ಮೇಲೆ ಇಲಾಖೆಯ ಕೆಲಸ ಕಾರ್ಯಗಳು ಆರಂಭದಲ್ಲಿ ಯಾವ ತರದ ಅನುಭವ ನೀಡ್ತು?

ಶ್ರೀ: ನಮಗೆ ಹುಮ್ಮಸ್ಸು ಇತ್ತು ಸಾರ್, ಪೋಲಿಸ್ ಅನ್ನೋ ಹುಮ್ಮಸ್ಸು. ಬಟ್, ಭಯ ಅಂತೂ ಇದ್ದೇ ಇತ್ತು ಸಾರ್. ಒಂದೆರಡು ತಿಂಗಳು ಆದ್ಮೇಲೆ ಫುಲ್ ಎಲ್ಲಾ ತಯಾರಿನೂ ಹೇಳುದ್ರು ಸಾರ್.

ದಿ: ಇವಾಗ ಸ್ಟ್ರೈಕು, ಗಲಭೆ, ಅಂತ ಇದ್ದಾಗ ಇದುವರೆಗೆ ನಿಮ್ಗೆ ಯಾವ್ದೇ ತೊಂದ್ರೆ ಆಗಿಲ್ವಾ?

ಶ್ರೀ: ಭಯ ಇದ್ದೇ ಇರುತ್ತೆ ಸಾರ್. ಅವ್ರು ಕಲ್ ತಗೊಂಡು ಹೊಡೀಬಹುದು. ನಾವು ಲಾಠಿ ತಗೊಂಡು ಹೊಡೀಬಹುದು. ಅಂದ್ರೆ ನಾವು ಆರ್ಡರ್ ಎಂಗೆಂಗೆ ಪಾಸ್ ಮಾಡ್ತಾರೆ. ಅಂಗಂಗೆ ಹೋಗ್ತಾ ಇರ್ತೀವಿ ಸಾರ್. ನಮ್ಗೆಭಯ ಇದ್ದೇ ಇರ್ತದೆ. ಅಲ್ಲಿ ಜನ ಸೇರ್ದಂಗೆಲ್ಲಾ.

ದಿ: ಈ ಇಲಾಖೆಗೆ ಸೇರ್ಬೇಕಾದ್ರೆ ಮನೇಲಿ.ನಿಮಗೆ ಯಾವ ತರ ಪ್ರೋತ್ಸಾಹ ಕೊಟ್ರು?

ಶ್ರೀ: ಫಸ್ಟ್ ಗೇನೋ ಕೊಟ್ರು ಸಾರ್. ಆಮೇಲೆ ಬರ್ತಾ ಬರ್ತಾ ನಾವು ಡ್ಯೂಟಿ ಮಾಡೋ ಟೈಮಿಂಗ್ ನೋಡಿ ಏನಪ್ಪ ನೀನು ಯಾವಾಗಾಂದ್ರೆ ಆವಾಗ ಬರ್ತಿ, ಯಾವಾಗಾಂದ್ರೆ ಆವಾಗ ಹೋಗ್ತಿ ಅಂತ ಈಗ್ಲು ಹೇಳ್ತಾರೆ ಸಾರ್ ಮನೇಲಿ.

ದಿ: ನಿಮ್ಮ ಹೆಂಡ್ತಿ ನೀವು ಲೇಟಾಗಿ ಹೋಗೋದ್ರ ಬಗ್ಗೆ ಏನ್ ಹೇಳ್ತಾರೆ?

ಶ್ರೀ: ಅಂದ್ರೆ ಅಡ್ಜಸ್ಟ್ ಮೆಂಟ್ ಆಗಿದೀವಿ ಸಾರ್, ನಮ್ಗೂ ಅವ್ರೂ, ಈವಾಗ ಹೆಂಗಂದ್ರೆ ಫಸ್ಟ್ ಏನೋ ಬೇಜಾರು ಮಾಡ್ಕೊಂಡ್ರು ಸಾರ್ ಸೇರ್ದಾಗ. ಆಮೇಲೆ ಹೇಳ್ದೆ ಸಾರ್ ಹೆಂಡ್ತೀಗೆ. ಪೋಲಿಸ್ ಡ್ಯೂಟೀಂದ್ರೆ ಹಿಂಗೇ ಇರೋದು. ಟೈಮ್ ಇರಲ್ಲ. ಇಪ್ಪತ್ನಾಕು ಗಂಟೆ, ಡ್ಯೂಟಿ ನಾವು ಆತರ ಪ್ರಮಾಣಮಾಡಿರ್ತೀವಿ. ಮೇಲಧಿಕಾರಿಗಳು ಯಾವಾಗ ಕರೆದ್ರು ಹೋಗ್ಬೇಕು ಅಂತ ಹೇಳ್ತೀವಿ.

ದಿ: ನಿಮ್ಮ ಮಗಳನ್ನು ಅವರಿಷ್ಟಪಟ್ಟಷ್ಟು ಓದಿಸ್ತೀರಾ?

ಶ್ರೀ: ಹೌದು ಓದಿಸ್ತೀವಿ.

ಸಂ: ಪೋಲಿಸ್ ಡಿಪಾರ್ಟಮೆಂಟ್ ತರ ಇದುವರೆಗೆ ಪುರುಷರೇ ಇದ್ದ ಡಿಪಾರ್ಟಮೆಂಟ್ ಗಳಿಗೆ ನಿಮ್ಮ ಮಗಳನ್ನು ನೌಕರಿ ಮೇಲೆ ಕಳಿಸ್ತೀರಾ?

ಶ್ರೀ: ಕಳಿಸ್ತೀವಿ ಸಾರ್. ಹೆಣ್ಮಕ್ಕಳನ್ನ ಪೋಲಿಸ್ ಡಿಪಾರ್ಟಮೆಂಟ್‌ಗೇ ಕಳಿಸ್ಬೇಕೂಂತ ಏನೂ ಇಲ್ಲ. ಅವರು ಆಸೆ ಪಟ್ಟರೆ ನಿರಾಸೆ ಮಾಡಲ್ಲ ಸಾರ್.

ದಿ: ಮಹಿಳೆಯರು ಪೋಲಿಸ್ ಪೇದೆಯಾಗಿ ನಿಮ್ಮ ಜೊತೆ ಬಂದಾಗ ನಿಮಗೆ ಏನು ಅನ್ನಿಸ್ತು?

ಶ್ರೀ: ಫಸ್ಟ್ ಬಂದಾಗ ಒಂದು ಟೈಪ್ ಇದಾಯ್ತು. ಯಾಕಂದ್ರೆ ನಮ್ಜೊತೆಗೆ ಇವರೇನ್ ಕೆಲ್ಸ ಮಾಡ್ತಾರೆ ಅಂತಿದ್ದೆ. ಆದ್ರೆ ಅವರು ನಮಗಿಂತ ಚೆನ್ನಾಗಿ ಕೆಲ್ಸ ಮಾಡ್ತಾರೆ ಸಾರ್. ಬರೆಯೋದಾಗ್ಲಿ ಏನಾಗ್ಲಿ. ಒಂದಂದ್ರೆ ರಾತ್ರಿ ಬೀಟ್ ಬಿಟ್ಟು ಬೇರೆ ಕೆಲ್ಸ ಎಲ್ಲಾ ಮಾಡ್ತಾರೆ ಸಾರ್. ಟೈಪ್ ಮಾಡೋದಾಗ್ಲಿ. ಬರೆಯೋದಾಗ್ಲಿ, ಯಾವ್ದೇ ಕೆಲ್ಸ ಆದ್ರೂ ಚೆನ್ನಾಗಿ ಮಾಡ್ತಾರೆ. ಸ್ಟೇಷನ್‌ಗೆ ಬಂದ್ರೆ ನಾವೆಲ್ಲಾ ಒಂದೇ ಅನ್ನೋ ಭಾವನೆಯಿಂದ ಕೆಲ್ಸ ಮಾಡ್ತೀವಿ ಸಾರ್.

ದಿ: ನಿಮಗೆ ನಿಮ್ಮ ಸರ್ವೀಸ್‌ನಲ್ಲಿ ಛಾಲೆಂಜಿಂಗ್ ಆದ ಪ್ರಸಂಗ ಯಾವ್ದಾದ್ರು ಎದುರಾಗಿದೆಯಾ? ಆದರಲ್ಲಿ ನಿಮಗೆ ತೃಪ್ತಿ ಕೊಟ್ಟಿದೆಯಾ?

ಶ್ರೀ: ಇದೇ ವರ್ಷ ಇಲ್ಲೇ ಗಲಾಟೆ ಆಯ್ತು ಸಾರ್ ಕಮಲಾಪುರದಲ್ಲಿ. ಸ್ಟೇಷನ್‌ನಲ್ಲಿ ಒಬ್ನೆ ಇದ್ದೆ. ಮಹಿಳಾ ಪೇದೆಗಳು ಮೂವರು ಇದ್ದರು. ಇಲ್ಲೇನಪಾ ಅಂದ್ರೆ ಒಬ್ಬೊರಿಗೊಬ್ಬರು ಹೊಡೆದಾಟ ಮಾಡ್ಕೊಂಡು ಸ್ಟೇಷನ್‌ಗೆ ಬರ್ತಾರೆ. ಅವರು ಒರಟಾಗಿ ಬಂದು ನಮ್ಮೇಲೆ ಬೀಳ್ಬಹುದು. ನಮಗೆ ಭಯಾಂತೂ ಇತ್ತು ಸಾರ್ ಅವತ್ತು. ಯಾಕಂದ್ರೆ ಅವರು ಬಂದು ನುಗ್ಗಬಹುದು ಸ್ಟೇಷನ್‌ಗೆ. ಮಹಿಳಾ ಪೇದೆಗಳಿಂದ ನನಗೆ ಧೈರ್ಯ ಬಂತು ಸಾರ್. ನಾನೊಬ್ನೆ ಇದ್ರೆ ಧೈರ್ಯ ಕಮ್ಮಿ ಆಗ್ತಿತ್ತೇನೋ. ಮಹಿಳಾ ಪೇದೆಗಳು ಇದ್ರಲ್ಲಾ ಅದರಿಂದ ಸ್ವಲ್ಪ ಧೈರ್ಯ ಬಂತು ಸಾರ್ ನನಗೆ.

ದಿ: ಅವರೇನು ಅಂಜಿ ಕೊಳ್ಳಲಿಲ್ಲವಾ?

ಶ್ರೀ: ಅವರೇನು ಅಂಜಿಕೊಳ್ಳಲಿಲ್ಲಾ ಸಾರ್. ಅವರೇ ನನಗೇ ಪ್ರೊತ್ಸಾಹ ಕೊಟ್ರು.

ದಿ: ಈ ಸಮಾಜದಲ್ಲಿ ಎಲ್ಲಾ ಕ್ಷೇತ್ರದಲ್ಲಿ ಮಹಿಳೆ ಪ್ರವೇಶ ಪಡೀತಿದಾಳೆ. ನೀವು ಈ ಬೆಳವಣಿಗೆಯನ್ನು ಯಾವ ರೀತಿ ಸ್ವೀಕರಿಸ್ತೀರಿ?

ಶ್ರೀ: ಖುಶಿಯಿಂದ ಸ್ವೀಕರಿಸ್ತೀವಿ ಸಾರ್. ಈದೇಶ ಬೆಳೀತಾ ಹೋಗ್ತಿದ್ದಂಗೆಲ್ಲಾ ಈ ಕೆಲವೊಂದು ಆಧುನಿಕರಣಗಳೆಲ್ಲಾ ಮುಂದುಕ್ಕೆ ಬರ್ತಾವೆ ಸಾರ್. ಅದು ಗಂಡು ಹೆಣ್ಣು ಸೇರಿಯೇ ಆಗ್ತಿದೆ ಸಾರ್. ಗಂಡಸರಿಂದಾಗದ ಕೆಲಸವನ್ನು ಹೆಣ್ಣು ಮಾಡ್ತಾ ಇದಾಳೆ ಸಾರ್. ನಮಗೆ ಖುಶಿನೇ ಸಾರ್. ಅವ್ರು ಮುಂದೆ ಬರ್ತಾ ಇರೋದು ಅವಳಿಗೆ ಜ್ಞಾನ ಇದೆ. ಬುದ್ಧಿಶಕ್ತಿ ಇದೆ. ದೇವರು ಕೊಟ್ಟಿದೆ. ಅವರು ಮೇಲೆ ಏರ್ತರೇಂದ್ರೆ ನಾವು

ಖುಶಿ ಪಡ್ಬೇಕು ಸಾರ್.

ಸಂದರ್ಶನಕ್ಕೆಂದು ಒಳಪ್ರವೇಶಿಸುವಾಗ ಹಿಂಜರಿಕೆ ತೋರಿದ್ದ ಮಹಿಳಾ ಪೇದೆಗಳು, ಬಹಳ ಧೈರ್ಯ ತೋರಿದ್ದ ಪುರುಷ ಪೇದೆಯೂ ಹಿಂದಿರುಗುವಾಗ ಪರಸ್ಪರ ವಿರುದ್ಧ ಗುಣದವರೆಂಬಂತೆ ಕಂಡುಬಂದರು. ಪೋಲಿಸ್ ಇಲಾಖೆಗೆ ಸೇರುವಾಗಿನ ಮುಜುಗರಗಳು, ಸೇರಿದ ನಂತರದ ಉತ್ಸಾಹ, ಕೆಲಸಕ್ಕೆ ಸೇರಿದ್ದೇ ದೊಡ್ಡದೆಂದು ತಿಳಿದುಕೊಂಡು ಇತರ ಎಲ್ಲಾ ಅಸಮಾನತೆಯನ್ನು ಒಪ್ಪಿಕೊಳ್ಳುವ ಮುಗ್ಧತೆ, ತನ್ನಂತೆ ಇತರರನ್ನು ಮುನ್ನಡೆಸಲಾಗದ ಅಸಹಾಯಕತೆ. ಈ ಎಲ್ಲವೂ ಸಂದರ್ಶನದಲ್ಲಿ ವ್ಯಕ್ತವಾಯಿತು. ಸಂದರ್ಶನದಲ್ಲಿ ನೇರವಾಗಿ ಹೇಳದಿದ್ದರೂ ಅನೇಕ ವಿಷಯಗಳನ್ನು ತಮ್ಮ ಮಾತಿನ ಹಿಂದೆ ಹೇಳಿದ್ದಾರೆ ಎಂದು ಕೊಂಡಿದ್ದೇನೆ. ನಾವು ಇಲ್ಲಿ ಓದಿಕೊಳ್ಳಬೇಕಾಗಿದ್ದು ಇದೇನೇ. ಮಹಿಳೆಯರ ಪ್ರತಿ ಮಾತಿನಲ್ಲಿ ಪುರುಷರನ್ನು ಕುರಿತ ಬಹುವಚನದ ರೂಪ, ಚುಟುಕಾದ ಉತ್ತರಗಳು ಹಾಗೂ ಪುರುಷನು ಎಗ್ಗಿಲ್ಲದೆ ಹೆಂಗಸರನ್ನು ಕುರಿತು ಏಕವಚನದಲ್ಲಿ ಮಾತನಾಡುವುದು ಇಂಥವೆಲ್ಲಾ ನಮ್ಮ ಸೂಕ್ಷ್ಮ ಓದಿನ ನೆರವಿಗೆ ಬರಬಹುದು.

ಅನುಭವ ಕಥನ

# ರಂಗಭೂಮಿಯ ಅಂಗಳದಲ್ಲಿ ಸುಭದ್ರಮ್ಮ ಮನ್ಸೂರ್ ಅವರು

ನಿರೂಪಣೆ : ಶೈಲಜಾ ಹಿರೇಮಠ

ಸುಭದ್ರಮ್ಮ ತನ್ನ ಹನ್ನೆರಡನೆಯ ವಯಸ್ಸಿಗೆ ಕೌಟುಂಬಿಕ ಜವಾಬ್ದಾರಿಯನ್ನು ಹೊತ್ತುಕೊಂಡು ರಂಗಪ್ರವೇಶಿಸುತ್ತಾಳೆಂದು ಹಡೆದ ತಾಯಿಯಾದ ಭಾಗ್ಯಮ್ಮನಿಗೆ ತಿಳಿದಿರಲಿಲ್ಲ. ಸುಭದ್ರಮ್ಮ ಮನ್ಸೂರ ಪಾತರದ ಕುಟುಂಬದಿಂದ ಬಂದವರು. ಅವರ ತಾಯಿ ಭಾಗ್ಯಮ್ಮ ಶತಮಾನಗಳ ಹಿಂದೆಯೇ ಸಾಮಾಜಿಕ ಕ್ರಾಂತಿಯನ್ನುಂಟು ಮಾಡಿದವಳು. ಬಳ್ಳಾರಿಯ ಕೋಟೆ ಮಲ್ಲಾರ್ಜುನ ದೇವಸ್ಥಾನದಲ್ಲಿ ಸಂಗೀತ ಸೇವೆ ಸಲ್ಲಿಸುತ್ತಿದ್ದ ತನ್ನ ತಾಯಿಯಿಂದ ಪಾತರದ ಸಂಪ್ರದಾಯವನ್ನು ಮುಂದುವರೆಸಿಕೊಂಡು ಹೋಗಲು ನಿರಂತರ ಒತ್ತಡ ಬರುತ್ತಿತ್ತು. ಅದನ್ನು ಧಿಕ್ಕರಿಸಿ ತಾನು ಮೆಚ್ಚಿದ ತನ್ನ ಸಂಗೀತಕ್ಕೆ ಪೇಟಿ ಸಾಥಿಯಾಗಿದ್ದ ಹುಡುಗನನ್ನು ಕೂಡಿಕೊಂಡಳು. ಅಂದಿನ ಸಾಮಾಜಿಕ ಪರಿಸರದಲ್ಲಿ ಅವಳದು ಸಾಂಪ್ರದಾಯಿಕ ವಿವಾಹ ನಡೆಯುವುದು ಕಠಿಣವಾಗಿತ್ತು. ವಿವಾಹವಾಗಲು ಸಮಾಜ ಅನುಕೂಲ ಕಲ್ಪಿಸದಿದ್ದರೂ ಮೆಚ್ಚಿದವನೊಂದಿಗೆ ನಂಬುಗೆಯ ಸಂಸಾರವನ್ನು ಹೂಡಿದಳು. ಮೂರು ಹೆಣ್ಣು ಮೂರು ಗಂಡು ಮಕ್ಕಳನ್ನು ಹೆತ್ತು ನೆಮ್ಮದಿಯಿಂದ ಇದ್ದಳು. ವಿಧಿಗೆ ಇದು ಹಿಡಿಸಲಿಲ್ಲವೇನೊ? ಒಲಿದು ಬಂದವನನ್ನು ಜೀವಸಮೇತ ಕಿತ್ತುಕೊಂಡಿತು. ಬ್ರಾಹ್ಮಣರಿಗೆ ಕನ್ಯತ್ವವನ್ನು ಮೀಸಲಿಡುವ ತನ್ನ ಕುಲ ಸಂಪ್ರದಾಯವನ್ನು ಧಿಕ್ಕರಿಸಿ ಒಲಿದವನೊಂದಿಗೆ ಸಂಸಾರಹೂಡಿದ ಭಾಗ್ಯಮ್ಮನಿಗೆ ಒಂಟಿಯಾಗಿ ಆರು ಮಕ್ಕಳ ಪೋಷಣೆ ಯನ್ನೊದಗಿಸುವ ಜವಾಬ್ದಾರಿ ಬಿತ್ತು. ತನ್ನ ಹನ್ನೆರಡನೇ ವಯಸ್ಸಿಗೆ ಸಂಗೀತ ಕಛೇರಿ ನಡೆಸಿ ಜನರನ್ನು ನಿಬ್ಬೆರಗಾಗಿಸಿದ ಅವಳಿಗೆ ಅದೇ ವಿದ್ಯೆಯಿಂದಲೇ ಸಂಸಾರ ನಡೆಸಬಹುದೆಂಬ ಆತ್ಮವಿಶ್ವಾಸವಿತ್ತು. ಹೀಗಾಗಿ ಅಲ್ಲಲ್ಲಿ ಸಂಗೀತ ಕಛೇರಿ ನಡೆಸಿದಳು. ನಿತ್ಯವೂ ಐದಾರು ಕುಟುಂಬಗಳಿಗೆ ಸಂಗೀತ ಪಾಠ ಹೇಳಿಕೊಟ್ಟಳು. ಆದರೆ ಆಕೆಯ ಶ್ರಮಕ್ಕೆ ದೊರೆತುದು ಅತ್ಯಲ್ಪ ದುಡ್ಡು. ಅಷ್ಟರಲ್ಲಿ ದೊಡ್ಡ ಗಾತ್ರದ ಸಂಸಾರವನ್ನು ಜಗ್ಗುವುದು ಬರುಬರುತ್ತಾ ಆಕೆಗೆ ಕಷ್ಟವೆನಿಸಿತು. ದಿನದಿನಕ್ಕೆ ಬೆಳೆಯುತ್ತಾ ಬಂದ ಮಕ್ಕಳ ಅಗತ್ಯವನ್ನು ಪೂರೈಸುವುದು ಸವಾಲಾಗಿ ಪರಿಣಮಿಸಿತು. ಆರನೆಯ ಇಯತ್ತೆಯವರೆಗೆ ಶಿಕ್ಷಣ ಪಡೆದು ಸೊಗಸಾಗಿ ಬೆಳೆದು ನಿಂತ ಸುಭದ್ರಮ್ಮ ಬಣ್ಣ ಹಚ್ಚಿಕೊಂಡು ಬದುಕ ಬವಣೆಗಳನ್ನು ಕಡಿಮೆ ಮಾಡಿಯಾಳು ಎಂದು ಕೊಂಡಳು. ತಡಮಾಡಲಿಲ್ಲ. ಬಳ್ಳಾರಿಯಲ್ಲೇ ಇದ್ದ ಸುಮಂಗಲಿ ನಾಟಕ ಕಂಪನಿಗೆ

ಆ ಪೋರಿಯನ್ನು ಕರೆದುಕೊಂಡು ಹೋದಳು. ಹನ್ನೆರಡರ ಎಳೆಪ್ರಾಯದ ಪುಟ್ಟ ಹುಡುಗಿ ಬದುಕಿಗಾಗಿ ಬಣ್ಣ ಹಚ್ಚಿಕೊಂಡಿತು. ಪ್ರಪ್ರಥಮವಾಗಿ ಟಿಪ್ಪು ಸುಲ್ತಾನ ನಾಟಕದಲ್ಲಿ ಚೆನ್ನಿ ಪಾತ್ರವನ್ನಾಡಿ ಭೇಷ್ ಎನಿಸಿಕೊಂಡಳು. ಅಂದಿನಿಂದ ಕಲಾಬದುಕಿನಲ್ಲಿ ಅವಳು ಹಿನ್ನೆಡೆಯನ್ನು ಕಾಣಲೇ ಇಲ್ಲ.

ಸುಭದ್ರಮ್ಮನವರು ಮಾಸ್ತರ ಹಿರಣ್ಣಯ್ಯ, ಏಣಗಿ ಬಾಳಪ್ಪ ಮೊದಲಾದವರ ಕಂಪನಿಗಳಲ್ಲಿ ದುಡಿದರು. ಸುಭದ್ರಮ್ಮನವರ ಕಲಾ ಪ್ರತಿಭೆ ಕಂಪನಿಯ ಮಾಲಿಕರಿಗೆ ಅಸೂಯೆಯನ್ನುಂಟು ಮಾಡಿತು. ರಕ್ತ-ರಾತ್ರಿಯಲ್ಲಿಯ ದ್ರೌಪದಿ, ಹರಿಶ್ಚಂದ್ರದಲ್ಲಿಯ ತಾರಾಮತಿ ಪಾತ್ರಗಳೂ ಜನಮನವನ್ನು ಗೆದ್ದವು. ಕಂಪನಿಮಾಲಿಕರ ಅಸೂಯೆಯ ಕಿರುಕುಳಗಳನ್ನು ತಾಳಲಾರದೆ ಮರಳಿ ಬಳ್ಳಾರಿಗೆ ಬಂದರು. ಬಳ್ಳಾರಿಯ ಸುತ್ತಮುತ್ತಲಿನ ಹಳ್ಳಿಯ ಜನತೆ ಅವರ ಕಲೆಯನ್ನು ಗೌರವಿಸಿದರು. ಕಂಪನಿ ಬಿಟ್ಟು ಬಂದ ಅವರಿಗೆ ಹನ್ನೆರಡೂ ತಿಂಗ್ಳೂ ಪ್ರೀತ್ಯಾದರದಿಂದ ಕರೆದು ನಾಟಕವಾಡಿಸಿ ಅವರ ಬದುಕಿಗೆ ಒಂದು ನೆಲೆಯನ್ನೊದಗಿಸಿದರು. ಅವರ ಪ್ರೀತಿ ಅಭಿಮಾನಗಳ ಮಹಾಪೂರದಲ್ಲಿಯೇ ಸುಭದ್ರಮ್ಮ ಕರ್ನಾಟಕದ ವೃತ್ತಿರಂಗಭೂಮಿಯ ಶ್ರೇಷ್ಠಕಲಾವಿದೆಯಾಗಿ ಬೆಳೆದು ನಿಂತಿದ್ದಾರೆ. ಅವರು ಆ ಎತ್ತರವನ್ನು ಸುಲಭವಾಗಿ ಏರಿಲ್ಲ. ಅವರ ಸಾಧನೆಯ ಹಾದಿ ಅಷ್ಟು ಸುಲಭವಾಗಿರಲಿಲ್ಲ. ನಾಟಕವಾಡಲು ಒಪ್ಪಿಕೊಂಡ ಊರುಗಳಿಗೆ ಹೋಗುವ ಸಂದರ್ಭದಲ್ಲಿ ಬಸ್ ನಿಲ್ದಾಣದಲ್ಲಿ ಅನೇಕ ಹಿಂಸೆಗಳನ್ನು ಅನುಭವಿಸಿದರು. ಅದೆಷ್ಟೋ ಬಾರಿ ಹೊಟ್ಟೆಯನ್ನು ಉಪವಾಸ ಹಾಕಿ ಬದುಕಿನ ಮೂಲಭೂತ ಅಗತ್ಯಗಳಿಗಾಗಿ ಪರದಾಡಿದರು. ಕೌಟುಂಬಿಕ ಬದುಕಿನಲ್ಲೂ ಅನೇಕ ಏರುಪೇರುಗಳನ್ನು ಕಂಡರು. ಈ ಎಲ್ಲ ಕಠಿಣ ಸವಾಲುಗಳನ್ನು ಗೆದ್ದಿದ್ದರಿಂದಲೇ ಅವರು ಇಂದು ಈ ಉತ್ತುಂಗದಲ್ಲಿದ್ದಾರೆ. ಕಲಾರಂಗದಲ್ಲಿ ಅದೂ ಈ ಬಣ್ಣದ ಪ್ರಪಂಚದಲ್ಲಿ ಯಶಸ್ಸು ಎನ್ನುವುದು ಅಷ್ಟು ಸುಲಭವಾಗಿ ದೊರೆಯುವುದಿಲ್ಲ.

ಯಾವ ಸಮಾಜದಲ್ಲಿ ಬಣ್ಣ ಹಚ್ಚಿಕೊಂಡ ಕಾರಣಕ್ಕಾಗಿಯೇ ಅಪಮಾನಗಳನ್ನು ನೋವುಗಳನ್ನು ಅನುಭವಿಸಿದರೋ, ಇಂದು ಆ ಬಣ್ಣದಿಂದಾಗಿಯೇ ಅದೇ ಸಮಾಜದಲ್ಲಿ ಗೌರವಿಸಲ್ಪಡುತ್ತಿದ್ದಾರೆ. ವೃತ್ತಿರಂಗಭೂಮಿ ಮುಂದೊಂದು ಕಾಲಕ್ಕೆ ತಮಗೆ ಇಂತಹ ಒಳ್ಳೆಯ ಹೆಸರು ತಂದೀತೆಂದು ಸ್ವತಃ ಸುಭದ್ರಮ್ಮನವರೇ ಎಣಿಸಿರಲಿಲ್ಲ. ಇಡೀ ಜೀವನವನ್ನು ಕಲೆಗಾಗಿ ತೇಯ್ದ ಅವರಿಗೆ ಆ ಕಲೆಯೇ ಬದುಕಾಗಿದೆ, ಉಸಿರಾಗಿದೆ. ೭-೧೨-೯೯ರಂದು ಬೆಳಗಿನ ಹನ್ನೊಂದು ಗಂಟೆಯಿಂದ ಸಾಯಂಕಾಲದ ಮೂರು ಗಂಟೆಯವರೆಗೆ ಅವರ ಜೊತೆ ಅನೇಕ ಬಗೆಯ ಮಾತುಕತೆ, ಚರ್ಚೆ ನಡೆಸಿದೆನು. ಅವುಗಳಲ್ಲಿ ಮುಖ್ಯ ಎನಿಸಿದ ಕೆಲವು ಭಾಗಗಳನ್ನು



ಓದುಗರ ಜೊತೆ ಹಂಚಿಕೊಳ್ಳುವುದು ಸೂಕ್ತ ಎನಿಸಿ ತಮ್ಮ ಮುಂದೆ ನಿರೂಪಿಸುತ್ತಿದ್ದೇನೆ.

ನಿಮ್ಮ ಬಾಲ್ಯ ನಿಮ್ಮ ರಂಗಭೂಮಿಯ ಸಾಧನೆಗೆ ಎಷ್ಟು ಪೂರಕ?

ಕೌಟುಂಬಿಕವಾಗಿ ನನಗಾವ ರಂಗಭೂಮಿಯ ಹಿನ್ನೆಲೆಯಿರಲಿಲ್ಲ. ನನ್ನ ತಾಯಿ ಪಾತರದವರು. ನನ್ನ ಹತ್ತನೆಯ ವಯಸ್ಸಿಗೆ ನನ್ನ ತಂದೆ ತೀರಿಹೋದರು. ನನ್ನ ತಾಯಿಗೆ ಆರು ಜನ ಮಕ್ಕಳನ್ನು ಕಟ್ಟಿಕೊಂಡು ಸಂಸಾರ ಜಗ್ಗುವುದು ಕಷ್ಟವಾಯ್ತು. ಎರಡು ವರ್ಷಗಳವರೆಗೆ ನಿರಂತರ ಕಷ್ಟಪಟ್ವಿ. ಈ ಸಂದರ್ಭದಲ್ಲಿ ಲಿಂಗರಾಜ ಮನ್ನೂರರು ನಮ್ಮ ಕುಟುಂಬಕ್ಕೆ ಸಹಾಯ ಮಾಡುವ ಮೂಲಕ ನಮಗೆ ಹತ್ತಿರವಾದರು. ಅವರೂ ನಾಟಕ ಮಾಡುತ್ತಿದ್ದರು. ಒಂದರ್ಥದಲ್ಲಿ ತಾಯಿಯನ್ನೊಳಗೊಂಡಂತೆ ಅಣ್ಣ, ತಂಗಿ, ತಮ್ಮಂದಿರನ್ನು ಸಾಕುವ ಜವಾಬ್ದಾರಿ ನನ್ನ ಮೇಲೆಯೇ ಬಿತ್ತು. ಹೀಗಾಗಿ ರಂಗಭೂಮಿಯನ್ನು ಪ್ರವೇಶಿಸಿದೆ. ಹೊಟ್ಟೆಗಾಗಿ ಬಣ್ಣ ಹಚ್ಚುವುದು ಅನಿವಾರ್ಯವಾಗಿತ್ತು.

**ಬಾಲ್ಯದಲ್ಲಿ ನೀವೇನಾಗಬೇಕೆಂದು ಕನಸು ಕಂಡದ್ದು?**

ದೊಡ್ಡ ಸಂಗೀತಗಾರಳಾಗುವ ಕನಸು ಇತ್ತು. ನನ್ನ ತಾಯಿ ದಕ್ಷಿಣಾದಿ ಸಂಗೀತದಲ್ಲಿ ಪರಿಣತಳು. ಆದರೆ ನನಗೆ ಹಿಂದೂಸ್ತಾನಿ ಸಂಗೀತದ ಬಗ್ಗೆ ಬಹಳ ಹುಚ್ಚಿತ್ತು. ನಾನೇದರೂ ಸಂಗೀತದ ಕುರಿತು ಆಸಕ್ತಿ ತೋರಿಸಿದರೆ ನನ್ನ ತಾಯಿ ಗದರಿಸಿ ಸುಮ್ಮನಾಗಿಸುತ್ತಿದ್ದರು "ಇದಕ್ಕ ನನ್ನದ ಕೊನಿ ತಲೆಮಾರಾಗಿರ್ಲಿ. ನೀವು ಕಲಿಯುವ ಅಗತ್ಯವಿಲ್ಲ" ಎನ್ನುತ್ತಿದ್ದರು. ಪಾತರ ಸಂಪ್ರದಾಯವನ್ನು ಅವರು ಇಷ್ಟಪಡುತ್ತಿರಲಿಲ್ಲ. ಆಗ ನಮ್ಮ ಜನಾನಾ. ಸಂಗೀತ ಕಲಿತಿದ್ದರಲ್ಲಾ? ಅದಕ್ಕ ನಮ್ಮ ತಾಯಿ ಸಂಗೀತ ಕಲಿಯಲು ಅವಕಾಶ ನೀಡಲಿಲ್ಲ. ಅದ್ರೂ ನನಗೆ ಸಂಗೀತದ ಹುಚ್ಚು ಬಿಡಲಿಲ್ಲ. ನಮ್ಮ ತಾಯಿ ನನ್ನನ್ನು ಕಾಫಿ ತರಲು ಹೊಟೇಲಿಗೆ ಕಳುಹಿಸುತಿದ್ದಳು. ಆಗ ತಾನೆ ಗ್ರಾಮೋಫೋನಗಳು ಬಂದಿದ್ದವು. ಅಲ್ಲಿ ಹಾಡುಗಳನ್ನು ಹಾಕಿರುತಿದ್ದರು. ಹಾಡುಗಳನ್ನೆಲ್ಲ ಕೇಳಿ ಮನೆಗೆ ಕಾಫಿ ತರುತ್ತಿದ್ದೆ. ತಡವಾಗಿ ಬಂದದ್ದಕ್ಕೆ ತಾಯಿಯಿಂದ ಬೈಗುಳ-ಒಡತ ತಪ್ಪುತ್ತಿರಲಿಲ್ಲ. ಬಡಿಸಿಕೊಂಡು ನಂತರ ತಂಗಿ, ತಮ್ಮಂದಿರನ್ನು ತೊಡೆಮೇಲೆ ಹಾಕಿಕೊಂಡು ಬೆನ್ನುಚಪ್ಪರಿಸುತ್ತಾ ಅದಾಗಲೇ ಕೇಳಿ ಬಂದ ಹಾಡುಗಳನ್ನು ಗುಣಗುಣಿಸುತ್ತಿದ್ದೆ. ನಾನು ಅತಿ ಚಿಕ್ಕವಳಿದ್ದಾಗ ನನ್ನ ತಂದೆ ಇಷ್ಟಪಟ್ಟಾಗ ನನ್ನ ತಾಯಿ ಹಾಡುತ್ತಿದ್ದಳು. ಅದನ್ನ ಕೇಳ್ತಾನೇ ಮಲಗ್ತಿದ್ದೆ. ಆದರೆ ಆಗ ನನಗೆ ಸಂಗೀತದ ಕಲ್ಪನೆ ಇರಲಿಲ್ಲ.

**ರಂಗನಟಿಯಾಗಿ ಹೆಸರಿದ್ದಂತೆ ರಂಗಗಾಯಕಿಯಾಗಿ ಪ್ರಸಿದ್ಧರಾಗಿರುವಿರಿ. ಏಕಕಾಲದಲ್ಲಿ ನಾಟಕ ಮತ್ತು ಸಂಗೀತ ಕ್ಷೇತ್ರದಲ್ಲಿ ನಿಮ್ಮನ್ನು ನೀವು ಹೇಗೆ ತೊಡಗಿಸಿಕೊಂಡಿರಿ?**

ನಾಟಕದ ಪೂರ್ವತಯಾರಿಯಲ್ಲೇ ನನ್ನ ಬದುಕಿನ ಹೆಚ್ಚಿನ ವೇಳೆ ಕಳೆಯಿತು. ರಂಗಾಭಿನಯದಲ್ಲಿ ನನ್ನನ್ನು ಪೂರ್ಣ ಪ್ರಮಾಣದಲ್ಲಿ ಪಳಗಿಸಿದವರೆಂದರೆ ನನ್ನ ಕೈಹಿಡಿದ ಲಿಂಗರಾಜ ಮನ್ನೂರರು. ಇದರಲ್ಲೆ ಬಿಡುವು ಸಿಕ್ಕಾಗಲೆಲ್ಲಾ ಹಾಡುತ್ತಿದ್ದೆ. ನಮ್ಮ ಕಂಪನಿಯಲ್ಲಿದ್ದ ಜಂಬಣ್ಣ ಮಾಸ್ತರು ಮೊದಲು ನನಗೆ ಸಂಗೀತ ಕಲಿಸಿದವರು. ಅವರು ನನ್ನ ರಾಗವನ್ನು ಕೇಳಿದ ತಕ್ಷಣ ಮತ್ಸರದ ಇರಿಸುಮುರಸನ್ನು ತೋರಿಸುತ್ತಿದ್ದರು. ಸಂಗೀತ

ಕಲಿತ ಮೇಲೆ ನೀನು ಮಲ್ಲಿಕಾರ್ಜುನ ಮನ್ಸೂರರ ಹೆಸರ ಹೇಳದಿದ್ರೆ ಹೇಗೆ? ಎಂದು ತಳಬುಡವಿಲ್ಲದ ಪ್ರಶ್ನೆ ಹಾಕುತ್ತಿದ್ದರು. ಎಷ್ಟು ದುಂಬಾಲ ಬಿದ್ದರೂ ಅವರು ಹೇಳಿಕೊಡಲಿಲ್ಲ.

ನನಗೆ ಸಂಗೀತದ ನಿಜವಾದ ಅರಿವು ಮಾಡಿಸಿದವರು ಚಂದ್ರಶೇಖರ ಗವಾಯಿಗಳು. ನನಗಾಗ ಇಪ್ಪಾತ್ತಾರು ವರ್ಷ ವಯಸ್ಸಿರಬಹುದು. ಬಳ್ಳಾರಿಯಲ್ಲಿ ನೆಲೆ ನಿಂತ ಮೇಲೆ ಅವರು ನನಗೆ ದೊರೆತರು. ಅವರು ಬಹಳ ಅಂತಃಕರಣದಿಂದ ಕಲಿಸಿದರು. ಶಾಸ್ತ್ರೀಯ ಸಂಗೀತದ ವಿದ್ಯೆ ನನ್ನ ತಲೆಗಿಳಿಯಲಿಲ್ಲ. ಬದುಕಿಗಾಗಿ ಬಣ್ಣ ಹಚ್ಚಿಕೊಂಡ ನನ್ನಲ್ಲಿ ಶಾಸ್ತ್ರೀಯ ಸಂಗೀತ ಕಲಿಯುವ ವ್ಯವಧಾನ ಇರಲಿಲ್ಲ. ಕಂಠದುಡಿಸಲು ವೇಳೆ ಸಿಗುತ್ತಲೇ ಇರಲಿಲ್ಲ. ಅದಕ್ಕಾಗಿ ಸರಳವಾಗಿ ಹಾಡಲು ಬರುವ ಭಾವಗೀತೆಗಳನ್ನು ಕಲಿಸಿದರು. ಈಗಲೂ ಪ್ರತಿದಿನ ಬಳ್ಳಾರಿಯ ಕಲಾಪ್ರೇಮಿಗಳ ಸಂಘಕ್ಕೆ ಹೋಗಿ ಸಂಜೆ ಆರು ಗಂಟೆಯಿಂದ ಎಂಟು ಗಂಟೆಯವರೆಗೆ ಸಂಗೀತದ ತಾಲೀಮು ಮಾಡುವೆ.

ಬಿಲಂಬಿತ ಏಕತಾಲರಾಗದ ಹಿಡಿತ ಈಗ ನನಗೆ ಸಿಕ್ಕಿದೆ. ಈ ರಾಗಕ್ಕಾಗಿ ಮೊದಲಿನಿಂದಲೂ ಪ್ರಯತ್ನಿಸುತ್ತಿದ್ದೆ. ಅದರ ಪ್ರವೇಶ ಈಗ ಸಿಕ್ಕಿದೆ. ಸಂಗೀತದಲ್ಲಿ ರಾಗಜ್ಞಾನ ಇರಬೇಕು. ನನಗೆ ಶಾಸ್ತ್ರೀಯವಾಗಿ ಹಾಡಲು ಬರದಿದ್ದರೂ, ಹಾಡುವವರ ರಾಗಗಳನ್ನು ಅರ್ಥಮಾಡಿಕೊಳ್ಳಲು ಈಗಲೂ ಸಂಗೀತ ಕಲಿಯುತ್ತಿರುವೆ. ಸಂಗೀತವನ್ನು ಪ್ರೀತಿಸಿದ್ದರೂ ಪ್ರೀತಿಸುತ್ತಿದ್ದರೂ ನನಗೆ ಜೀವ ದಾನ ಮಾಡಿದ್ದು ರಂಗಭೂಮಿಯೇ. ಅದಕ್ಕಾಗಿಯೇ ನನ್ನ ಜೀವನದ ದೀರ್ಘ ಅವಧಿಯನ್ನು ರಂಗಭೂಮಿಗೆ ಮೀಸಲಿಟ್ಟಿರುವೆ.

**ನಿಮ್ಮ ಸಮಕಾಲೀನ ನಟಿಯರು ಹೆಚ್ಚಾಗಿ ಯಾವ ಜಾತಿ ಧರ್ಮಕ್ಕೆ ಸೇರಿದವರಿರುತ್ತಿದ್ದರು? ಈಗಲೂ ಅದೇ ನಿರ್ದಿಷ್ಟ ಜಾತಿಗೆ ಸೇರಿದ ನಟಿಯರೇ ಕಾಣಸುತ್ತಾರೆಯೆ? ಅಥವಾ---**

ಆಗ ಹೆಚ್ಚಾಗಿ ದೇವದಾಸಿಯರೇ ರಂಗಭೂಮಿಯಲ್ಲಿ ಕಾಣಿಸಿಕೊಳ್ಳುತ್ತಿದ್ದರು. ಹೀಗಾಗಿ ಎಲ್ಲ ನಟಿಯರನ್ನು ಒಂದು ಬಗೆಯ ಗುಮಾನಿಯಿಂದಲೇ ಗಮನಿಸುತ್ತಿದ್ದರು. ಹಳ್ಳಿಗಳಲ್ಲಿ ನಾಟಕದವರು ಬಂದ್ರು ಅಂದರೆ ಹ್ಯಾಂಗ ಮಾತಾಡ್ತಿದ್ರು? (ಸ್ವಲ್ಪ ಮೌನ ಕಣ್ಣಂಚಿನಲ್ಲಿ ತೆಳುವಾಗಿ ನೀರು ನಿಂತಿತ್ತು) ಅದನ್ನ ನೆನಪ ಮಾಡಿಕೊಂಡ್ರೆ ಈಗಲೂ ಮನಸ್ಸು ಕಹಿಯಾಗ್ತದ. ಸೂಳೇರು ಬಂದ್ರು ಅಂತಿಂದ್ರು. ಪಾತರದವರು ಬಂದ್ರು ಅಂತಿದ್ರು. ಗುಲ್ಬರ್ಗಾದ ಕಡೆಗೆ ಚಿಮಣೇರು ಬಂದ್ರು ಅಂತಿದ್ರು. ಆಗ ಕೆಲವು ನಟಿಯರು ಇಂತಹಕೆಟ್ಟ ಸಂಪ್ರದಾಯಕ್ಕೆ ನಾಂದಿ ಹಾಡಿದ್ದರು. ಒಂದೊಂದು ಹಳ್ಳಿಯಲ್ಲಿ ತಿಂಗಳಾನುಗಟ್ಟಲೆ ಉಳಿಯಬೇಕಾದ ಪ್ರಸಂಗ ಬರುತ್ತಿತ್ತು. ಅಂತಹ ಸಂದರ್ಭದಲ್ಲಿ ಇದ್ದುಳ್ಳವರ ಜೊತೆ ಸಂಬಂಧ ಹೊಂದಿ ಹಣ ಸಂಪಾದಿಸಿಕೊಂಡು ಹೋಗುತ್ತಿದ್ದರು. ಅಂಥವರು ಮಾಡಿದ ತಪ್ಪಿಗೆ ನಮ್ಮಂತಹ ಸಾತ್ವಿಕರು ನೋವು ಅಪಮಾನಕ್ಕೊಳಗಾಗ ಬೇಕಾಯಿತು. ಹಳ್ಳಿಯವರು ನಾಟಕವಾಡಲು ಕರೆದರೆ "ಎಲ್ಲರ ಜೊತೆ ನಡೆದುಕೊಂಡ ಹಾಗೆ ನನ್ನ ಜೊತೆ ನಡೆಯಲು ಪ್ರಯತ್ನಿಸಬಾರದು ಅಪಮಾನಿಸಬಾರದು ಅಂದರೆ ಬರ್ತಿನಿ"ಎಂದು ತಾರೀಪು ಮಾಡಿಯೇ ನಾಟಕವಾಡಲು

ಹೋಗುತ್ತಿದ್ದೆ "ಹಾಡು-ಅಭಿನಯವನ್ನು ಬಿಟ್ಟು ನಾನೇನೂ ಮಾಡುವುದಿಲ್ಲ. ಕುಣಿ ಅಂದ್ರ ಕುಣಿಲಿಕ್ಕೆ ಆಗುವುದಿಲ್ಲ" ಎಂದು ಸ್ಪಷ್ಟಪಡಿಸುತ್ತಿದ್ದೆ.

ಈಗ ಕಲಾವಿದನನ್ನು ಗೌರವಿಸುವುದರಿಂದ ಎಲ್ಲ ಜಾತಿಯ ಧರ್ಮದ ಹೆಣ್ಣುಮಕ್ಕಳು ರಂಗವನ್ನು ಪ್ರವೇಶಿಸುತ್ತಿದ್ದಾರೆ. ಈಗ ಜಾತಿಯ ಪ್ರಶ್ನೆ ಬರುವುದಿಲ್ಲ.

**ಅಂದರೆ ಕುಣಿಯುವುದು ಅಂದು ಅಶ್ಲೀಲವೆನಿಸಿತ್ತಾ?**

ಹಾಗೇನಿಲ್ಲ. ಪಾತ್ರಕ್ಕೆ ತಕ್ಕ ಹಾಗೆ ಕುಣಿಯಬೇಕಾಗಿತ್ತು. ಪ್ರಾರಂಭದಲ್ಲಿ ಸಾಮಾಜಿಕ-ನಾಟಕಗಳನ್ನ ಅಭಿನಯಿಸುತ್ತಿದ್ದೆ. ಆಗ ಕುಣಿಯುತ್ತಿದ್ದೆ. ನನ್ನ ಇಪ್ಪತ್ತೈದು ಇಪ್ಪತ್ತಾರು ವರ್ಷ ವಯಸ್ಸನ ತನಕ ಕುಣಿದಿರುವೆ. ಪೌರಾಣಿಕ ನಾಟಕಗಳಲ್ಲಿ ಅಭಿನಯಿಸಲು ಪ್ರಾರಂಭಿಸಿದ ಮೇಲೆ ಕುಣಿಯುವುದನ್ನು ನಿಲ್ಲಸಿದೆ. ಮೊದಲು ನಾನು ಅಭಿನಯಿಸಿದ ಪೌರಾಣಿಕ ನಾಟಕ ರಕ್ತರಾತ್ರಿ.

**ನಿಮ್ಮ ಕಾಲದ ರಂಗಭೂಮಿಯ ಕಲ್ಪನೆ ಹೇಗಿತ್ತು? ಈಗ ಹೇಗಿದೆ?**

ಊರಿಗೇನಾದರೂ ಕೇಡಾದರೆ, ಮಳೆ ಬರದೆ ಇದ್ದರೆ ಪೌರಾಣಿಕ ನಾಟಕಗಳನ್ನು ಹಳ್ಳಿಗಳಲ್ಲಿ ಆಡಿಸುತ್ತಿದ್ದರು. ರಂಗಭೂಮಿಯ ಬಗ್ಗೆ ಒಂದು ಬಗೆಯ ಧಾರ್ಮಿಕ ಕಲ್ಪನೆಯೇ ಇತ್ತು. ಹೀಗಾಗಿ ಹಳ್ಳಿಗಳಲ್ಲಿ ಪೌರಾಣಿಕ ನಾಟಕಗಳೇ ಜಾಸ್ತಿ. ಕಂಪನಿ ನಾಟಕಗಳಲ್ಲಿ ಸಾಮಾಜಿಕ ನಾಟಕಗಳೇ ಹೆಚ್ಚು. ಕಾರಣ ಪೌರಾಣಿಕ ನಾಟಕಗಳಿಗೆ ಖರ್ಚು ಜಾಸ್ತಿ ಮಾಡಬೇಕಿತ್ತು. ಪಾತ್ರಗಳೂ ಹೆಚ್ಚಿಗೆ ಇರುತ್ತಿದ್ದವು. ಇದನ್ನೆಲ್ಲ ಕಂಪನಿಯವರಿಗೆ ನಿಭಾಯಿಸಲಿಕ್ಕೆ ಆಗ್ತಿರಲಿಲ್ಲ. ಅದಕ್ಕಾಗಿ ಕಂಪನಿಯವರು ಸಾಮಾಜಿಕ ನಾಟಕಗಳಿಗೇ ಹೆಚ್ಚು ಒತ್ತು ಕೊಡುತ್ತಿದ್ದರು. ಅಂದು ಕಂಪನಿಯವರೇ ಕಲಾವಿದರಿಗೆ ನಿರಂತರವಾಗಿ ತರಬೇತಿ ನೀಡುತ್ತಿದ್ದರು. ಕಲಾವಿದರ ಖರ್ಚುವೆಚ್ಚುವೆಲ್ಲವನ್ನೂ ಅವರೇ ನೋಡಿಕೊಳ್ಳುತ್ತಿದ್ದರು. ಈಗ ಹಾಗಿಲ್ಲ ನಾಟಕ ಪುಸ್ತಕವನ್ನು ನೀಡಿ ನೀನು ಈ ಪಾತ್ರವನ್ನಾಡ ಬೇಕೆಂದು ಹೇಳಿ ಹೋಗುವರು. ಹಿಂದಿನ ಶ್ರಮ ಇಂದಿನ ಕಲಾವಿದರಲ್ಲಿ ಕಾಣುತ್ತಿಲ್ಲ. ಒಂದು ನಾಟಕವಾಡ ಬೇಕಾದರೆ ಮೂರು ತಿಂಗಳವರೆಗೆ ತರಬೇತಿ ಸಿಗುತ್ತಿತ್ತು. ಕಲಾವಿದರು ನಿರಂತರ ರಂಗ ತಾಲೀಮು ನಡೆಸುತ್ತಿದ್ದರು. ಅದೆಲ್ಲ ಈಗೆಲ್ಲಿದೆ? ನಾಟಕ ಪುಸ್ತಕ ನೀಡಿ ಕೈತೊಳೆದು ಕೊಳ್ಳುತ್ತಾರೆ. ಅದೂ ಅಲ್ಲದೆ ಇಂದಿನ ಯುವಪೀಳಿಗೆಯವರಲ್ಲಿ ರಂಗಭೂಮಿಯ ಕುರಿತಂತೆ ಆಸಕ್ತಿ ಕಡಿಮೆಯಾಗ್ತಿದೆ. ಸಿನಿಮಾ ಟಿ.ವಿ.ಯಂತಹ ಹೊಸಹೊಸ ಮಾಧ್ಯಮಗಳು ಬಂದಾಗ ಇವನ್ನಾರು ಕೇಳ್ತಾರೆ.

**ಅಂದರೆ ಸಿನಿಮಾ ದೂರದರ್ಶನದಂತಹ ಮಾಧ್ಯಮಗಳಿಂದ ರಂಗಭೂಮಿಗೆ ಪೆಟ್ಟಾಗಿದೆ ಎನ್ನುವಿರಾ?**

ಹೌದು. ಮನೆಯಲ್ಲೆ ಕೂತು ಎಲ್ಲವನ್ನು ನೋಡುವ ಆಧುನಿಕ ಸವಲತ್ತು ಇರುವಾಗ ಈಗ್ಯಾರು ನಾಲ್ಕು-ನಾಲ್ಕು ಐದೈದು ತಾಸುಗಳವರೆಗೆ ಕೂತುಕೊಂಡು ನಾಟಕ ನೋಡ್ತಾರೆ?

ಸಿನಿಮಾದಲ್ಲಿ ಅಶ್ಲೀಲ ಸನ್ನಿವೇಶಗಳನ್ನು ಬೇಕಾಬಿಟ್ಟಿಯಾಗಿ ತೋರಿಸ್ತಾರೆ. ಅಲ್ಲಿಯ ನಟಿಯರು ಸಾಮಾನ್ಯವಾಗಿ ಅರೆಬೆತ್ತಲೆಯಲ್ಲೇ ಕಾಣಿಸಿಕೊಳ್ಳುವರು. ನಾಟಕರಂಗದಲ್ಲಿ ಇವೆಲ್ಲ ಇಲ್ಲ. ಆ ಮಟ್ಟದ ಧೈರ್ಯ ನಮ್ಮವರಲ್ಲಿಲ್ಲ.

ಹಿಂದೆ ಎಲ್ಲಿ ನೋಡಿದಲ್ಲಿ ನಾಟಕ ಕಂಪನಿಗಳು ಕಾಣ್ತಾ, ಇದ್ದವು ಈಗ ಆ ಪ್ರಮಾಣದಲ್ಲಿ ಇಲ್ಲವೇ ಇಲ್ಲ. ಬೆರಳೆಣಿಕೆಯಷ್ಟು ಮಾತ್ರ ಇವೆ. ನಾಟಕಗಳ ಸ್ಥಾನವನ್ನು ಸಿನಿಮಾ ದೂರದರ್ಶನಗಳು ಕಬಳಿಸಿವೆ. ನಾವಿನ್ನು ಬಣ್ಣ ಹಚ್ಚುವ ವೇಳೆಯಲ್ಲೇ ಹೌಸ್ ಫುಲ್ ಆಗಿರುತ್ತಿತ್ತು. ಈಗ ಹಾಗಲ್ಲ. ಜನಾ ಬರೂದ ಕಡಿಮೆಯಾಗಿದೆ. ಇಂದು ಹಳ್ಳಿಗಳಲ್ಲಿ ನಾಟಕ ಪ್ರಾರಂಭವಾದಾಗ ಎಲ್ಲಾ ಸೇರಿರ್ತಾರೆ. ಅದೂ ತನ್ನ ಮಗಾನೊ ಗಂಡನೊ ಅದರಲ್ಲಿ ಪಾತ್ರ ಮಾಡಿದಾರೆ ಎಂದು ಸೇರಿರ್ತಾರೆ. ಕೊನೆಕೊನೆಗೆ ಅವ್ರು ಜಾಗ ಖಾಲಿ ಮಾಡಿರ್ತಾರೆ. ಮೊದಲು ಹಾಗಿದ್ದಿದ್ದಿಲ್ಲ. ಮಂಗಳ ಮುಗಿಯುವವರೆಗೆ ಏಳ್ತಿರಲಿಲ್ಲ.

**ನಿಮಗೆ ಸಿನಿಮಾದಲ್ಲಿ ಅಭಿನಯಿಸಲು ಅಹ್ವಾನ ಬಂದಿತ್ತಾ?**

ಬಂದಿತ್ತು. ಆಗ ನಾನು ಮಾಸ್ಟರ ಹಿರಣ್ಣಯ್ಯನವರ ಕಂಪನಿಯಲ್ಲಿದ್ದೆ. ಕಂಪನಿಯ ಮಾಲಿಕರು ನಮ್ಮನ್ನು ತುಂಬಾ ಹೆದರಿಸುತ್ತಿದ್ದರು. ಅಂದ್ರೆ ಸಿನಿಮಾ ಅಂತ ಹೇಳಿಕೊಂಡು ಯಾರಾದ್ರೂ ಕರಿಯಾಕ ಬಂದ್ರೆ ಹೋಗಬ್ಯಾಡ್ರಿ. ಅವ್ರು ನಿಮನ ಮೋಸಮಾಡಿ ಮತ್ತೆಲ್ಲೊ ಕರೆದುಕೊಂಡು ಹೋಗುತ್ತಾರೆ ಅಂತ ಹೆದರಿಸುತ್ತಿದ್ದರು. ಅವರು ಹೇಳಿದ ಹಾಗೆ ಒಂದಿಬ್ಬರು ಬಂದು ರಾಧಮ್ಮನವರ ಪಾತ್ರಕ್ಕೆ ನಿಮ್ಮನ್ನ ಆಯ್ಕೆ ಮಾಡಿದ್ದಾರೆ. ಸದ್ಯ ನಮ್ಮ ಜೊತೆನೇ ಬಂದುಬಿಡಿ ಎಂದರು. ನನಗೆ ಬಹಳ ಹೆದರಿಕಿಯಾಯ್ತು. ಹಿರಣ್ಣಯನವರು ಹೇಳಿದ ಮಾತುಗಳು ನೆನಪಿಗೆ ಬಂದವು. ಅವರ ಬಗ್ಗೆ ನನಗೇನೂ ಪರಿಚಯವಿರಲಿಲ್ಲ. ಹೆದರಿಕೊಂಡು ಹೋಗಲಿಲ್ಲ. ಸಿನಿಮಾದಲ್ಲಿ ಹಾಡಬೇಕೆಂದು ಬಹಳ ಅಭಿಲಾಷೆ ಇತ್ತು. ಅದಕ್ಕ ಅವಕಾಶಾನೇ ಕೂಡಿ ಬರ್ಲಿಲ್ಲ. ಇತ್ತೀಚೆಗೆ ಸಿರಗುಪ್ಪೆಯವರು ತಯಾರಿಸಿದ 'ಮುರಳೀಗಾನ ಅಮೃತಪಾನ' ಚಲನಚಿತ್ರದಲ್ಲಿ ತಾಯಿ ಪಾತ್ರವನ್ನು ಮಾಡಿರುವೆ. ಆದರೆ ಅದಿನ್ನೂ ತೆರೆಕಂಡಿಲ್ಲ. ಸಿನಿಮಾದಲ್ಲಿ ಬಂಧನಜಾಸ್ತಿ ಅನಿಸಿತು. ಅಲ್ಲಿ ಸ್ವತಂತ್ರತೆ ಎನ್ನುವುದು ಇರುವುದಿಲ್ಲ. ಹಲವಾರು ವರ್ಷಗಳಿಂದ ರಂಗಭೂಮಿಯಲ್ಲಿದ್ದು ಸಾಧನೆಯ ತುತ್ತತುದಿಯನ್ನು ಮುಟ್ಟಿದವರು ಸಿನಿಮಾದಲ್ಲಿ ಮತ್ತೆ ಪ್ರಾರಂಭದ ಹಂತವನ್ನು ಪ್ರವೇಶಿಸುವುದೆಂದರೆ ಕಷ್ಟ.

**ಸಿನಿಮಾ ಮಾಧ್ಯಮದವರಿಗೂ ನಾಟಕಮಾಧ್ಯಮದವರಿಗೂ ಒಂದು ಒಳ್ಳೆಯ ಸಂಬಂಧವನ್ನು ಹೇಗೆ ಕಟ್ಟಬಹುದು?**

ಇಲ್ಲ ಇಲ್ಲ. ಅದ್ಹೇಗೆ ಕಟ್ಟೋಕೆ ಆಗುತ್ತೆ ಹೇಳಿ? ಎರಡು ರಂಗಗಳೂ ಬೇರೆ ಬೇರೆಯೇ. ಒಂದಕ್ಕೊಂದು ಹೊಂದಿಕೆಯಾಗುವುದಿಲ್ಲ. ರಂಗಭೂಮಿಯಿಂದ ಸಿನಿಮಾಕ್ಕೆ ಹೋದವರಿದ್ದಾರೆ. ಆದರೆ ಸಿನಿಮಾದಿಂದ ಯಾರೂ ರಂಗಭೂಮಿಗೆ ಬಂದವರಿಲ್ಲ.

**ಸಿನಿಮಾ ಕಲಾವಿದರೆಂದರೆ ಮೇಲು, ಅವರಿಗೆ ಸ್ಟಾರ್ ಪಟ್ಟ ಇರ್ತದೆ. ಆದರೆ ನಾಟಕದವರಿಗೆ**

**ಅಂತಹ ಗ್ಲಾಮರಸ್ ಲೋಕ ಇಲ್ಲವಲ್ಲ.------**

ನಮಗೆ ಜನಸಂಪರ್ಕ ಬರುವುದೇ ಇಲ್ಲ. ಮೊದಲು ನಾಟಕಗಳು ಹತ್ತು ಗಂಟೆಗೆ ಪ್ರಾರಂಭವಾಗುತ್ತಿದ್ದವು. ಹೀಗೆ ಪ್ರಾರಂಭವಾದ ನಾಟಕ ಬೆಳಗಿನ ಮೂರು ಗಂಟೆಗಳವರೆಗೆ ನಡೆಯುತ್ತಿತ್ತು. ದಣಿದ ನಾವು ನಿದ್ದೆ ಹೋಗುತ್ತಿದ್ದೆವು. ಮತ್ತೆ ಬೆಳಗ್ಗೆ ಎದ್ದು ಸ್ನಾನಮಾಡಿ ಊಟ ಮಾಡುವುದರೊಳಗಾಗಿ ಹತ್ತು ಗಂಟೆಯಾಗುತ್ತಿತ್ತು. ಆಗ ರಂಗತಾಲೀಮಿಗೆ ಹೋಗುತ್ತಿದ್ದೆವು. ಒಂದೂವರೆ ಎರಡು ಗಂಟೆಗೆ ಊಟ. ಸ್ವಲ್ಪ ವಿಶ್ರಾಂತಿ. ಮತ್ತೆ ರಂಗತಾಲೀಮು. ಇಷ್ಟಾಗುವುದರೊಳಗೆ ನಾಟಕ ಮಾಡುವ ವೇಳೆಯಾಗುತ್ತಿತ್ತು. ನಿತ್ಯದ ಈ ಚಕ್ರದಲ್ಲಿ ನಮ್ಮನ್ನು ಜನ ಮೆಚ್ಚಿದ್ದೂ ಗೊತ್ತಾಗುತ್ತಿರಲಿಲ್ಲ. ನಾವು ಸೂರ್ಯ ಹುಟ್ಟುವುದನ್ನು ನೋಡಲಿಲ್ಲ. ಚಂದ್ರ ಮಿಣುಗುವುದನ್ನು ಕಾಣಲಿಲ್ಲ. ನಮ್ಮೆಲ್ಲರ ಶ್ರಮದ ಕೀರ್ತಿ ಕಂಪನಿಯ ಮಾಲಿಕರಿಗೆ ಮುಟ್ಟುತ್ತಿತ್ತು. ಈಗಲೂ ವೃತ್ತಿರಂಗಭೂಮಿ ಇದಕ್ಕಿಂತ ಭಿನ್ನವೆನ್ನಿಸುವುದಿಲ್ಲ. ಇಂತಹ ಪರಿಸರದಲ್ಲಿದ್ದವರಿಗೆ ಗ್ಲಾಮರಸ್ ಲೋಕಹ್ಯಾಗೆ ಗೊತ್ತಾಗ ಬೇಕು ಹೇಳಿ? ಹಾಗೆ ನೋಡಿದರೆ ಸಿನಿಮಾದಲ್ಲಿದ್ದಂತೆ ನಾಟಕದಲ್ಲೂ ಹೆಸರು ಮಾಡಿದ ಕಲಾವಿದರಿಗೆ ಸ್ಟಾರ್ ಪಟ್ಟ ಇರುತ್ತದೆ. ಅವರದೇ ಆದ ಗ್ಲಾಮರಸ್ ಲೋಕಾನೂ ಇರುತ್ತೆ.

**ನೀವು ಒಂದು ಪಾತ್ರವನ್ನು ಹೇಗೆ ಪ್ರವೇಶ ಮಾಡ್ತೀರಿ?**

ಪಾತ್ರಕ್ಕನುಗುಣವಾದ ಭಾವನೆಗಳನ್ನು ತುಂಬಿಕೊಳ್ಳುತ್ತೇನೆ. ಪಾತ್ರವೇ ನಾನಾಗಿರ್ತೀನಿ. ಅಲ್ಲಿ ಯಾವ ವೈಯಕ್ತಿಕ ಚಿಂತೆ, ದುಃಖ ದುಮ್ಮಾನಗಳೂ ಕಾಲಿಡುವುದಿಲ್ಲ. ನಾನು ಸುಭದ್ರಮ್ಮ ಅನ್ನುವುದನ್ನೇ ಮರೆತಿರುತ್ತೇನೆ. ಪಾತ್ರ ಪ್ರವೇಶಿಸಿದಾಗ ಬಹಳ ಆನಂದ ವಾಗಿರುತ್ತೇನೆ. ಅದನ್ನ ಬಾಯಿಬಿಟ್ಟು ಹೇಳಾಕ ಆಗೊಲ್ಲ. ಮೊದಮೊದಲು ಹರಿಶ್ಚಂದ್ರ ನಾಟಕದಲ್ಲಿಯ ತಾರಾಮತಿ ಪಾತ್ರವನ್ನು ತಾರಾಮತಿಯಾಗಿಯೇ ಅಭಿನಯಿಸುತ್ತಿದ್ದೆ. ಯಾವಾಗ ನನ್ನ ಮಗಳ್ನ ಕಳೆದುಕೊಂಡೆನೋ ಅಂದಿನಿಂದ ಆ ಪಾತ್ರವನ್ನು ಅಭಿನಯಿಸಲಿಕ್ಕೆ ಆಗುತ್ತಿಲ್ಲ. ತಾರಾಮತಿಯ ಮಗನ ಬದಲು, ಸುಭದ್ರಮ್ಮನ ಮಗಳ ಹೆಣವೇ ಕಾಣುತ್ತಿತ್ತು. ಹೀಗಾಗಿ ಕರಳು ಕಿತ್ತು ಬರುವಂತೆ ಬಿಕ್ಕಿಬಿಕ್ಕಿ ಅಳುತ್ತಿದ್ದೆ. ಅದನ್ನು ನೋಡಿದ ಹಿರಿಯರನೇಕರು ಆ ಪಾತ್ರವನ್ನೇ ಆಡಬೇಡವೆಂದು ಬಿಡಿಸಿದರು. ಈಗ ಆ ಪಾತ್ರವನ್ನಾಡುತ್ತಿಲ್ಲ.

**ನಿಮ್ಮ ವೈಯಕ್ತಿಕ ಬದುಕು----**

ಬಹಳ ಕಷ್ಟದ ಹಾದಿಯನ್ನು ತುಳಿದು ಬಂದಿದ್ದೇನೆ. ನಮ್ಮ ತಂದೆಯ ಸಾವಿನ ನಂತರ ಬದುಕುವುದೇ ಕಷ್ಟವೆನಿಸಿತ್ತು. ನನಗಾಗ ಹತ್ತು ವರ್ಷ ವಯಸ್ಸು. ನನ್ನ ತಾಯಿ ನಾಲ್ಕೈದು ಮನೆಗಳಿಗೆ ಸಂಗೀತ ಪಾಠ ಹೇಳಿ ಕೊಡುತ್ತಿದ್ದರು. ಅವರು ತಿಂಗಳಿಗೆ ಐದು ರೂಪಾಯಿಗಳಂತೆ ಫೀಜ್ ಕೊಡುತ್ತಿದ್ದರು. ಒಂದು ವೇಳೆ ಅವರು ಸರಿಯಾಗಿ ಪಾಠ ಹೇಳಿಸಿಕೊಳ್ಳದಿದ್ದರೆ ಅದನ್ನೂ ಕೊಡುತ್ತಿರಲಿಲ್ಲ. ಎಡಬಿಡದೆ ಅವರ ಮನೆಗೆ ಎಡತಾಕಿದಾಗ ಫೀಜು ನಮ್ಮ ಕೈಸೇರುತ್ತಿತ್ತು. ಇಪ್ಪತ್ತೈದು ರೂಪಾಯಿಗಳಲ್ಲೆ ತಿಂಗಳಪೂರ್ತಿ ಜೀವನ ಸಾಗಿಸುವುದು

ಕಷ್ಟವೆನಿಸಿತ್ತು. ಮನೆಯಲ್ಲಿ ಬಡತನ ಎಷ್ಟಿತ್ತೆಂದರೆ ಉಗಾದಿಯ ಹಬ್ಬದಂದು ತಿನ್ನಲು ಒಂದು ತುತ್ತು ಅನ್ನ ಇರಲಿಲ್ಲ. ಅದನ್ನ ತಿಳಿದ ಲಿಂಗರಾಜ ಮನ್ನೂರರು ತಮ್ಮಲ್ಲಿದ್ದ ಹತ್ತು ರೂಪಾಯಿಗಳನ್ನು ಕೊಟ್ಟು ಕಳುಹಿಸಿದರು. ಈ ಕಿತ್ತುತಿನ್ನುವ ಬಡತನವೇ ನನ್ನನ್ನು ಬಣ್ಣದ ಬದುಕಿಗೆ ನೂಕಿತು. ಬಣ್ಣದಿಂದಲೇ ಮನೆಯವರೆಲ್ಲರನ್ನೂ ಸಾಕಿಸಲಹಿದೆ. ನಮ್ಮ ಮನೆಯ ಕಷ್ಟಗಳಿಗೆ ಯಾವಾಗಲೂ ಸಹಾಯವಾಗುತ್ತಿದ್ದ ಲಿಂಗರಾಜ ಮನ್ನೂರರ ಜೊತೆಯೇ ಸಂಸಾರ ಹೂಡಿದೆ. ನನಗಾಗ ಹದಿನಾಲ್ಕು ವರ್ಷ ವಯಸ್ಸು. ಅವರಿಗೆ ೩೮ ವರ್ಷ ವಯಸ್ಸಿತ್ತು. ನೋಡಿದವರೆಲ್ಲಾ ನಮ್ಮನ್ನು ತಂದೆ ಮಗಳು ಎಂದು ಗುರುತಿಸುತ್ತಿದ್ದರು. ಈ ನೋವನ್ನು ನಾನು ಬದುಕಿನುದ್ದಕ್ಕೂ ಎದುರಿಸಬೇಕಾಯ್ತು. ಹೆಣ್ಣಿಗೆ ಹದಿನಾಲ್ಕನೆಯ ವಯಸ್ಸಿಗೆ ಎಲ್ಲ ತಿಳುವಳಿಕೆ ಬಂದಿರತದೆಯಲ್ಲವಾ? ಅವರೊಂದಿಗೆ ನಾನು ಸುಖವಾಗಿಯೇ ಇದ್ದೆ. ನನಗೇನೂ ವಯಸ್ಸಿನ ಅಂತರ ಕಾಡಲಿಲ್ಲ. ಅವರು ನನ್ನಲ್ಲಿದ್ದ ಕಲಾ ಪ್ರತಿಭೆಯನ್ನು ಗೌರವಿಸಿ ಬೆಳೆಸಿದರು. ಅವರು ನನ್ನ ಜೀವನದಲ್ಲಿ ಪ್ರವೇಶಿಸದಿದ್ದರೆ ಏನಾಗಿರುತ್ತಿದ್ದೆನೊ ಗೊತ್ತಿಲ್ಲ. ನನ್ನ ಇಬ್ಬರು ಗಂಡುಮಕ್ಕಳು ವರ್ಕ್‌ಶಾಪ್ ನಡೆಸಿಕೊಂಡು ಸುಖವಾಗಿದ್ದಾರೆ. ಇಬ್ಬರು ಹೆಣ್ಣಮಕ್ಕಳಿದ್ದರು. ಅವರಲ್ಲಿ ಒಬ್ಬಳು ಈಗ ಇಲ್ಲ. (ಸ್ವಲ್ಪ ಹೊತ್ತು ಮೌನ ಒಂದು ದೀರ್ಘವಾದ ನಿಟ್ಟುಸಿರು) ಏನೇನೋ ಆಸೆಗಳನ್ನಿಟ್ಟುಕೊಂಡು ಅವರಿಬ್ಬರ ಮದುವೆ ಮಾಡಿದೆ. ಮದುವೆ ಶ್ರೇಷ್ಠ ಎನ್ನುವ ಕಲ್ಪನೆ ಇತ್ತು. ಇಬ್ಬರೂ ಗಂಡನ ಮನೆಯಲ್ಲಿ ಸುಖವಾಗಿರಲಿಲ್ಲ. ಒಬ್ಬಳು ಆ ಕಷ್ಟದಲ್ಲೇ ತೀರಿಹೋದಳು. ನನ್ನಂತೆ ನನ್ನ ಹೆಣ್ಣುಮಕ್ಕಳು ಜೀವನ ಸಾಗಿಸಿದ್ದರೆ ಸುಖವಾಗಿರುತ್ತಿದ್ದ ರೇನೋ ಎಂದು ಸಾವಿರ ಬಾರಿ ಹಳಹಳಿಸಿದ್ದೇನೆ. ಮದುವೆ ಶ್ರೇಷ್ಠ ಎಂದುಕೊಂಡು ನನ್ನ ಹೆಣ್ಣುಮಕ್ಕಳಿಗೆ ಎಂಥಾ ಅನ್ಯಾಯ ಮಾಡಿದೆ ಅನಿಸ್ತಿದೆ.

**ಅಂದರೆ ನಿಮ್ಮದು ಸಾಂಪ್ರದಾಯಿಕ ವಿವಾಹವಲ್ಲವೇನು?**

ಇಲ್ಲ. ನನ್ನದು ಸಾಂಪ್ರದಾಯಿಕ ಮದುವೆ ಅಲ್ಲ. ಅವರು ನನಗೆ ತಾಳಿಕಟ್ಟಲಿಲ್ಲ. ನಾನೇ ನಾಟಕದಲ್ಲಿ ತಾಳಿಕಟ್ಟಿಕೊಂಡೆನು. ಅವರು ಕಟ್ಟಿದರೆಷ್ಟು? ಬಿಟ್ಟರೆಷ್ಟು? ಜೊತೆಗೂಡಿ ಬಾಳಬೇಕು ಎನ್ನುವ ನಂಬಿಕೆಯೇ ತಾಳಿ. ಯಾರ್ಹತ್ರ ಮಾಡಿದ್ದು ಯಾರ್ಹತ್ರ ಕಟ್ಟಿದ್ದು ಏನಾಗಬೇಕಾಗಿದೆ? ನಡಿಯೋ ಮನಸ್ಸು ಇಲ್ಲದ ಮೇಲೆ ಕಟ್ಟಿಕೊಂಡರೆಷ್ಟು ಬಿಟ್ಟರೆಷ್ಟು? ಇಬ್ಬರೂ ಒಬ್ಬರಿಗೊಬ್ಬರು ಅರ್ಥ ಮಾಡಿಕೊಳ್ಳಬೇಕು. ಅದಕ್ಯಾಕ ತಾಳಿ ಬೇಕು?

**ರಂಗಭೂಮಿಯೊಳಗಿನ ಮಹಿಳಾ ಶೋಷಣೆ ಹೇಗಿರುತ್ತದೆ?**

ಅವ್ನೆಲ್ಲಾ ಹೇಳಾಕ್ಕಾಗೊಲ್ಲ. ಹೇಳುವಂಥವೂ ಅಲ್ಲ (ಮೌನ)

**ಒಬ್ಬ ಕಲಾವಿದೆಯಾಗಿ ಕಲಾವಿದರ ಕುರಿತು ನಿಮ್ಮ ಅಭಿಪ್ರಾಯ---**

ವೃತ್ತಿರಂಗಭೂಮಿಯನ್ನು ಅವರು ಅರ್ಥ ಮಾಡಿಕೊಳ್ಳುತ್ತಿಲ್ಲ. ಅದಕ್ಕಾಗಿ ಶ್ರಮ ಪಡುತ್ತಿಲ್ಲ. ನಮ್ಮ ಕಾಲದ ಕಲಾವಿದರಂತೆ ಈಗಿನವರಿಲ್ಲೇ ಇಲ್ಲ. ನಮ್ಮಕಾಲ ಮುಗೀತಾ ಬಂತು. ಅಭಿನಯವನ್ನು ಕಷ್ಟಪಟ್ಟು ಕಲಿತು ರಂಗಭೂಮಿಯನ್ನು ಉಳಿಸಿ ಎಂದು ಹೇಳಿದರೂ

ಯಾರೂ ಕೇಳುತ್ತಿಲ್ಲ. ನನ್ನನ್ನು ಬಿಟ್ಟರೆ ವೃತ್ತಿರಂಗಭೂಮಿಯಲ್ಲಿ ಹಾಡುವವರು ಯಾರೂ ಇಲ್ಲ. ನನ್ನ ಸ್ಥಾನವನ್ನು ತುಂಬುವ ವ್ಯಕ್ತಿಗಾಗಿ ಕಾಯುತ್ತಿರುವೆ. ನಾಗರತ್ನಮ್ಮ ಅಭಿನಯಿಸ್ತಾಳೆ ಹಾಡಲು ಬರುವುದಿಲ್ಲ. ಕೂಡ್ಲಿಗಿಯ ಪದ್ಮನಿಗೆ ಒಳ್ಳೆಯ ಕಂಠವಿದೆ. ಆದರೆ ಅವಳು ಅದನ್ನು ಸರಿಯಾಗಿ ದುಡಿಸಿಕೊಳ್ಳುತ್ತಿಲ್ಲ. ಅವಳು ನಮಗ್ಯಾರು ಕಲಿಸ್ತಾರೆ ಎಂದು ಸುಮ್ಮಸುಮ್ಮನೆ ಹಲುಬತಾಳೆ. ಕಲಿಸುವವರು ಎಲ್ಲಿದ್ದಾರೆ ಎನ್ನುವ ಕಷ್ಟವನ್ನು ಅವಳು ತೆಗೆದುಕೊಳ್ಳುತ್ತಿಲ್ಲ. ಹಾಡಿದ ಕಾಸೆಟ್ ಗಳನ್ನು ಕೇಳಿ ಕಲಿಯುವ ಹವ್ಯಾಸವೂ ಅವಳಲ್ಲಿ ಇಲ್ಲ. ಅದಕ್ಕೆ ಸಲ್ಲುವ ಗೌರವ ಪುರಸ್ಕಾರಗಳನ್ನೆಲ್ಲಾ ಬೇಕೆನ್ನುವವರು, ಅದಕ್ಕಾಗಿ ಎಷ್ಟು ಅವಧಿಯವರೆಗೆ ದುಡೀತಾ ಇದ್ದೇವಿ ಎನ್ನುವುದನ್ನು ಅರ್ಥಮಾಡಿಕೊಳ್ಳಬೇಕು. ನಮ್ಮ ನಾಟಕ ಇಲಾಖೆಯವರು ಹಳೆ ರಂಗ ಗೀತೆಗಳನ್ನು ಉಳಿಸಿಕೊಳ್ಳುವ ಯೋಜನೆ ಹಾಕಿಕೊಂಡಿದ್ದಾರೆ. ಅದಕ್ಕಾಗಿ ನಮ್ಮ ಕಲಾವಿದರನ್ನೇ ಕರೆದುಕೊಂಡು ಹೋಗುವ ಆಶೆ ಇತ್ತು. ಆದರೆ ಅವರು ಅಸಕ್ತಿ ತೋರಲಿಲ್ಲ. ರಂಗಭೂಮಿ ನಿಮ್ಮ ಹೊಟ್ಟೆ ಬಟ್ಟೆಗೆ ಕೊರತೆ ಮಾಡ್ಲಿಲ್ಲ. ನಿಮಗೊಂದು ಐಡೆಂಟಿಟಿ ತಂದುಕೊಟ್ಟು. ರಂಗಭೂಮಿಗೆ ನೀವೇನು ಕೊಟ್ಟುರುವಿರಿ ಎಂದು ಜನ ನಾಳೆ ನಮ್ಮನ್ನು ಪ್ರಶ್ನಿಸಬಹುದು. ಅದಕ್ಕೆ ಉತ್ತರಿಸುವ ನೈತಿಕ ತಾಕತ್ತನ್ನು ರಂಗ ಕಲಾವಿದರು ಬೆಳೆಯಿಸಿಕೊಳ್ಳಬೇಕಾಗಿದೆ. ಆ ನಿಟ್ಟಿನಲ್ಲಿ ಅವರು ದುಡಿಯ ಬೇಕಾಗಿದೆ. (ಸ್ವಲ್ಪ ಮೌನ) ರಂಗಭೂಮಿ ನಟಿಯರು ವೈಯಕ್ತಿಕ ಸಮಸ್ಯೆಗಳಲ್ಲಿ ತೊಳಲಾಡ್ತಾರೆ. ಅವರೆಲ್ಲ ನನ್ನನ್ನು ಅಮ್ಮಾ ಅಂತಲೇ ಕರೆಯುವುದು. ಹಲವಾರು ಬಾರಿ ತಮ್ಮ ಸಮಸ್ಯೆಗಳನ್ನು ನನ್ನ ಹತ್ರ ಹೇಳಿಕೊಳ್ಳುತ್ತಿರುತ್ತಾರೆ. ಅನೇಕ ವೇಳೆ ಅವರ ಖಾಸಗಿ ಕಷ್ಟಗಳು ರಂಗಭೂಮಿಯಲ್ಲಿ ಬೆಳೆಯದಂತೆ ತಡೆಹಿಡಿಯುತ್ತವೆ ಎನಿಸುತ್ತೆ.

**ನಿಮ್ಮ ಸಹನಟಿಯರು ನಿಮ್ಮೊಂದಿಗೆ ಹಂಚಿ ಕೊಳ್ಳುವ ನೋವುಗಳು ಸಾಮಾನ್ಯವಾಗಿ ಎಂಥವಿರುತ್ತಿದ್ದವು?**

ಅವ್ನೆಲ್ಲಾ ಹ್ಯಾಗೆ ಹೇಳೋಕಾಗುತ್ತೆ? ನಮಗೆ ಮದುವೆ ಮಾಡಿದ್ರೆ ಈ ಸಮಸ್ಯೆ ಇರ್ತಿರಲಿಲ್ಲ್ರಿ ಅನ್ನಿದ್ರು. ಪ್ರೀತಿ ಪ್ರೇಮದ ಹೆಸರಿನಲ್ಲಿ ಗಂಡಸರು ಅವರಿಗೆ ಮಕ್ಕಳನ್ನು ನೀಡಿ ಹೋಗುತ್ತಿದ್ದರು. ಅವುಗಳ ಪೋಷಣೆಯ ಜವಾಬ್ದಾರಿ ಇವರ ಮೇಲೆಯೇ ಬೀಳುತ್ತಿತ್ತು. ನೋವಿನ ಜೊತೆಗೆ ಮಕ್ಕಳನ್ನು ಸಾಕುವ ಹೊಣೆಯನ್ನು ಅವರ ಮೇಲೆಯೇ ಹೇರಿ ಹೋಗ್ತಿದ್ರು. ಎಲ್ಲಾ ನೋವು ಅಪಮಾನಗಳು ಹೆಣ್ಣಿಗೇ ಯಾಕೆ ತಳಕ ಹಾಕತಾವು ಅಂತ ಅನಿಸ್ತದ. ಮದುವೆಯಾಗದಿದ್ರೂ ಒಬ್ಬನೊಂದಿಗೆ ನಿಯತ್ತಿನಿಂದಿದ್ರೆ ಈ ಸಮಸ್ಯೆಗಳನ್ನು ಅವರು ಎದುರಿಸಲಿತ್ತಿರಲಿಲ್ಲ.

**ಪಾತ್ರಗಳ ಆಯ್ಕೆಯನ್ನು ನೀವೇ ಮಾಡಿಕೊಳ್ಳುತ್ತೀರಾ?**

ಇಲ್ಲ. ನಿರ್ದಿಷ್ಟ ಪಾತ್ರಗಳಿಂದ ನಾನು ನನ್ನನ್ನು ಗುರುತಿಸಿಕೊಂಡಿದ್ದರಿಂದ ಜನರು ನನ್ನನ್ನು ಆ ಪಾತ್ರಕ್ಕಾಗಿಯೇ ಆಯ್ಕೆ ಮಾಡ್ತಾರೆ.

**ರಂಗಭೂಮಿ ಕಲಾವಿದರಿಗೆ ಪ್ರತ್ಯೇಕವಾದ ಒಂದು ಅಕಾಡೆಮಿ ಬೇಕಲ್ಲವೆ? ಉದಾಹರಣೆಗೆ ಸಾಹಿತಿಗಳಿಗೆ ಸಾಹಿತ್ಯ ಅಕಾಡೆಮಿ ಇದೆ. ಸಿನಿಮಾದವರಿಗೆ ಫಿಲಮ್ ಚೇಂಬರ್ ಅಕಾಡೆಮಿ ಅಂಥಾವೆಲ್ಲ ಇವೆ. ಆದರೆ ಈ ವೃತ್ತಿ ರಂಗಭೂಮಿ ಕಲಾವಿದರಿಗೆ ವಿಶೇಷವಾದ ಅಕಾಡೆಮಿ ಬೇಕಲ್ಲವೆ? ನಾಟಕ ಅಕಾಡೆಮಿ ಇದ್ದೂ ಕೂಡ ನಾಟಕ ಕಲಾವಿದರನ್ನು ಸೂಕ್ತವಾಗಿ ನಡೆಸಿಕೊಳ್ತಿದೆಯಾ?**

ಎಲ್ಲ ಅಕಾಡಮೆಗಳಂತೆ ನಾಟಕ ಅಕಾಡೆಮಿಯೂ ಕೆಲಸ ಮಾಡ್ತಾ ಇದೆ. ಈ ಅಕಾಡಮಿಗಾಗಿ ಕಲಾವಿದರು ಬಹಳ ಹೋರಾಡಿದ್ರು. ರಂಗಭೂಮಿಗಾಗಿಯೇ ಜೀವ ತೇಯ್ದ ನಮ್ಮಂತವರನ್ನು ಗುರುತಿಸಿ ಗೌರವಿಸಬೇಕಾದದ್ದು ನಾಟಕ ಅಕಾಡಮಿಯ ಕರ್ತವ್ಯ. ಅದಕ್ಕಾಗಿ ನಟರು ಹೋರಾಡುವ ಅಗತ್ಯವಿಲ್ಲ. ಸಾಮಾನ್ಯವಾಗಿ ರಂಗಭೂಮಿಯ ನಟ-ನಟಿಯರೆಲ್ಲ ಬಡವರು. ಅವರಿಗೆ ಬೆಂಗಳೂರಿನ ತನಕ ಹೋಗಿ ಹೋರಾಡುವ ಶಕ್ತಿಯಿಲ್ಲ. ಅದೂ ಅಲ್ಲದೆ ರಂಗಕಲಾವಿದರು ಹೆಚ್ಚು ವಿದ್ಯಾವಂತರಲ್ಲ. ನಮಗೆ ಇವೆಲ್ಲ ಅರ್ಥ ವಾಗುವುದಿಲ್ಲ. ಸರ್ಕಾರ ಇದನ್ನಲ್ಲ ಅರ್ಥಮಾಡಿಕೊಳ್ಳಬೇಕು. ಪಿಂಚಣಿಗೋಸ್ಕರ ಒದ್ದಾಡುವ ನಮಗೆ ಪ್ರಶಸ್ತಿ ಗೌರವುಗಳು ದೂರದ ಮಾತಾಗುತ್ತವೆ.

**ಅಂದಹಾಗೆ ನಿರಂತರವಾಗಿ ವೃತ್ತಿರಂಗಭೂಮಿಯಲ್ಲಿ ಸೇವೆಸಲ್ಲಿಸಿದವರಿಗೆ ಸರ್ಕಾರ ಪಿಂಚಣಿ ನೀಡ್ತಿದೆಯಾ?**

ಹೂಂ. ಕೊಡ್ತಾ ಇದ್ದಾರೆ ಮೊದಲು ಕಲಾವಿದರ ಸಾಧನೆಗನುಗುಣವಾಗಿ ತಿಂಗಳಿಗೆ ೧೦೦, ೧೫೦, ೨೦೦, ೨೫೦ ರೂಪಾಯಿಗಳವರೆಗೆ ಪಿಂಚಣಿ ಕೊಡ್ತಾ ಇತ್ತು. ಆಮೇಲೆ ೫೦೦ರೂ ಮಾಡಿದ್ರು. ಈ ಪಿಂಚಣಿ ಜೀವನ ಪರ್ಯಂತ ಬಣ್ಣಹಚ್ಚಿಕೊಂಡು ಬದುಕಿದವರಿಗೆ ಮಾತ್ರ ಸಿಗುತ್ತಿತ್ತು. ಈಗ ಎಲ್ಲರಿಗೂ ಒಂದೇ ರೀತಿಯಲ್ಲಿ ೨೫೦ ರೂಪಾಯಿಗಳನ್ನು ಕೊಡ್ತಿದ್ದಾರೆ. ಅವರು ಬಣ್ಣ ಹಚ್ಚಿದ್ರೂ ಬಂತು ಹಚ್ಚದೆ ಇದ್ದರೂ ಬಂತು, ದೊಡ್ಡದೊಡ್ಡ ಜನಗಳ ವಶೀಲಿಯಿಂದ ಕಲಾವಿದರಲ್ಲದವರೂ ಪಿಂಚಣಿ ತೆಗೆದುಕೊಳ್ತಿದ್ದಾರೆ. ಅಂತವರನ್ನು ನೋಡಿ ನಾವು ಕಲಾವಿದರು ಅಂತ ಹೇಳಿಕೊಳ್ಳಲಿಕ್ಕೆ ನಮಗೇ ನಾಚಿಕೆಯಾಗ್ತಿದೆ. ನಿಜವಾದ ಎಷ್ಟೋ ಕಲಾವಿದರಿಗೆ ಇನ್ನೂ ಪಿಂಚಣಿ ದೊರೆತಿಲ್ಲ. ಇದು ಒಂದು ದುರಂತವೇ ಸರಿ. ಕುಡುತಿನಿ ರಾಮಣ್ಣ ಮೊದಲಾದವರಿಗೆ ನಾನೇ ಓಡಾಡಿ ಪಿಂಚಣಿ ಕೊಡಿಸಿದೆ. ಈಗಿನ ಕಾಲದಲ್ಲಿ ೨೫೦ರೂಪಾಯಿಗಳು ಎದಕ್ಕೆ ಆಗುತ್ತೆ ಹೇಳಿ? ಸರ್ಕಾರ ಅರ್ಥಾಮಾಡ್ಕೋಬೇಕು. ನಿಜವಾದ ಕಲಾವಿದರಿಗೆ ಪಿಂಚಣಿ ಕೊಡಬೇಕು. ಪಿಂಚಣಿಗಾಗಿ ಹೋರಾಡೋ ಕಲ್ಪನೆ ನಮ್ಮ ಕಲಾವಿದರಲ್ಲಿ ಇಲ್ಲ. ನನಗೆ ರಾಜ್ಯ ಸರ್ಕಾರದಿಂದ ತಿಂಗಳಿಗೆ ೨೫೦ರೂಪಾಯಿಗಳೂ ಕೇಂದ್ರ ಸರ್ಕಾರದಿಂದ ೧೫೦೦ರೂಪಾಯಿಗಳು ಪಿಂಚಣಿ ದೊರೆಯುತ್ತಿದೆ.

**ನಿಮಗೆ ನಿಮ್ಮದೇ ಆದ ಸ್ವಂತ ಕಂಪನಿ ತಗೆಯುವ ಆಸೆಯಿತ್ತಾ?**

೨೫ ರೂಪಾಯಿಗಳ ಸಂಬಳ ತಗೆದು ಕೊಳ್ಳುತ್ತಿದ್ದ ನನಗೆ ಅದೆಂತಹ ಅಸೆ ಇರುತ್ತೆ

ಹೇಳಿ? ಕಲಾವೇದಿಕೆಯನ್ನು ನಿರ್ಮಿಸಲು ಲಕ್ಷಾಂತರ ರೂಪಾಯಿಗಳು ಬೇಕಾಗುತ್ತದೆ. ಅಷ್ಟು ದುಡ್ಡು ನನ್ನ ಹತ್ತಿರ ಎಲ್ಲಿತ್ತು? ಎಲ್ಲಿದೆ? ಇನ್ನೊಂದು ಸಂಗತಿ ನಿಮಗೆ ಹೇಳಬೇಕೆಂದ್ರೆ ನನ್ನ ಇಪ್ಪತ್ತೈದನೆಯ ವಯಸ್ಸಿನವರೆಗೆ ನಾನು ನೂರರ ನೋಟನ್ನು ನೋಡೇ ಇರಲಿಲ್ಲ. ವಾರಕ್ಕೆ ಇಪ್ಪತ್ತೈದು ರೂಪಾಯಿಗಳು ಸಿಗುತ್ತಿತ್ತು. ಅದರಲ್ಲೇ ವೈಯಕ್ತಿಕ ಖರ್ಚಿಗೆ ಇಟ್ಟುಕೊಂಡು, ಮನೆಗೂ ಕೊಟ್ಟು ಕಳುಹಿಸುತ್ತಿದ್ದೆನು. ಇಂತಹದರಲ್ಲಿ ನಾನ್ಹೇಗೆ ಒಂದು ನೂರು ರೂಪಾಯಿಯನ್ನು ನೋಡಲು ಸಾಧ್ಯ? ಒಂದು ಸಲ ನಾನೇ ಕುತೂಹಲದಿಂದ ತರಿಸಿ ನೋಡಿದೆ.

ದುಡ್ಡಿಲ್ಲದ ನಾನು ಕಂಪನಿ ತಗೆಯುವ ಆಸೆಯನ್ನು ಹ್ಯಾಗೆ ಇಟ್ಟುಕೊಳ್ಳಲಿ? ದುಡ್ಡಿನ ಜೊತೆಗೆ ದೊಡ್ಡ ಜವಾಬ್ದಾರಿಯನ್ನು ನಿಭಾಯಿಸಿಕೊಂಡು ಹೋಗುವ ತಾಕತ್ತು ಬೇಕು. ಈಗ ಚಿಕ್ಕೇನ ಕೊಪ್ಪದ ಶರಣರ ಕಲಾಬಳಗವನ್ನು ನಡೆಯಿಸಿಕೊಂಡು ಹೋಗುತ್ತಿರುವೆ. ನಾಟಕದಲ್ಲಿಯ ಉಡುಪು ವೇದಿಕೆಯ ಖರ್ಚಿಗಾಗಿ ಸಂಸ್ಕೃತಿ ಇಲಾಖೆಯವರು ೨೫೦೦ ರೂಪಾಯಿಗಳನ್ನು ಕೊಡ್ತಾರೆ. ಕಲಾವಿದರ ತಂಡವನ್ನೇನೂ ನಾನು ಕಟ್ಟಿಕೊಂಡಿಲ್ಲ. ಕಲಾವಿದರೆಲ್ಲ ನಮಗೆ ಪರಿಚಿತರು. ಅವ್ರಿಗೆ ಇಂತಿಂಥ ಪಾತ್ರವನ್ನಾಡಬೇಕೆಂದು ನಾಟಕ ಪುಸ್ತಕ ಕೊಟ್ಟರೆ ಸಾಕು ತಾವೇ ತಯಾರಾಗಿ ನಾಟಕಕ್ಕೆ ಬರುತ್ತಾರೆ.

**ರಂಗನಟಿಯಾಗಿ ಅಭಿನಯಿಸಿದ ನೀವು ಇಂದು ಸ್ವತಂತ್ರವಾಗಿ ಸಂಸ್ಥೆಯನ್ನು ನಡೆಸುತ್ತಿದ್ದೀರಿ. ಈಗ ನಿಮಗೆ ಏನೆನ್ನಿಸುತ್ತದೆ?**

ನಟಿಯಾಗಿ ಅಭಿನಯಿಸಿದ ನಾನು ಈಗ ಒಂದು ಸಂಸ್ಥೆಯನ್ನು ನಡೆಸುತ್ತಿದ್ದೇನೆ ನಿಜ. ಅದರಲ್ಲೇನೂ ಅಂತಹ ಭಿನ್ನತೆ ಕಾಣುವುದಿಲ್ಲ. ಕಲಾವಿದರನ್ನು ಕರೀಬೇಕು ಕರ್ಕೊಂಡು ಹೋಗಬೇಕು ಅನ್ನುದನ್ನು ಬಿಟ್ರೆ ಬೇರೇನೂ ಅನ್ನಿಸುವುದಿಲ್ಲ. ಇದು ಕಂಪನಿ ಅಲ್ಲ. ವರ್ಷಕ್ಕೆ ಒಂದು ಬಾರಿ ಎಲ್ಲರೂ ಸೇರಿ ನಾಟಕ ಆಡ್ತೀವಿ ಅದು ಚಿಕ್ಕೇನಕೊಪ್ಪದ ಅಜ್ಜನವರ ಆಜ್ಞೆ. ವರ್ಷಾ ವರ್ಷ ನಾಟಕ ತಪ್ಪಿಸಲಾರ್ದೆ ಆಡ್ರಿ ಅಂತ ಹೇಳಿದ್ರು. ಅದನೇ ಮುಂದುವರೆಸಿಕೊಂಡು ಹೊರಟಿರುವೆ.

**ನಿಮ್ಮಂತೆಯೇ ನಿಮ್ಮ ಮಕ್ಕಳು ಮೊಮ್ಮಕ್ಕಳು ವೃತ್ತಿರಂಗಭೂಮಿಯಲ್ಲಿ ಮುಂದುವರಿಯಲು ಆಗಿಸುತ್ತಿರಾ?**

ಇಲ್ಲ ನಾನದನ್ನು ಇಷ್ಟಪಡುವುದಿಲ್ಲ. ನನ್ನ ಬಣ್ಣದ ನೆರಳೂ ಅವರ ಮೇಲೆ ಬೀಳು ಬಾರದೆಂದು ನನ್ನ ಮಕ್ಕಳನ್ನೆಲ್ಲ ನನ್ನ ತಾಯಿಯ ಅಣ್ಣನ ಹತ್ತಿರವಿಟ್ಟೇ ದೊಡ್ಡವರನ್ನಾಗಿ ಬೆಳೆಸಿದೆ. ರಂಗಭೂಮಿಯಲ್ಲಿ ಹುಡುಗರು ಬಹುಬೇಗನೆ ನಡತೆ ಕಳೆದುಕೊಳ್ಳುತ್ತಾರೆ. (ಸ್ವಲ್ಪ ಮೌನ) ಹೆಣ್ಣುಮಕ್ಕಳನ್ನು ಆ ಕ್ಷೇತ್ರಕ್ಕೆ ಇಳಿಸಲು ನನ್ನ ಮನಸ್ಸು ಒಪ್ಪಲಿಲ್ಲ. ನನ್ನ ಗಂಡ ಬಹಳ ನಿಯತ್ತಿನಿಂದ ಬದುಕಿದವರು. ಅವರ ಹೆಸರಿಗೆ ದಕ್ಕೆ ತರಬಾರದು ಎಂಬ ಕಾರಣಕ್ಕಾಗಿಯೇ ರಂಗಭೂಮಿಗೆ ಬಿಡಲಿಲ್ಲ. ಅಲ್ಲದೆ ನಟಿಯರ ಅನೇಕ ದುರಂತ ಬದುಕನ್ನು

ಕಂಡಿದ್ದೆ. ಅದಕ್ಕಾಗಿ ನನ್ನ ಮನಸ್ಸು ಹೆಣ್ಣುಮಕ್ಕಳನ್ನು ರಂಗಭೂಮಿಗೆ ಬಿಡಲು ಒಪ್ಪಲಿಲ್ಲ.

**ವೃತ್ತಿಜೀವನದ ಕುರಿತು ನಿಮಗೆ ಸಂತೃಪ್ತಿ ಇದೆಯೆ?**

ತೃಪ್ತಿಯಿದೆ. ರಂಗಭೂಮಿ ನನ್ನನ್ನು ಕರೆಯದಿದ್ದರೆ ನಾನೇನಾಗಿರುತ್ತಿದ್ದೆನೋ ಗೊತ್ತಿಲ್ಲ. ಬಣ್ಣ ನನಗೆ ಬದುಕು ನೀಡಿದೆ. ಅದಕ್ಕೆ ಕೃತಜ್ಞಳಾಗಿರುವೆ.

**ನಿಮಗೆ ಸಿಕ್ಕ ಪ್ರಶಸ್ತಿಗಳು----**

ಖಾಸಗಿಯವರು ಅನೇಕ ಪ್ರಶಸ್ತಿಗಳನ್ನು ನೀಡಿ ಗೌರವಿಸಿದ್ದಾರೆ. ೧೬-೮-೧೯೯೮ರಂದು ಕೊಟ್ರಪ್ಪ ಗೌಡ ಪಾಟೀಲ ಕಲಾರಾಧಕ ಪ್ರಶಸ್ತಿ ನೀಡಿದರು. ಬಸವಕೇಂದ್ರ ಶ್ರೀ ಮುರುಘ ರಾಜೇಂದ್ರಮಠ ಚಿತ್ರದುರ್ಗದವರು ೨೦-೧೦-೧೯೯೬ರಲ್ಲಿ ಪ್ರಶಸ್ತಿ ನೀಡಿ ಪ್ರೋತ್ಸಾಹಿಸಿ ದ್ದಾರೆ. ಸರ್ಕಾರದವರೂ ನನ್ನನ್ನು ಗೌರವಿಸಿದ್ದಾರೆ. ೧೯೮೬ರಲ್ಲಿ ಕರ್ನಾಟಕ ನಾಟಕ-ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದ್ದಾರೆ. ೧೯೯೬ರಲ್ಲಿ ಕರ್ನಾಟಕ ಸರ್ಕಾರ ರಾಜ್ಯೋತ್ಸವ ಪ್ರಶಸ್ತಿ ಕೊಟ್ಟಿದೆ. ೬೭ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನಿಸಿದ್ದಾರೆ. ಇವೆಲ್ಲ ಜೀವನದಲ್ಲಿ ಅವಿಸ್ಮರಣೀಯ ಸಂತಸದ ಕ್ಷಣಗಳನ್ನು ತಂದಿವೆ.

**ನಿಮ್ಮ ಮುಂದಿನ ಯೋಜನೆಗಳು---**

ಆ ತರಹದ ಯಾವ ಯೋಜನೆಗಳಿಲ್ಲ. ಹೀಗೆ ಯೋಜನೆ ಹಾಕುವ ತಲೆಯಿದ್ದರೆ ನನ್ನನ್ನಾರು ಹಿಡೀತಿದ್ರು. (ದೊಡ್ಡ ನಗು).

# ಮಹಿಳೆ-ಫಲವಂತಿಕೆ

ವೈ.ಸಿ.ಭಾನುಮತಿ

ಪ್ರಸಿದ್ಧ ಪಾಶ್ಚಾತ್ಯ ತತ್ವಜ್ಞಾನಿ ಅರಿಸ್ಟಾಟಲ್ ವಿಶ್ವದ ವಿಕಾಸಕ್ರಮದಲ್ಲಿ ದ್ರವ್ಯರಹಿತ ರೂಪ, ನಕ್ಷತ್ರಪ್ರಪಂಚ, ಮಾನವಪ್ರಪಂಚ, ಸಸ್ಯ ಹಾಗೂ ಪ್ರಾಣಿಪ್ರಪಂಚ, ಸಜೀವ ಪ್ರಪಂಚ, ನಿರ್ಜೀವ ಪ್ರಪಂಚ, ರೂಪರಹಿತ ದ್ರವ್ಯ ಎಂಬ ವಿಭಾಗಗಳನ್ನು ಗುರುತಿಸಿದ್ದ. ಇಲ್ಲಿ ಸಜೀವಪ್ರಪಂಚ ಎಂಬ ಮಾತು ಮುಖ್ಯ.

ಜೀವಜಗತ್ತು ಬರಿಯ ಪಶು ಪಕ್ಷಿ ಪ್ರಾಣಿಗಳಿಗೆ ಮಾತ್ರ ನಿಲ್ಲುವುದಿಲ್ಲ. ಇದು ಸಸ್ಯಕ್ಕೂ ಅನ್ವಯಿಸುತ್ತದೆ. ಆದುದರಿಂದಲೇ ನಮ್ಮ ಹಿಂದಿನವರು ಅರಳಿ ಮತ್ತು ಆಲದ ಮರಗಳಿಗೆ ಮದುವೆ ಮಾಡುತ್ತಿದ್ದರು. ಸಸ್ಯಗಳಿಗೂ ಜೀವವಿದೆ ಎಂಬ ಸಂಗತಿಯನ್ನು ಮುಂದೆ ಜಗದೀಶ್ ಚಂದ್ರಬೋಸರು ವೈಜ್ಞಾನಿಕವಾಗಿ ಪ್ರತಿಪಾದಿಸಿದರು. ಜೀವರಾಶಿಯ ಅಸ್ತಿತ್ವವೇ ಫಲಂವಂತಿಕೆಯ ಮೇಲೆ ನಿಂತಿದೆ. ಒಂದು ಜೀವ ಮತ್ತೊಂದು ಜೀವಕ್ಕೆ ಜನ್ಮನೀಡುವ ಶಕ್ತಿಯೇ ಫಲವಂತಿಕೆ (Fertility). ಸರಳೀಕರಿಸಿ ಹೇಳಬಹುದಾದರೆ ಗರ್ಭಧಾರಣ ಶಕ್ತಿ. ಇದು ಪ್ರಾಣಿಪಕ್ಷಿ ಸಸ್ಯ ಮಾನವ ಎಂಬ ಭೇದವಿಲ್ಲದೆ ಎಲ್ಲ ಜೀವರಾಶಿಗಳಲ್ಲಿಯೂ ಗೋಚರಿಸುವ ಸಾಮಾನ್ಯ ಅಂಶ.

ಫಲವಂತಿಕೆ ಎಂಬುದು ಒಂದೊಂದು ಜೈವಿಕವರ್ಗದಲ್ಲಿ ಒಂದೊಂದು ಬಗೆಯಾಗಿದೆ. ಎರೆಹುಳು ಹೈಡ್ರಾದಂಥ ಪ್ರಾಣಿಗಳು ಏಕಲಿಂಗಿಗಳಾಗಿರುವುದರಿಂದ ಇಲ್ಲಿ ಒಂದೇ ಶರೀರ ಎರಡಾಗುತ್ತವೆ. ಬಾಳೆಗೆ ಒಮ್ಮೆ ಫಲಬಿಟ್ಟ ಬಳಿಕ ಸೃಜನಕ್ರಿಯೆ ನಶಿಸಿಹೋಗುತ್ತದೆ. ಈ ಕುರಿತು ಜನಪದದಲ್ಲಿ "ಚೇಳಿಗೆ ಬಸುರಾದುದೇ ಕೊನೆ, ಬಾಳೆಗೆ ಫಲವಾದುದೇ ಕೊನೆ" ಎಂಬ ಗಾದೆ ಮಾತು ಜನಜನಿತವಾಗಿದೆ. ದನಗಳಲ್ಲಿ ವರ್ಷಕ್ಕೊಮ್ಮೆ ಮಾತ್ರ ಫಲವಂತಿಕೆ. ಪ್ರಾಣಿಗಳಲ್ಲಿ Breeding Season ಎಂದು ನಿರ್ದಿಷ್ಟ ಅವಧಿ ಇರುತ್ತದೆ. ಫಲವಂತಿಕೆ ಒಂದೊಂದು ಜೀವಿಯಲ್ಲಿ ಒಂದೊಂದು ಬಗೆಯಾಗಿ ಅಪಾರ ವೈವಿಧ್ಯತೆಗೆ ಆಸ್ಪದ ನೀಡಿದ್ದು ಈ ನಿಟ್ಟಿನ ಅಧ್ಯಯನ ಕುತೂಹಲಕಾರಿಯಾಗಿದೆ.

ನಿಸರ್ಗದ ಅನಂತ ಜೀವರಾಶಿಗಳನ್ನು ಗಮನಿಸಿದ ಮಾನವ ಭೂಮಿಯನ್ನು ಅದ್ಭುತ ಫಲವಂತಿಕೆಯ ಮೊತ್ತವೆಂದು ಭಾವಿಸಿರುವ ಸಾಧ್ಯತೆಯನ್ನು ಬುಡಕಟ್ಟು ಸಂಸ್ಕೃತಿಯಲ್ಲಿರುವ ಕೆಲವೊಂದು ಆಚರಣೆಗಳು ವ್ಯಕ್ತಪಡಿಸುತ್ತವೆ. ಉದಾಹರಣೆಗೆ ಮಲೆನಾಡಿನ ಭೂಮಿ

ಕಂಡಕಂಡ ಕಲ್ಲಿಗೆಲ್ಲ ಕೈಮುಗಿದಾಯ್ತು
ತಿನ್ನಬಾರದ ಮದ್ನೆಲ್ಲ ತಿಂದದ್ದಾಯ್ತು
ಮಾಡಬಾರದ ಮಾಟ ಮಾಡಿದ್ದಾಯಿತು
ಆದರೂ ಶಿವ ಒಂದು ಸಂತಾನ ಕೊಡಲಿಲ್ಲ

ಎಂಬ ಗಾದೆಮಾತಿನಲ್ಲಿ ಈ ಬಗೆಯ ಚಿಕಿತ್ಸೆಯ ಮಿತಿಯನ್ನು ತಿಳಿಯಬಹುದು. ಶಿಷ್ಟಸಾಹಿತ್ಯದಲ್ಲಿ ಪುತ್ರಕಾಮೇಷ್ಟಿಯಜ್ಞದಿಂದ ಮಕ್ಕಳನ್ನು ಪಡೆಯುತ್ತಿದ್ದ ಸನ್ನಿವೇಶಗಳಿವೆ. ರಾಮಾಯಣದಲ್ಲಿ ದಶರಥ ಯಜ್ಞ ಏರ್ಪಡಿಸಿದ್ದು. ಆಮೂಲಕ ಆತನ ಪತ್ನಿಯರು ಪಾಯಸ ಸೇವಿಸಿ ಪುತ್ರರನ್ನು ಪಡೆದದ್ದು ಕ್ಷತ್ರಿಯರಲ್ಲಿ ಚಾಲ್ತಿಯಲ್ಲಿದ್ದ ಫಲವಂತಿಕೆ ಸಂಬಂಧದ ಆಚರಣೆಯಿರಬಹುದು.

ಕನ್ನಡ ಜನಪದಸಾಹಿತ್ಯದಲ್ಲಿ ಭಾಷಿಕವಾಗಿ ಫಲವಂತಿಕೆಯ ಉಲ್ಲೇಖಗಳು ಹಲವೆಡೆ ಬಂದಿವೆ. ಅಂತೆಯೇ ಇದರೊಂದಿಗೆ ಅಭಾಷಿಕ ವಲಯದಲ್ಲಿರುವ ಆಚರಣೆಗಳು ನಂಬಿಕೆಗಳು ಮುಂತಾದುವುಗಳ ಅಧ್ಯಯನಗಳು ಜನಪದರು ಫಲವಂತಿಕೆಯ ಸ್ವರೂಪವನ್ನು ಯಾವ ರೀತಿ ನಿರ್ವಚಿಸಿಕೊಂಡಿದ್ದರೆಂಬುದನ್ನು ತಿಳಿಸುತ್ತವೆ. ಈಗ ಆ ಕುರಿತು ಸ್ಥೂಲನೋಟ ಬೀರಬಹುದು.

ಭಾರತೀಯರಲ್ಲಿ ಮದುವೆಯ ಮುಖ್ಯ ಉದ್ದೇಶ ಲೈಂಗಿಕ ತೃಪ್ತಿಗಿಂತ ಮಿಗಿಲಾಗಿ ಸಂತಾನ ಮುಂದುವರಿಕೆಯಾಗಿದೆ. ವಂಶೋದ್ಧಾರಕ್ಕೆ ಬಹಳ ಪ್ರಾಮುಖ್ಯತೆ ಸಿಕ್ಕಿದ್ದರಿಂದ ಫಲವಂತಿಕೆಗೆ ವಿಶೇಷ ಮಹತ್ವ ನೀಡಲಾಯಿತು. ಜನಪದರ ದೈವಾರಾಧನೆಯಿಂದ ಹಿಡಿದು ಮದುವೆಯ ವರೆಗೆ ಕಂಡುಬರುವ ಅನೇಕ ಸಂಪ್ರದಾಯಗಳು ಫಲವಂತಿಕೆಯನ್ನು ಸಂಕೇತಿಸುತ್ತವೆ. ಮದುವೆಯ ಸಾರ್ಥಕ್ಯಮಕ್ಕಳನ್ನು ಪಡೆಯುವುದರಲ್ಲಿದೆ ಎಂಬ ಧೋರಣೆ ಇದ್ದುದರಿಂದ "ಉತ್ತಲ್ಲದೆ ಮಣ್ಣಲ್ಲ ಹೆತ್ತಲ್ಲದೆ ತಾಯಲ್ಲ" "ಹೆಣ್ಣು ಹೆತ್ತಮನೆಯ ದೀಪ" ಎಂಬ ನಾಣ್ನುಡಿಗಳು ಹುಟ್ಟಿಕೊಳ್ಳುವಂತಾಯಿತು. ಮಕ್ಕಳಿಲ್ಲದ ಮಹಿಳೆ ಸಮಾಜದ ಕ್ರೂರ ದೃಷ್ಟಿಗೆ ಬೀಳಬೇಕಾಯಿತು ಸಂತಾನಹೀನತೆಗೆ ಗಂಡಿನದೈಹಿಕ ದೋಷವಿದ್ದ ಸಂದರ್ಭದಲ್ಲಿಯೂ ಪುರುಷ ಪ್ರಧಾನ ಸಮಾಜ ಅದನ್ನು ಮುಚ್ಚಿಹಾಕಿ ಆ ದೋಷವನ್ನು ಹೆಣ್ಣಿನ ತಲೆಗೇ ಕಟ್ಟಿ ಆಕೆಯನ್ನು ನಿಕೃಷ್ಟವಾಗಿ ಕಾಣುತ್ತಿದ್ದದ್ದನ್ನು ಜನಪದಗೀತೆಗಳು ಮನಮಿಡಿಯುವಂತೆ ಚಿತ್ರಿಸಿವೆ.

ಬಾಲಕರಿಲ್ಲದ ಬಾಲೆದ್ಯಾತರ ಜನ್ಮ
ಬಾಡೀಗಿ ಎತ್ತು ದುಡಿದಂಗ ಬಾಳೆಲೆಯ
ಹಾಸ್ಯುಂಡು ಬೀಸಿ ಒಗೆದಂಗ

ಇಲ್ಲಿ ಬಾಡಿಗಿ ಎತ್ತು ಬಾಳೆಲೆಯ ದೃಷ್ಟಾಂತಗಳು ಆಕೆಯ ಸ್ಥಿತಿಯನ್ನು ತುಂಬ ಸಮರ್ಥವಾಗಿ ಧ್ವನಿಸಿವೆ. ಮನುಷ್ಯ ಪ್ರಯತ್ನವನ್ನು ಮೀರಿದ ದೈವಪ್ರಯತ್ನದಲ್ಲಿ ನಂಬಿಕೆ ಇಟ್ಟ ಮುಗ್ಧಜನ ಮಕ್ಕಳಿಗಾಗಿ ದೇವರ ಮೊರೆಹೋಗುವುದು ಇಂದಿಗೂ ಕಾಣಬರುವ

ಸಾಮಾನ್ಯ ದೃಶ್ಯ. ನಾಗ ಸಂತಾನ ಕರುಣಿಸುವ ದೇವತೆ ಎಂಬ ಪ್ರತೀತಿ ಇದೆ. ಜನಪದ ಕಥೆಯಲ್ಲಿ ಒಂದೆಡೆ ಮಕ್ಕಳಿಲ್ಲದರಾಣಿ "ಕೊನೆದಾಗಿ ನಾಗಪ್ಪನ ಪೂಜೆ ಮಾಡ್ಬುಡದು ನಲವತ್ತೆಂಟು ದಿನ, ಆಗಲಾದರೂ ಅವ ದಯ ಬಂದು ನಮಗೆ ಮಕ್ಕಳ ಫಲ ಕೊಡಲಿ, ಇಲ್ಲದಿದ್ದರೆ ಅವನಿಂದಲೇ ಸತ್ತು ಹೋಗದು ಸರಿ. ಮಕ್ಕಳಿಲ್ಲದ ಮೇಲೆ ಬಂಜೆಯಾಗಿ ಈ ಪ್ರಪಂಚದಲ್ಲಿ ಇರಬಾರದು"[೧] ಎಂದು ಹೇಳುವಲ್ಲಿ ಫಲವಂತಿಕೆಗಾಗಿ ನಾಗಾರಾಧನೆ ಮಾಡುವ ಸಂಪ್ರದಾಯ ಎಷ್ಟು ವ್ಯಾಪಕವೆನ್ನುವುದು ತಿಳಿದುಬರುತ್ತದೆ. ಇದೇ ರೀತಿ ಅನೇಕ ಸ್ಥಳೀಯ ದೇವತೆಗಳು ಫಲವಂತಿಕೆ ನೀಡುವಲ್ಲಿ ಪ್ರಸಿದ್ಧವಾಗಿವೆ. ಸುಗ್ಗಿಹಬ್ಬದಲ್ಲಿ ಸುಗ್ಗಿ ಅಮ್ಮನಿಗೆ ಪ್ರಾರ್ಥಿಸಿ ಕೊಂಡರೆ ಮಕ್ಕಳಾಗುವುದೆಂಬ ನಂಬಿಕೆ ಮಲೆನಾಡಿನಲ್ಲಿದೆ. ಮೈಸೂರು ಸಮೀಪದ ಗುಂಡ್ಲು ಪೇಟೆ ತಾಲ್ಲೂಕು ಗೋಪಾಲಸ್ವಾಮಿ ಬೆಟ್ಟದ ಕೃಷ್ಣ ಸಂತಾನ ಗೋಪಾಲಸ್ವಾಮಿ ಎಂದೇ ಹೆಸರುವಾಸಿ. ಇಟಲಿಯಲ್ಲಿ ಡಯಾನ (Diana) ದೇವತೆಯನ್ನು ಪ್ರಜನನ ದೇವತೆ ಎಂದು ಪೂಜಿಸುತ್ತಾರೆ. ಇಂಥ ಹತ್ತಾರು ನಿದರ್ಶನಗಳು ಅಲ್ಲಲ್ಲಿ ಸಿಕ್ಕುತ್ತವೆ. ಜನಪದ ಕಥೆಗಳಲ್ಲಿ ಫಲವಂತಿಕೆ ಸಹಜ ಜೈವಿಕ ಕ್ರಿಯೆಯಾಗದೆ ಅಸಾಮಾನ್ಯ ಸಂಗತಿಯಾಗಿ ವ್ಯಕ್ತವಾಗಿದೆ. ಗಂಗೆ ಮಕ್ಕಳ ಫಲ ಕೊಡುವುದು, ಮಾವಿನ ಹಣ್ಣು ಸೇವಿಸಿ ಮಕ್ಕಳಾಗುವುದು, ಋಷಿಮಕ್ಕಳ ಫಲ ಕೊಡುವುದು. ಮಕ್ಕಳನ್ನು ಪಡೆಯಲು ತೀರ್ಥಯಾತ್ರೆ ಹೋಗುವುದು, ಮಕ್ಕಳಿಗಾಗಿ ದೇವರಲ್ಲಿ ಬೇಡುವುದು, ಋಷಿ ಮಂತ್ರಿಸಿ ಕೊಟ್ಟ ಬಾಳೆಹಣ್ಣಿನಿಂದ ಮಕ್ಕಳಾಗುವುದು ಮೊದಲಾದುವು ಆಶಯಗಳಾಗಿ ಕಥೆಗಳಲ್ಲಿ ಎಡೆಪಡೆದಿವೆ.

ಮಕ್ಕಳಿಲ್ಲದ ಹೆಣ್ಣು ಸಮಾಜದಲ್ಲಿ 'ಬಂಜೆ' 'ಗೊಡ್ಡಿ' ಎಂಬ ಕುಶಬ್ದಗಳಿಂದ ಗುರುತಿಸಲ್ಪಡುತ್ತಿದ್ದಳು. ಅಂಥ ಹೆಣ್ಣು

> ಕಂದನ ಕುಡು ಶಿವನೆ ಬಂಧನ ಬಿಡಲಾರೆ
> ಹಂಗೀನ ಬಾನ ಉಣಲಾರೆ ಮರ್ತ್ಯದಾಗ
> ಬಂಜೆಂಬ ಶಬುದ ಹೊರಲಾರೆ

ಎಂದು ತನ್ನ ಅಳಲು ತೋಡಿಕೊಂಡಿದ್ದಾಳೆ. ಫಲವಂತಿಕೆಯ ಕೊರತೆಯನ್ನು ಪುಣ್ಯಪಾಪಗಳ ಪರಿಕಲ್ಪನೆಯೊಂದಿಗೆ ಜೋಡಿಸಿರುವುದುಂಟು. ಹಾಲಕ್ಕಿ ಗೌಡರಲ್ಲಿ ಪುಣ್ಯವಂತರಿಗೆ ಮಾತ್ರ ಫಲವಂತಿಕೆ, ಪಾಪಿಷ್ಟರಿಗೆ ಇಲ್ಲವೆಂಬ ನಂಬಿಕೆಯಿದೆ

> ಪುಣ್ಯವಂತರಿಗೆ ಪಲಗೋಲೆ ಎಲೆಹೆಣ್ಣೆ
> ಪಾಪಗೆಟ್ಟರಿಗೆ ಪಲವಿಲ್ಲ

ಎಂದು ಹಾಡುವ ಅವರು ಮಕ್ಕಳು ಮತ್ತು ಗೋವುಗಳು ವೃದ್ಧಿಸಬೇಕೆಂದು ಆಶಿಸುತ್ತಾರೆ. ಫಲವಂತಿಕೆಯ ಸುತ್ತ ಹಲವು ಬಗೆಯ ಆಶಯಗಳು ನಂಬಿಕೆಗಳು ಬೆಳೆದು ಬಂದಿದ್ದರೂ

---

೧. 'ದಾಳಿಂಬೆರಾಣಿ ಮತ್ತು ಇತರ ಕಥೆಗಳು' ಸಂ. ಟಿ.ಎಸ್. ರಾಜಪ್ಪ, ಪುಟ ೧

ಪುರುಷನ ಪಾತ್ರವಿಲ್ಲದೆ ಸೃಷ್ಟಿಕ್ರಿಯೆ ಅಸಾಧ್ಯವೆಂಬ ವೈಜ್ಞಾನಿಕ ತಿಳಿವಳಿಕೆ ಜನಪದರಲ್ಲಿತ್ತು. ಆದುದರಿಂದ ಸಂತಾನಾಪೇಕ್ಷೆಯುಳ್ಳ ವಿವಾಹಿತ ಸ್ತ್ರೀಗೆ ದೇವರ ಸೇವೆಯ ಹೆಸರಿನಲ್ಲಿ ಒಂದುರೀತಿಯ ನಿಯೋಗಕ್ಕೆ ಜಾತ್ರೆಗಳಲ್ಲಿ ಅವಕಾಶ ಕಲ್ಪಿಸಲಾಗಿತ್ತು. ಗಂಡ ತನ್ನ ದೈಹಿಕ ದೋಷ ರಹಸ್ಯವಾಗಿಡಲು ಈ ಬಗೆಯ ಮಿಲನಕ್ಕೆ ಒಪ್ಪಿಗೆ ನೀಡಿದ್ದ. ಸಮಾಜ ಕೂಡ ವಂಶಾಭಿವೃದ್ಧಿಗಾಗಿ ಇದಕ್ಕೆ ಪರೋಕ್ಷ ಸಮ್ಮತಿ ಕೊಟ್ಟಿತ್ತು. ಹೆಣ್ಣು ಸಂತಾನಾಪೇಕ್ಷೆಯ ಈಡೇರಿಕೆಗಾಗಿ ಪತಿಯೂ ಅಲ್ಲದ, ಪ್ರಿಯಕರನೂ ಅಲ್ಲದ ಪರಪುರುಷನಿಂದ ಇಂಥ ಬಳಸುಮಾರ್ಗ ಹಿಡಿಯಲು ಯತ್ನಿಸುತ್ತಿದ್ದಳು. ಆ ಹೊತ್ತಿನ ಆಕೆಯ ಮಾನಸಿಕ ತುಮುಲ ಯಾವ ಬಗೆಯದಾಗಿರಬಹುದೆಂದು ಸಮಾಜ ಯೋಚಿಸುತ್ತಿರಲಿಲ್ಲ. ದಕ್ಷಿಣಕನ್ನಡ ಜಿಲ್ಲೆಯ ಸಿರಿಜಾತ್ರೆ ಫಲವಂತಿಕೆಗೆ ಸಂಬಂಧಿಸಿದ ಜಾತ್ರೆಗಳಲ್ಲಿ ಒಂದು. ನಂಜನಗೂಡು ತೇರಿನಲ್ಲಿ 'ತೇರಡಿ ಸೇವೆ'ಮಾಡಿದರೆ ಮಕ್ಕಳು ಜನಿಸುವರೆಂಬ ನಂಬಿಕೆ ಬಲವಾಗಿದೆ. ಚಿತ್ರದುರ್ಗದ ನಾಯಕನಹಟ್ಟಿ ಜಾತ್ರೆಯಲ್ಲಿ ಇದಕ್ಕೆ ಅವಕಾಶವಿತ್ತೆಂದು ತಿಳಿದುಬರುತ್ತದೆ ಇಂಥ ಹಲವು ಜಾತ್ರೆಗಳು ಕರ್ನಾಟಕದಾದ್ಯಂತದಲ್ಲಿವೆ.

ವೃಕ್ಷಗಳಲ್ಲಿ ಕೆಲವನ್ನು ಫಲವಂತಿಕೆಯ ವೃಕ್ಷವೆಂದು ಪರಿಗಣಿಸಿ ಪೂಜಿಸುವ ಪರಿಪಾಠ ಅನೇಕ ಸಂಸ್ಕೃತಿಗಳಲ್ಲಿವೆ. ಅಶ್ವತ್ಥವೃಕ್ಷದ ಪೂಜೆಯಂತು ತುಂಬ ವ್ಯಾಪಕವಾಗಿದೆ.

ಅಶ್ವತ್ಥ ಕಟ್ಟೆ ಪ್ರದಕ್ಷಿಣೆ ಮಾಡಿದರೆ ಮಕ್ಕಳಾಗುತ್ತೆ ಅಂದರೆ
ಒಂದು ಸುತ್ತು ಸುತ್ತಿ ಹೊಟ್ಟೆ ಮುಟ್ಟಿ ನೋಡಿಕೊಂಡಳಂತೆ

ಎಂಬ ಗಾದೆ ಮಾತು ಇದರ ಪ್ರಾಚುರ್ಯತೆಯನ್ನು ತಿಳಿಸುತ್ತದೆ.

ಮಾನವನ ನಾಗರಿಕ ಇತಿಹಾಸದಲ್ಲಿ ಬೇಟೆ ಮೊದಲ ಹಂತ. ಪುರುಷ ಬೇಟೆಯಾಡುವ ಮೂಲಕ ಉತ್ಪಾದಕನಾಗಿದ್ದರೆ ಹೆಣ್ಣು ಕೂಡ ಮರುತ್ಪಾದಕಿಯಾಗಿ ಮಹತ್ವಪೂರ್ಣ ಭೂಮಿಕೆ ನಿರ್ವಹಿಸುತ್ತಿದ್ದಳು.ಆಗ ಹೆಣ್ಣು ಗಂಡುಗಳ ಸ್ಥಾನಮಾನಗಳಲ್ಲಿ ತರತಮಗಳಿಗೆ ಅವಕಾಶವಿರಲಿಲ್ಲ. ಗಂಡಿನ ಉತ್ಪಾದನ ಸಾಮರ್ಥ್ಯಕ್ಕಿಂತ ಫಲವಂತಿಕೆಯ ಆಧಾರದಿಂದ ಹೆಣ್ಣಿನ ಮರುತ್ಪಾದನೆಗೆ ಮಹತ್ವವಿದ್ದುದರಿಂದ ಸಾಮಾಜಿಕವಾಗಿ ಹೆಣ್ಣಿನ ಸ್ಥಾನ ಮೇಲ್ಪಟ್ಟದ್ದಾಗಿತ್ತು. ಕೃಷಿಯ ಆವಿರ್ಭಾವವೇ ಹೆಣ್ಣಿನಿಂದ ಆಯಿತು ಎಂಬ ವಿಚಾರ ವಿರುವುದರಿಂದ ಇಂದಿಗೂ ಕೃಷಿಯ ಎಲ್ಲ ಚಟುವಟಿಕೆಗಳನ್ನು ಆಕೆಯೇ ಆರಂಭಿಸಿದರೆ ಒಳಿತಾಗುವುದೆಂಬ ಅಭಿಪ್ರಾಯವಿದೆ. ಇಂದಿಗೂ ಬಿತ್ತನೆ ಮತ್ತು ಕೊಯಿಲಿಗೆ ಸಂಬಂಧಿಸಿದ ಆಚರಣೆಗಳಲ್ಲಿ ಗಂಡು ದೇವತೆಗೆ ಹೆಣ್ಣಿನ ಗುಣಲಕ್ಷಣಗಳನ್ನು ವಿಧಿವತ್ತಾಗಿ ವಹಿಸಿಕೊಡುವ ಸಂಪ್ರದಾಯವಿದೆ. ಮದುವೆಯ ಆಚರಣೆಗಳು ಹೆಣ್ಣಿನ ನಿಯಂತ್ರಣದಲ್ಲಿರುವುದು ಕೂಡ ಈ ಕಾರಣವಾಗಿಯೇ ಇರಬೇಕು. ಆದರೆ ಬಂಜೆ ಹೆಣ್ಣು ನೆಲದ ಫಲವತ್ತತೆಯನ್ನು ಬರಡುಗೊಳಿಸುವವಳೆಂಬ ನಂಬಿಕೆ ಜನಪದರಲ್ಲಿದೆ.

ಪ್ರಾಣಿಗಳಲ್ಲಿ ಏಕಲಿಂಗಿ ಪ್ರಾಣಿಗಳಿರುವುದನ್ನು ಗಮನಿಸಿದ ಜನಪದ ಸಮಾಜ

ಸಂಸ್ಕೃತಿಯ ಪರಿಕಲ್ಪನೆಯಲ್ಲಿ ಮೂಡಿಬಂದ ಮಾತೃಪ್ರಧಾನ ಗ್ರಾಮದೇವತೆಗಳ ಸಂದರ್ಭದಲ್ಲಿ ಪುರುಷನ ಪ್ರವೇಶವಿಲ್ಲದೆಯೇ ಸೃಷ್ಟಿಕ್ರಿಯೆ ಸಾಧ್ಯವೆಂಬುದನ್ನು ನಿರೂಪಿಸಲು ಪ್ರಯತ್ನಿಸಿದೆ. ಇಲ್ಲಿ ದೇವತೆಯ ಗಂಡನ ಪ್ರಸ್ತಾಪ ಬಾರದಿದ್ದರೂ ಆಕೆಯ ಮಕ್ಕಳ ಬಗ್ಗೆ ಕಥೆ ಹೇಳುವುದುಂಟು. ಮಗುವಿನ ತಂದೆ ಯಾರು ಎನ್ನುವುದಕ್ಕಿಂತ ತಾಯಿ ಯಾರೆಂಬುದು ಮುಖ್ಯವಾದದ್ದು. ಹೆಣ್ಣಿನ ಫಲವಂತಿಕೆ ಶಕ್ತಿಯಿಂದ ಎಂಬುದು ಗ್ರಹೀತವಾಗುತ್ತದೆ. ಮಾತೃಪ್ರಧಾನ ಕುಟುಂಬದಲ್ಲಿ ಅಧಿಕಾರ ಮಹಿಳೆಯ ಕೈವಶದಲ್ಲಿತ್ತು. ಕ್ರಮೇಣ ಗಂಡಿನ ಉತ್ಪಾದನೆ ಏರುಗತಿಯಲ್ಲಿ ಬೆಳೆದದ್ದರಿಂದ ಅಧಿಕಾರದ ಚೆಂಡು ಹೆಣ್ಣಿನ ಕೈಯಿಂದ ಜಾರಿ ಗಂಡಿನ ಕಡೆಗೆ ಬಿದ್ದಿತು. ಸಾಮಾಜಿಕವಾಗಿ ಹೆಣ್ಣಿನ ಸ್ಥಾನಮಾನದಲ್ಲೂ ಪಲ್ಲಟಗಳು ಕಾಣಿಸಿಕೊಂಡು ಅವಳ ವ್ಯಕ್ತಿತ್ವವನ್ನು ದಮನಗೊಳಿಸಲಾಯಿತು.

ಹೆಣ್ಣಿಗೆ ಸಂಬಂಧಿಸಿದ ಬಾಹ್ಯ ಆಚರಣೆಗಳೆಲ್ಲ ಆಕೆಯ ಫಲವಂತಿಕೆಯ ಆಶಯದ ಮೇಲೆ ರೂಪುಗೊಂಡಿರುವಂಥವು. ಒಸಗೆ, ಮದುವೆ, ಗರ್ಭಿಣಿ-ಈ ಅವಧಿಯಲ್ಲಿ ವಿವಿಧ ಸಂಸ್ಕೃತಿಗಳಲ್ಲಿ ಕಂಡುಬರುವ ಆಚರಣೆಗಳನ್ನು ಮತ್ತು ಆಯಾ ಸಂಸ್ಕೃತಿಯ ಮೌಖಿಕ ಸಾಹಿತ್ಯವನ್ನು ಅಭ್ಯಾಸಮಾಡಿದರೆ ಫಲವಂತಿಕೆಯ ಬಗೆಗೆ ಬೇರೆ ಬೇರೆ ಸಂಸ್ಕೃತಿಗಳಲ್ಲಿರುವ ಸಾಮ್ಯತೆ ಮತ್ತು ಭಿನ್ನತೆಗಳು ಅನಾವರಣಗೊಳ್ಳುತ್ತವೆ.

ಹೆಣ್ಣು ಋತುಮತಿಯಾದಾಗ ತನ್ನ ಬದುಕಿನಲ್ಲಿ ಮೊಟ್ಟ ಮೊದಲ ಬಾರಿಗೆ ಜೈವಿಕ ಬದಲಾವಣೆಯಾಗುತ್ತಿರುವುದನ್ನು ಅನುಭವಿಸುತ್ತಾಳೆ. ಹುಡುಗಿ ಜೀವೋತ್ಪಾದನೆಗೆ ಸಿದ್ಧಳಾದುದನ್ನು ಸೂಚಿಸುವ ಈ ಸಂದರ್ಭ ಆಕೆಯ ಕುಟುಂಬಕ್ಕೆ ಸಂತಸದಾಯಕ ವಾಗಿರುತ್ತದೆ. ಹಿಂದೆ ಬಾಲ್ಯವಿವಾಹ ರೂಢಿಯಲ್ಲಿದ್ದುದರಿಂದ ಋತಿಮತಿಯಾಗುವ ವೇಳೆಗೆ ವಿವಾಹಿತಳಾಗಿರುತ್ತಿದ್ದರೂ ಆಕೆ ಪ್ರೌಢಾವಸ್ಥೆ ತಲಪುವವರೆಗೆ ತಾಯಿಯ ಮನೆಯಲ್ಲಿಯೇ ಇರುತ್ತಿದ್ದಳು. ಅಷ್ಟರಮಟ್ಟಿಗೆ ವೈಜ್ಞಾನಿಕ ತಿಳಿವಳಿಕೆ ಆ ಸಮಾಜಕ್ಕಿತ್ತು. ಮಗಳು ಋತುಮತಿಯಾದಾಗ ತಾಯಿ ಮೊದಲು ನೋಡಬಾರದೆಂಬ ನಂಬಿಕೆ ಇದೆ. ಯಾವದಿನ ನೆರೆವರೆ ಶುಭ ಯಾವದಿನ ಅಶುಭ ಎಂದು ಜ್ಯೋತಿಷ್ಯವನ್ನು ಹೇಳುವುದುಂಟು. ಕಾಡುಗೊಲ್ಲ ಸಂಸ್ಕೃತಿಯಲ್ಲಿ ಮೈನೆರೆದಾಗ ಹಾಡುವ ಪದಗಳಲ್ಲಿ.

> ಸುಕ್ರವಾರದ ದಿನ ಪುತ್ರಮ್ಮ ಮೈನೆರೆತಾರೆ
> ಅವರಪ್ಪ ಆರೋರನ ಬೆಸಗೆಂಡು ಕೇಳ್ಯಾನೆ
> ಪುತ್ರಮ್ಮ ನೆರೆತ ಗಳಿಗೇಯ
> ಪುತ್ರಮ್ಮ ನೆರೆತ ಗಳಿಗೇಯ ಕೇಳಿದರೆ
> ವುಟ್ಟೀದ ಮನೆಗೆ ಜಯಜಯ

ಎಂದು ಜೋಯಿಸರನ್ನು ಕೇಳುವ ಪ್ರಸ್ತಾಪವಿದೆ. ಹುಡುಗಿಯ ಋತುಸ್ನಾನವಾಗುವವರೆಗೆ ಆಕೆ ಅಸ್ಪೃಶ್ಯಳು. ಮನೆಯ ಒಳಾಂಗಣಗಳಿಗೆ ಪ್ರವೇಶಿಸುವಂತಿಲ್ಲ. ಬಯಲು ಸೀಮೆಯಲ್ಲಿ ಹೆಂಡತಿ ಋತುವಾದಾಗ ಗಂಡನಿಗೆ ಹದಿನಾರುದಿನ ಒಕುಳಿಶಾಸ್ತ್ರಮಾಡುವರು, ಗುಡ್ಲು ಹಾಕಿ

ಇರುವುದಿಲ್ಲ. ಅದು ಯಾವಾಗ ಬೇಕಾದರೂ ಸಂಭವಿಸಬಹುದು. ಹಾಲು ಕಾಯಿಸಿ ಹಾಲು ನೆಲುವಿಗಿಟ್ಟು, ಅಣ್ಣನಿಗೆ ಉಣ್ಣಲು ನೀಡಿ ಹೆಣ್ಣು ನೆರೆದಿದ್ದಾಳೆ, ತುಪ್ಪ ಕಾಯಿಸುತ್ತ ಎಮ್ಮೆ ಹಾಲು ಕರೆಯುತ್ತ ನೆರೆದಿದ್ದಾಳೆ ಎಂದು ಕಾಡುಗೊಲ್ಲರು ಹಾಡುತ್ತಾರೆ. ಈ ಆಚರಣೆಯಲ್ಲಿ ಹಾಲು ಜಿನುಗುವ ವೃಕ್ಷ, ಹಾಲು, ತುಪ್ಪ ಇವೆಲ್ಲವೂ ಸಾಂಕೇತಿಕವಾಗಿ ಬಂದಿವೆ. ಮಗಳು ಋತುಮತಿಯಾದುದನ್ನು ಅನುಭವದಿಂದ ಅರಿತ ತಾಯಿ ಈ ಬಗ್ಗೆ ಕೇಳಿದಾಗ ಮಗಳು -

ನಿಮ್ಮಾಣೆಯಮ್ಮ ನಿಮ್ಮ ದೇವರಾಣೆ
ಹಣ್ಣು ಒಡಿವಿದ್ದೆ ತನಿಯಣ್ಣು ದಾಳಿಂಬದ
ಹಣ್ಣೊಡೆದೇ ಮ್ಯಾಲೆ ಸಿಡಿದಾವೆ

ಎಂದು ಮಾರ್ಮಿಕವಾಗಿ ಉತ್ತರಿಸಿರುವಲ್ಲಿ ಹಾಡುಗಾತಿಯ ಜಾಣ್ಮೆಯೂ ವ್ಯಕ್ತವಾಗಿದೆ. ಋತುಮತಿಯಾದ ಹುಡುಗಿಗೆ ಎಳ್ಳು ಮತ್ತು ಮೆಂತ್ಯದಿಂದ ಸಿದ್ಧಪಡಿಸಿದ ತಿನಿಸುಗಳನ್ನು ಹೆಚ್ಚಾಗಿ ಕೊಡುತ್ತಾರೆ. ಕಾಡುಗೊಲ್ಲರ ಹಾಡುಗಳಲ್ಲಿ ಗೆಳತಿಯರು ಚಿಗಳಿತರುವುದು, ಸೂತಕದ ಬಟ್ಟೆ ಶುಚಿಗೊಳಿಸಲು ಅಗಸಿತಿಗೆ "ಬಾಲಮ್ಮ ನೆರೆತು ವೊರಗವಳೆ" ಎಂದು ತಿಳಿಸುವುದು, ಹುಡುಗಿಗೆ 'ಹೂವಿನ ಗುಡಾರ ಹೊಯ್ಸಾರೆ' ಎಂದು ಹೇಳುವುದು ಆ ಸಮಾಜದ ಸಂಪ್ರದಾಯಗಳನ್ನು ಹಂತಹಂತವಾಗಿ ಪ್ರಕಟಿಸುವ ಪರಿಯಾಗಿದೆ. ಮನ್ಮಥನನ್ನು ಹೂಬಾಣ ಎಂದು ಕರೆಯುವುದುಂಟು. ಹಿಂದೆ ಹೆಂಡತಿ ಮೈನೆರೆದ ಸುದ್ದಿ ಕೇಳಿದರೆ ಗಂಡಿಗೆ ಮಲ್ಲಿಗೆದಂಡೆ ಕಳಿಸುವ ಸಂಪ್ರದಾಯವಿತ್ತು. ಹೂವು ಕಾಮದ ಸಂಕೇತವೂ ಹೌದು. ಇಲ್ಲಿ ಹೆಣ್ಣಿಗೆ ಹೂವಿನ ಗೂಡಾರ ಕಟ್ಟಿದ್ದಾರೆನ್ನುವುದು ಫಲವಂತಿಕೆಗೆ ಸಿದ್ಧಳಾದುದನ್ನು ವ್ಯಕ್ತಪಡಿಸುತ್ತದೆ. ಕಾಡು ಗೊಲ್ಲರು ಗುಡಿಸಿಲಿಗೆ ಬೇವು ನಿಂಬೆಗಳ ತೋರಣ ಕಟ್ಟುವುದು, ಸ್ನಾನಕ್ಕೆ ಅರಿಸಿನ ಬೆರೆಸುವುದು ಇವೆಲ್ಲ ಆ ಸಾಮಗ್ರಿಗಳಲ್ಲಿರುವ ಔಷಧೀಯ ಗುಣವನ್ನು ಅರಿತಿದ್ದರೆಂಬುದರ ಕುರುಹು. ಹೆಣ್ಣಿಗೆ ಸೂತಕಕಳೆದ ಬಳಿಕ ಹೂವು ಹಣ್ಣು ಕಾಯಿಯನ್ನು ಮಡಿಲಿಗೆ ಇಟ್ಟು ಮಡಿಲು ದುಂಬುವ ಶಾಸ್ತ್ರದಲ್ಲಿಯೂ ಫಲವಂತಿಕೆಯ ಆಶಯವನ್ನು ಗುರುತಿಸಬಹುದು.

ಮದುವೆ ಸಂಪ್ರದಾಯದ ಆಚರಣೆಗಳಲ್ಲಿ ಅಕ್ಕಿ ಮತ್ತು ಬಾಳೆಹಣ್ಣು ಪ್ರಮುಖ ಸ್ಥಾನ ಪಡೆದಿವೆ. ಅನ್ನದಿಂದಲೇ ಪ್ರಾಣಿಗಳ ಹುಟ್ಟು ಅನ್ನದಿಂದಲೇ ಜೀವ ಎಂಬ ಮಾತು ಉಪ ನಿಷತ್ತಿನಲ್ಲಿ ಉಕ್ತವಾಗಿದೆ. ಈ ಹಿನ್ನೆಲೆಯಲ್ಲಿಯೂ ಅಕ್ಕಿ ಜೀವಂತಿಕೆಯ ಚಿಹ್ನೆಯಾಗಿದ್ದು ಮದುವೆಯ ಸಂಪ್ರದಾಯಗಳು ಈ ನೆಲಗಟ್ಟಿನ ಮೇಲೆ ನಿಂತಿವೆ.

ಜನಪದ ಸಾಹಿತ್ಯ ತನ್ನ ಅನುಭವದ ತೆಕ್ಕೆಗೆ ಒಳಪಟ್ಟ ಎಲ್ಲ ಸಂಗತಿಗಳನ್ನು ಅಭಿವ್ಯಕ್ತಗೊಳಿಸುವುದರಿಂದ ಗರ್ಭಿಣಿಗೆ ಸಂಬಂಧಿಸಿದ ಆಚರಣೆಗಳು ಇಲ್ಲಿ ಪ್ರಸ್ತಾಪಿತ ವಾಗಿವೆ. ಹೆಣ್ಣು ಫಲವತಿಯಾದಾಗ ಆಕೆಯ ಶರೀರದಲ್ಲಿ ಅನೇಕ ರೀತಿಯ ಬದಲಾವಣೆ ಗಳಾಗುತ್ತವೆ. ವಂಶವಾಹಕಳಾದ ಗರ್ಭಿಣಿಗೆ ಕೆಲವು ಆಚರಣೆಗಳನ್ನು ಜನಪದಕಥೆಗಳು ಸಾಂದರ್ಭಿಕವಾಗಿ ವರ್ಣಿಸಿವೆ. ಉದಾಹರಣೆಗೆ ಬೆಟ್ಟಬ್ಯಾಗೆಗೆ ಬಿದ್ದವಳು ಕಥೆಯಲ್ಲಿ -

"ಆಗ ಶೀಲವತಿ ಗರ್ಭಿಣಿಯಾದ್ಲು. ಐದನೆಯ ತಿಂಗಳಿಗೆ ಮೊಗ್ಗು ಮುಡಿಸಿದರು, ಎಂಟನೆಯ ತಿಂಗಳಿಗೆ ಅವಳ ತಂದೆ ತಾಯಿ ಬಂಧು ಬಳಗನ ಬರಮಾಡ್ಕಂಡು ಶೀಮಂತ ಮಾಡಿದರು. ಚೊಚ್ಚಲಹೆರಿಗೆ ತೌರಮನೇಲಿ ನಡೆಸಬೇಕೆಂದು ಶೀಲವತೀನ ತಮ್ಮ ಜೊತೇಲಿ ಕಳ್ಸಕಂಡು ತಮ್ಮ ಪಟ್ಟಣಕ್ಕೆ ಹೋದರು"[1] ಎಂಬ ವಿವರವಿದ್ದು ಗರ್ಭಿಣಿಯ ಸಂಸ್ಕಾರಗಳ ಮೇಲೆ ಬೆಳಕು ಚೆಲ್ಲುತ್ತದೆ.ಇದೇ ಕಥೆಯಲ್ಲಿ ಗರ್ಭಿಣಿಯಲ್ಲಿ ಕಾಣಿಸುವ ಶಾರೀರಿಕ ವ್ಯತ್ಯಾಸವನ್ನು -"ಎರಡು, ಮೂರು, ನಾಕು ತಿಂಗಳಾಯ್ತು. ಇವಳು ಗರ್ಭಿಣಿಯಾದ್ಲು. ಬಸರ ಬಯಕೆ ಶುರುವಾಯ್ತು. ಊಟ ತಿಂಡಿ ಏನೂ ಸೇರತಿರನಿಲ್ಲ. ಸಂಕಟ ಸುಸ್ತು ವಾಂತೆ ದಿನೇ ದಿನೇ ಸಮೆದು ಹೋಗಕೆ ಶುರುವಾದ್ಲು"[2] ಎಂದು ವಿವರಸಲಾಗಿದೆ.ಇದೇ ಸಂಕಲನದ ನಂದಿನಿ ಕಥೆಯಲ್ಲಿ ಗರ್ಭಿಣಿಯ ಬಯಕೆಗಳನ್ನು ಬೇರೆ ಮಾತುಗಳಲ್ಲಿ ನಿರೂಪಿತವಾಗಿದೆ -"ನಂದಿನಿ ಮೂರು ತಂಗಳ ಬಸಿರಿಯಾದಳು ಇವಳಿಗೆ ಹುಳಿ ಉಪ್ಪು ಖಾರದ ಮೇಲೆ ಪ್ರೀತಿ ಜಾಸ್ತಿಯಾಯಿತು. ಊಟದ ಮೇಲೆ ಆಸಿ ತಪ್ಪಿ ಹೋಯಿತು. ವಾಂತಿ ಸುಸ್ತು ಸಂಕಟ ಕಾಣಿಸಿಕೊಂಡ್ತು" ಎಂಬಲ್ಲಿ ವಕ್ತೃವಿನ ವಿಶಾಲ ಅನುಭವಗಳು ಪಡಿಮೂಡಿವೆ.

ಒಗಟುಗಳಲ್ಲಿಯೂ ಫಲವಂತಿಕೆಯನ್ನು ಕೇಂದ್ರವಾಗಿಟ್ಟುಕೊಂಡ ರಚನೆಗಳನ್ನು ಕಾಣಬಹುದು. ಇಂದು ವೈಜ್ಞಾನಿಕವಾಗಿ ಸ್ಕ್ಯಾನಿಂಗ್ ಮೂಲಕ ಗರ್ಭದಲ್ಲಿರುವ ಶಿಶುವಿನ ಲಿಂಗವನ್ನು ತಿಳಿಯಲು ಸಾಧ್ಯವಿದೆ. ಹಾಗೆಯೇ ಈ ಸ್ಕ್ಯಾನಿಂಗ್ ವಿಧಾನವನ್ನು ದುರುಪಯೋಗ ಪಡಿಸಿಕೊಂಡು ಹೆಣ್ಣು ಶಿಶುವಿನ ಭ್ರೂಣಹತ್ಯೆ ಮಾಡುವ ಪ್ರಸಂಗಗಳು ಹೆಚ್ಚುತ್ತಿರುವುದು ತಿಳಿದ ವಿಚಾರ. ಗರ್ಭದಲ್ಲಿರುವ ಶಿಶು ಹೆಣ್ಣೊ ಗಂಡೊ ತಿಳಿಯದೆಂಬುದನ್ನು ಸೂಚಿಸುವ ಒಗಟೊಂದು ಜನಪದರಲ್ಲಿ ಹೀಗಿದೆ-

ಸಾವಿರ ರೂಪಾಯಿ ಕೊಟ್ಟು ಸರ್ಕು ತಂದಾನೆ
ನೂರು ರೂಪಾಯಿ ಕೊಟ್ಟು ಗೋಣಿತಂದಾನೆ
ತಂದಿರ ಸಾವುಕಾರಗೂ ಗೊತ್ತಿಲ್ಲ
ಹೊತ್ತಿರಕತ್ತೆಗೂ ಗೊತ್ತಿಲ್ಲ[3]

ಇದೇ ರೀತಿ ಮತ್ತೊಂದು ಚಮತ್ಕಾರಿಕ ನುಡಿಯಲ್ಲಿ

ಗರ್ಭದಲ್ಲಿ ಕೂಸು ಇರುವುದನ್ನು ಸ್ವಾರಸ್ಯವಾಗಿ ಹೇಳಲಾಗಿದೆ-

"ಗಂಡ ಹಂಡ್ತಿ ಸೇರಿ ಒಂದು ಗಂಟು ಮೂಟೆ ಕಟ್ಟಿದ್ರು. ಹೇಂಡ್ತಿ ಮಾತ್ರ ಅದ್ನ ಹೊತ್ಗಂದು ಹೋದ್ಲು. ಏನ್ ಕಟ್ಟಿದವಿ ಅಂತ ಇಬ್ರಿಗೂ ಗೊತ್ತಾಗಿಲ್ಲಂತೆ. ಕಟ್ಟಿದ್ದೇನು?" ಹೀಗೆ ಫಲವಂತಿಕೆಗೆ ಸಂಬಂಧಿಸಿದಂತೆ ಇಂಥ ಗುಹ್ಯಮಾತುಗಳು ಪ್ರಚಲಿತವಿದೆ.

---

೧. 'ದಾಳಿಂಬೆ ರಾಣಿ' ಸಂ. ಟಿ.ಎಸ್. ರಾಜಪ್ಪ, ಪು.೨೦

೨. ಅದೇ ಪು. ೨೩

೩. 'ಜಂಬುನೇರ್ಲಣ್ಣು ಜಗ್ಗು ಬಿದ್ದಾವೆ' ಸಂ. ಮೈಲಹಳ್ಳಿ ರೇವಣ್ಣ ಪು. ೬೫

ಬಸಿರ ಬಯಕೆಯನ್ನು [illegible] ಸಮುದಾಯದಲ್ಲಿ ಪ್ರತಿಬಿಂಬಿಸುವ [illegible] ಗರ್ಭಧರಿಸಿದುದನ್ನು ಅವರ ಬೆಳವಣಿಗೆಯನ್ನು ತಿಳಿಸುತ್ತವೆ. ಹಾಲಕ್ಕಿಗಳಲ್ಲಿಯೂ ಈ ತೆರನ ಗೀತೆಗಳಿವೆ. ಉದಾಹರಣೆಗೆ

ನಾರಿ ಸಣ್ಣಮ್ಮಗೆ ಏನೇನು ಬಯಕೆಯೆ
ಅಂಗೈ ಮೇನುಪ್ಪು ಹುಳಿಸೀಯೆ
ಅಂಗೈಮೇನುಪ್ಪು ಹುಳಸೀಯ ಹಣ್ಣಿನ್ನ
ತಾ ತಿನ್ನಲುಬೇಕೆಂಬೂ ಬಯಕೇಯೆ
ತಿನ್ನಲು ಬೇಕಂದಿ ಬಯ್ಯಾದೆ ಸಣ್ಣಮ್ಮನೇ
ನಲ್ಲ ತನ ಸತಿಗೆ ತರಾವಸೆ[1]

ಇದೇ ಆಶಯ ಉತ್ತರ ಕರ್ನಾಟಕದ [illegible] ಗೀತಗಳಲ್ಲಿ ಇನ್ನಷ್ಟು ವಿಸ್ತೃತವಾಗಿ ಪ್ರಕಟವಾಗಿದೆ.

ಒಂದೆಂಬು ತಿಂಗಳಿಗೆ ಒಂದೇನ ಬಯಸ್ಯಾಳ
ಚೆಂದಾಗಿ ಬೆಳೆದ ಎಲೆಸೆಲ್ಲಿ ||ಸುವ್ವಿ ||
ಎರಡೆಂಬು ತಿಂಗಳಿಗೆ ಎರಡೇನ ಬಯಸ್ಯಾಳ
ಎಡಗಯ್ಯಾಗುಪ್ಪು ಎಳಹುಣಸಿ ||ಸುವ್ವಿ ||
ಮೂರೆಂಬುತಿಂಗಳಿಗೆ ಮೂರೇನ ಬಯಸ್ಯಾಳ
ಮೂಡಲ ದಿಕ್ಕ ಮಗಿ ಮಾವ ||ಸುವ್ವಿ ||
ನಾಕೆಂಬು ತಿಂಗಳಿಗೆ ನಾಕೇನ ಬಯಸ್ಯಾಳ
ಕಾಕೀಯ ಹಣ್ಣ ಕೈತುಂಬ ||ಸುವ್ವಿ ||
ಐದೆಂಬು ತಿಂಗಳಿಗೆ ಐದೇನ ಬಯಸ್ಯಾಳ
ಕೇದಿಗೆ ಮಲ್ಲಿಗೆಯು ನನದಂಡೆ ||ಸುವ್ವಿ ||
ಆರೆಂಬು ತಿಂಗಳಿಗೆ ಆರೇನ ಬಯಸ್ಯಾಳ
ಆರಿದಾ ಬಾನ ಕೆನಿಮೊಸರ ||ಸುವ್ವಿ ||
ಏಳೆಂಬ ತಿಂಗಳಿಗೆ ಏಳೇನ ಬಯಸ್ಯಾಳ
ಹೇಳಿ ಕಳೂವಾಕ ತವರಿಲ್ಲ ||ಸುವ್ವಿ ||
ಎಂಟೆಂಬು ತಿಂಗಳಿಗೆ ಎಂಟೇನ ಬಯಸ್ಯಾಳ
ಕಂಟಲೀ ಎತ್ತು ಕರೆಬರಲಿ ||ಸುವ್ವಿ ||
ಒಂಬತ್ತು ತಿಂಗಳಿಗೆ ತುಂಬ್ಯಾವ ದಿನಗಳು
ಹರಲೀಯ ಮಗನೆ ಹುಟ್ಟಿಬಾರ
ಹರಲೀಯ ಮಗನಂತ ನೀಯಾಕ ಅಂತೀಯೆ
ಹರದ್ಯಾಸ ನನ್ನ ಹೊಸಸೆಲ್ಲೆ[2]

---

೧. 'ಸುವ್ವೀ ಸುವ್ವೀ ಸುವ್ವಾಲಿ' ಸಂ. ಎಲ್.ಆರ್. ಹೆಗಡೆ, ಪು.೭೭
೨. 'ಜೀವನ ಜೋಕಾಲಿ' ಭಾಗ ೨, ಸಂ. ಎಂ.ಎಸ್. ಸುಂಕಾಪುರ

ಕಥನಗೀತೆಗಳಲ್ಲೂ ಸನ್ನಿವೇಶಕ್ಕೆ ಅನುಗುಣವಾಗಿ ಈ ತೆರನ ವರ್ಣನೆಗಳು ಬರುತ್ತವೆ. ಸುಭದ್ರ ಎಂಬ ಜನಪದ ಕಥನಗೀತೆಯಲ್ಲಿ ಆಕೆ ಗರ್ಭಿಣಿಯಾದಾಗ ಪೂರ್ವೋಕ್ತರೀತಿಯ ಬಯಕೆ ಹಾಡುಗಳು ಅತ್ಯಂತ ಸಹಜವಾಗಿ ಕಾಣಿಸಿಕೊಳ್ಳುತ್ತವೆ. ಹೆಣ್ಣಿನ ಫಲವಂತಿಕೆಯ ಸಂದರ್ಭದಲ್ಲಿ ಇಡೀ ಸಮುದಾಯ ಯಾವ ರೀತಿ ಭಾಗಿಯಾಗುತ್ತಿತ್ತೆಂಬುದನ್ನು ಜನಪದ ಮತ್ತು ಬುಡಕಟ್ಟು ಸಾಹಿತ್ಯದಿಂದ ಮನವರಿಕೆ ಮಾಡಿಕೊಳ್ಳಬಹುದು. ಹಾಲಕ್ಕಿಗೌಡರ ಸಂಸ್ಕೃತಿಯಲ್ಲಿ ಗರ್ಭಿಣಿಯೊಬ್ಬಳ ಬಯಕೆ ಅಪೂರ್ವವಾಗಿದೆ. ಆಕೆ 'ಸಿಂಗಾರದ ಪೇಸೆ'' ಬಯಸಿದಂತೆ ಹಾಡಲಾಗಿದೆ. ಇವರಲ್ಲಿ ಹೆಣ್ಣು ಸುಖಪ್ರಸವಕ್ಕಾಗಿ ಆಮೆದೇವತೆಯನ್ನು ಪ್ರಾರ್ಥಿಸುವ ಪರಿಪಾಟವಿದೆ. ಗರ್ಭಿಣಿಯ ಬಯಕೆಗೆ ಸಂಬಂಧಿಸಿದಂತೆ ಅನೇಕ ನಂಬಿಕೆಗಳು ಮನೆಮಾಡಿವೆ. ಬಯಕೆ ಈಡೇರಿಸದಿದ್ದರೆ ಪ್ರಸವದಲ್ಲಿ ಗರ್ಭಿಣಿಗೆ ತೊಂದರೆಯೂಗುವುದೆಂಬ ನಂಬಿಕೆ ಎಲ್ಲ ಸಂಸ್ಕೃತಿಗಳಲ್ಲಿಯೂ ಬೇರೂರಿದೆ. ಸೀಮಂತ, ಅಟ್ಟಿಕ್ಕುವುದು ಇತ್ಯಾದಿ ಸಂಪ್ರದಾಯಗಳ ಮೂಲಕ ಫಲವತಿಯಾದ ಹೆಣ್ಣನ್ನು ವಿಶೇಷ ಊಟೋಪಚಾರಗಳಿಂದ ತಣಿಸುತ್ತಾರೆ. ಬಸಿರುಬಯಕೆ ಮಾಡುವಾಗ ಅಕ್ಕಿ ತೆಂಗಿನಕಾಯಿ ತೊಂಡೆಕಾಯಿಗಳನ್ನು ಮಡಿಲಿಗೆ ತುಂಬುತ್ತಾರೆ.

ಕೊರಮ ಸಮುದಾಯದಲ್ಲಿ ಕೆಮ್ಮಣ್ಣುತಿಂದರೆ ಕೆಂಪಗಿರುವ ಮಕ್ಕಳು ಹುಟ್ಟುವರೆಂಬ ನಂಬಿಕೆಯಿದೆ. ಈ ಸಮುದಾಯದ ಗಂಡಸರು ಹೆಂಡತಿ ಗರ್ಭಿಣಿಯಾದಾಗ ಪ್ರಾಣಿಹಿಂಸೆಯನ್ನು ನಿಷೇಧಿಸುತ್ತಾರೆ. ಇವರಲ್ಲಿ ಪುರುಷಪ್ರಾಧಾನ್ಯತೆ ಎಷ್ಟು ಆಳವಾಗಿ ಬೇರೂರಿದೆಯೆಂದರೆ ಅದು ಮಹಿಳೆಯ ಪ್ರಸವ ಸಂದರ್ಭದಲ್ಲಿಯೂ ತಳುಕುಹಾಕಿಕೊಂಡಿದೆ. ಶಿಶುಜನನದಲ್ಲಿ ಗಂಡಿನ ಪ್ರಾಬಲ್ಯತೆಯೇ ಹೆಚ್ಚಾಗಿದೆಯೆಂದು ಭಾವಿಸುವರು. ಪ್ರಸವವಾದ ಹೆಣ್ಣನ್ನು ನಿರ್ಲಕ್ಷಿಸಿ ಆಕೆಯ ಗಂಡನಿಗೆ ಆರೈಕೆ ಮಾಡುವ ಕುಸಂಪ್ರದಾಯವಿದೆ. ಈ ಹಿನ್ನೆಲೆಯಲ್ಲಿ ''ಕೊರವ ಹೆಂಗ್ಸು ಹೆತ್ರೆ ಕೊರವ ಗಂಡ್ಸ್ ಇಂಗ್ ತಿಂದ'' ಎಂಬ ಗಾದೆ ಮಾತು ಚಾಲ್ತಿಯಲ್ಲಿದೆ. ಬಾಣಂತಿಯ ಮೇಲಿನ ಇವರ ಧೋರಣೆ ಎಷ್ಟು ಕಠಿಣವಾಗಿದೆ ಯೆಂದರೆ ಹೆಣ್ಣು ಹೆತ್ತಳೆಂದರೆ. ಊರೊಳಗಿದ್ದರೆ ಕುಲದೈವರ ಕ್ರೋಧಕ್ಕೆ ಅವಕೃಪೆಗೆ ತುತ್ತಾಗುವ ಭಯ ಇವರಲ್ಲಿದೆ. ಆದುದರಿಂದ ಹೆಣ್ಣು ತನ್ನ ಬಾಣಂತನವನ್ನು ತಾನೇ ಮಾಡಿಕೊಳ್ಳಬೇಕೆಂಬ ನಿಯಮವಿದೆ. ಹಕ್ಕಿಪಿಕ್ಕಿ, ಕಾಡುಗೊಲ್ಲ ಮೊದಲಾದ ಹಲವು ಸಂಸ್ಕೃತಿಗಳಲ್ಲಿ ಪ್ರಸವವಾದ ಹೆಣ್ಣಿನ ಬಗ್ಗೆ ಈ ರೀತಿಯ ಜೀವವಿರೋಧಿಯಾದ, ಅವಮಾನವೀಯವಾದ ವಿಧಿಗಳನ್ನು ಹೇರಲಾಗಿದೆ. ಯಾವ ಒಂದು ಸೂಕ್ಷ್ಮವಾದ ಗಂಭೀರವಾದ ಅವಧಿಯಲ್ಲಿ ಹೆಣ್ಣಿಗೆ ವಿಶ್ರಾಂತಿ ವಿಶೇಷ ಉಪಚಾರಗಳ ಅಗತ್ಯವಿದೆಯೋ ಆ ಹೊತ್ತಿನಲ್ಲಿ ಸೂತಕವೆಂದು ಅವಳನ್ನು ದೂರವಿಟ್ಟು ಸ್ವಯಾಶ್ರಯದಿಂದ ಬದುಕುವಂತೆ ಮಾಡುವುದು ಇಪ್ಪತ್ತನೇ ಶತಮಾನದ ಅಂತ್ಯದಲ್ಲಿಯೂ ಅಸ್ತಿತ್ವದಲ್ಲಿದೆ. ಇಲ್ಲಿ ಬಾಣಂತಿ ನೀರು ಕಟ್ಟಿಗೆ ತಂದು ತನ್ನ ಆಹಾರ ತಾನೇ ಸಿದ್ಧ ಪಡಿಸಿಕೊಳ್ಳಬೇಕು. ಕೊರಮರಲ್ಲಿ ಭಿಕ್ಷೆಗೂ ಹೋಗಬೇಕಾಗುತ್ತದೆ. ಈ ಬಗೆಯ ಮೂಢನಂಬಿಕೆಗಳಿಂದಾಗಿ ಕೆಲವು ಉಪಸಂಸ್ಕೃತಿಗೆ ಸೇರಿದ

ಹೆಣ್ಣು ಫಲವಂತಿಕೆಯಿಂದಾಗಿ ಅನುಭವಿಸುವ ಯಾತನೆ ವರ್ಣನಾತೀತ. ಇಲ್ಲೆಲ್ಲ ಪ್ರೀತಿ ವಿಶ್ವಾಸಗಳಿಗಿಂತ ಸಂಪ್ರದಾಯಶರಣತೆಯೇ ಮೇಲುಗೈ ಪಡೆಯುತ್ತದೆ.

ಫಲವಂತಿಕೆಗೆ ಸಂಬಂಧಿಸಿದಂತೆ ಇತರ ಕೆಲವು ಸಂಪ್ರದಾಯಗಳು ಅಲ್ಲಲ್ಲಿ ರೂಢಿಯಲ್ಲಿವೆ. ಕೆಲವೊಂದು ಜನಪದ ಆರಾಧನೆಯಲ್ಲಿಯೂ ಫಲವಂತಿಕೆಯ ಆಶಯಗಳನ್ನು ಗುರುತಿಸಬಹುದು. ಮೈಸೂರು, ಚಾಮರಾಜನಗರ, ಮಂಡ್ಯಜಿಲ್ಲೆಗಳಲ್ಲಿ ಪ್ರಚಲಿತವಿರುವ ಕೊಂತಿಪೂಜೆ, ತಿಂಗಳಮಾವನ ಪೂಜೆ ಮತ್ತು ಉತ್ತರಕರ್ನಾಟಕದ ಜೋಕುಮಾರನ ಪೂಜೆಯ ಆಶಯಗಳು ಫಲವಂತಿಕೆಯನ್ನು ಕುರಿತಿವೆ. ಕೊಂತಿಪೂಜೆ ಹದಿನಾರು ದಿನಗಳವರೆಗೆ ನಡೆಯುತ್ತದೆ. ಇದರಲ್ಲಿ ಭಾಗವಹಿಸುವವರು ಕನ್ಯೆಯರು ಹಾಗೂ ಮುತ್ತೈದೆಯರು. ಮೊದಲದಿನ ಹೆಣ್ಣು ಮೈನೆರೆದಳೆಂದು, ಹದಿನಾರನೇ ದಿನ ಗಂಡನ ಮನೆಗೆ ಹೋದಳೆಂದು ಭಾವಿಸುವರು. ಆದುದರಿಂದ ಈ ಆಚರಣೆಯಲ್ಲಿ ಬಳಸುವ ಕೊಬ್ಬರಿ, ಬೆಲ್ಲ, ತಂಬಿಟ್ಟು, ಚಿಗಳಿ ಇತ್ಯಾದಿ ಪರಿಕರಗಳು ಒಸಗೆ ಸಂಪ್ರದಾಯದಲ್ಲಿ ಬಳಸುವಂಥವಾಗಿವೆ. ಒಸಗೆ ಮತ್ತು ಮದುವೆ ಆಚರಣೆಗಳೇ ಈ ಸಂಪ್ರದಾಯದಲ್ಲಿವೆ. ಇದರಲ್ಲಿ ಭಾಗವಹಿಸಿದರೆ ಅವಿವಾಹಿತರಿಗೆ ಕಂಕಣಬಲ ಕೂಡಿ ಬರುವುದೆಂದೂ, ವಿವಾಹಿತರಿಗೆ ಸಂತಾನ ಪ್ರಾಪ್ತಿಯಾಗುವುದೆಂದೂ ನಂಬಿಕೆಯಿದೆ. ಕೊಂತಿ ವಿಸರ್ಜಿಸಿದ ಬಳಿಕ ಅದರ ಮಣ್ಣನ್ನು ಭೂಮಿಗೆ ಚೆಲ್ಲುವುದರಿಂದ ಭೂಮಿ ಫಲವತ್ತಾಗುವುದೆಂದು ತಿಳಿಯಲಾಗುವುದು.

ಒಟ್ಟಾರೆ ಫಲವಂತಿಕೆಯನ್ನು ಕೇಂದ್ರವಾಗಿಟ್ಟುಕೊಂಡು ನಡೆಸುವ ಆಚರಣೆಗಳಲ್ಲಿ ಬಹಳಷ್ಟು ಸಾಮ್ಯತೆಯಿದೆ. ಕೆಲವು ಉಪಸಂಸ್ಕೃತಿಗಳಲ್ಲಿನ ಪ್ರಸವದ ವಿಚಾರಗಳನ್ನು ಅಂಧತ್ವದಿಂದ ಪರಿಪಾಲಿಸಬೇಕೆ? ಇಂಥವು ಮಹಿಳೆಯ ಪಾಲಿಗೆ ಉರುಳಾಗಿವೆ ಎನ್ನದಿರಲಾಗುವುದಿಲ್ಲ. ಆದರೂ ಸಮಾಜ ಮುಂದುವರಿಕೆಯ ಏಕೈಕ ವಾಹಕ ಹೆಣ್ಣು ಎಂಬ ಭಾವನೆ ಸಮಾಜದಲ್ಲಿದ್ದುದರಿಂದ ಆರ್ಥಿಕ ವ್ಯವಸ್ಥೆ ಇರುವೆಡೆ ಫಲವಂತಿಕೆಗೆ ಸಂಬಂಧಿಸಿದ ಘಟ್ಟಗಳಲ್ಲಾದರೂ ಸುಖವನ್ನು ಅನುಭವಿಸಿದ್ದಾಳೆ. ಆರ್ಥಿಕ ಕೊರತೆ ಇರುವೆಡೆ ಈ ಸುಖಕ್ಕೂ ಚ್ಯುತಿಬಂದಿರುವುದನ್ನು ಒಪ್ಪಬೇಕು. ಇದು ಒಂದು ಮುಖ.ಹೆಣ್ಣು ಅತ್ಯಾಚಾರಕ್ಕೆ ಗುರಿಯಾದಾಗ ಫಲವಂತಿಕೆಯ ಕಾರಣವಾಗಿ ಅವಳ ಬದುಕು ಬರ್ಬರ ವಾಗುವುದು ಇದರ ದುರುಳ ಮುಖ ಎನ್ನಬಹುದು.

ಈ ವರೆಗೆ ವಿಚಾರಮಾಡಿದ ಅಂಶಗಳೆಲ್ಲ ಫಲವಂತಿಕೆಯನ್ನು ಕುರಿತ ಪರಂಪರಾನುಗತ ಪರಿಕಲ್ಪನೆಗಳಿಂದ ಮೂಡಿಬಂದವು. ಸಮಕಾಲೀನ ನೆಲೆಯಿಂದ ನೋಡಿದಾಗ ಈ ಪರಿಕಲ್ಪನೆಗಳು ಹೊರಳುದಾರಿಯಲ್ಲಿರುವುದು ಸ್ಪಷ್ಟ. ಎರಡು ಮುಖ್ಯ ಕಾರಣಗಳಿಗಾಗಿ. ಒಂದು ವೈಜ್ಞಾನಿಕ ಸಂಶೋಧನೆಗಳಿಂದ, ಮತ್ತೊಂದು ಎಚ್ಚೆತ್ತ ಮಹಿಳೆಯ ಬದಲಾದ ನಿಲುವುಗಳಿಂದ. ಜನಸಂಖ್ಯಾಸ್ಫೋಟವನ್ನು ಎದುರಿಸುತ್ತಿರುವ ಭಾರತದಂಥ ದೇಶದಲ್ಲಿ ಫಲವಂತಿಕೆಯನ್ನು ವೈಜ್ಞಾನಿಕ ಕ್ರಮದಲ್ಲಿ ನಿಯಂತ್ರಿಸುವುದು ಅಗತ್ಯವೂ ಹೌದು

ಅನಿವಾರ್ಯವೂ ಹೌದು. ಕುಟುಂಬ ಯೋಜನೆ ಮೂಲಕ ಇಂಥ ಕಾರ್ಯಗಳು ರಾಷ್ಟ್ರನಿರ್ಮಾಣಕ್ಕೆ ಪೂರಕವಾಗಿ ಕಾವುಕೊಡುತ್ತಿವೆ. ಆದರೆ ವೈಜ್ಞಾನಿಕ ಸಂಶೋಧನೆಗಳು ಹೇಗೆ ಮುನ್ನಡೆಯುತ್ತಿವೆಯೆಂದರೆ ಪ್ರಯೋಗಾಲಯದಲ್ಲಿ ಪ್ರನಾಳ ಶಿಶು ಸೃಷ್ಟಿಸಬಲ್ಲವರಾಗಿದ್ದೇವೆ. ಕ್ಲೋನಿಂಗ್ ಮೂಲಕ ನಮ್ಮ ಪ್ರತಿರೂಪಗಳನ್ನು ನಿರ್ಮಿಸಲು ಸಾಧ್ಯವಾಗಿದೆ. ಇಂಥ ಹೊತ್ತಿನಲ್ಲಿ ಮಹಿಳೆ ಮತ್ತು ಆಕೆಗೆ ವಿಶಿಷ್ಟವಾದ ಫಲವಂತಿಕೆ ಹಿಂದಿನ ಮಹತ್ವವನ್ನು ಉಳಿಸಿಕೊಳ್ಳುವ ಬಗ್ಗೆ ಸಂಶಯ ಉಂಟಾಗುತ್ತಿದ್ದು ತಾಯ್ತನದ ಆನಂದ, ತಾಯಿ ಮಕ್ಕಳ ಪ್ರೀತಿ, ಸಮುದಾಯದ ಭಾಗಿತ್ವ ಮೊದಲಾದ ಮಾನವೀಯ ಸಂಬಂಧಗಳಿಗೆ ತೀವ್ರ ಆಘಾತ ಉಂಟಾಗುವುದಿಲ್ಲವೆ? ಸಾಮಾಜಿಕವಾಗಿ ಅವಳ ಸ್ಥಾನಮಾನದಲ್ಲಿ ಏರು ಪೇರಾಗುವುದಿಲ್ಲವೆ? ಎಂಬ ಪ್ರಶ್ನೆಗಳು ಮುಖಾಮುಖಿಯಾಗುತ್ತವೆ.

ಮಹಿಳೆಗೆ ಸಂಬಂಧಿಸಿದಂತೆ ಪಿತೃಪ್ರಧಾನ ಸಮಾಜವು ಪಾತಿವ್ರತ್ಯ, ಮಾತೃತ್ವ ಮೊದಲಾದ ಮೌಲ್ಯಗಳಿಂದ ಹೆಣ್ಣನ್ನು ಕೌಟುಂಬಿಕ ಚೌಕಟ್ಟಿನೊಳಗೆ ಬಂಧಿಸಿಡುವುದನ್ನು ಸ್ತ್ರೀವಾದಿ ಚಿಂತನೆಗಳು ಪ್ರಶ್ನಿಸುತ್ತವೆ. ವೈಯಕ್ತಿಕ ಸಾಧನೆಗಳಿಗೆ ಹೆಚ್ಚು ಮಹತ್ವ ನೀಡುವ ಆಧುನಿಕ ಹೆಣ್ಣಿಗೆ ಫಲವಂತಿಕೆ ಆಯ್ಕೆಯ ಪ್ರಶ್ನೆಯಾಗಿದೆ. ಗರ್ಭಧಾರಣೆ, ತಾಯ್ತನಗಳು ಸಮಯ ಸಂಯಮ ಜವಾಬ್ದಾರಿಯನ್ನು ಬೇಡುವ ಕ್ರಿಯೆಗಳು. ಹಾಗಾಗಿ ಇವು ತನ್ನ ಉದ್ದೇಶಿತ ಗುರಿಸಾಧನೆಯಲ್ಲಿ ಅಡ್ಡಿಯಾಗಿ ನಿಲ್ಲಬಲ್ಲವೆಂಬ ಭಾವನೆಯೂ ಆಧುನಿಕ ಮಹಿಳೆಯಿಂದ ವ್ಯಕ್ತಪಟ್ಟಿದೆ. ಫಲವಂತಿಕೆಯ ಸುತ್ತ ಎರಡು ಅತಿರೇಕಗಳಿವೆ. ಬುಡಕಟ್ಟಿನಲ್ಲಿ ಈ ಕುರಿತು ಭಾವುಕತೆ ಇದ್ದರೆ, ವಿಜ್ಞಾನ ಮತ್ತು ಸ್ತ್ರೀವಾದಿ ಚಿಂತನೆಯ ಮಾನದಂಡದಲ್ಲಿ ಫಲವಂತಿಕೆ ವ್ಯಾವಹಾರಿಕ ವಿಷಯವಾಗಿದೆ. ಈ ಎರಡೂ ನಿಟ್ಟಿನಿಂದ ವಿಚಾರಮಾಡಬೇಕಾದ ಕಾಲ ಈಗ ಸನ್ನಿಹಿತವಾಗಿದೆ. ಫಲವಂತಿಕೆಯ ಧೋರಣೆಗಳು ಜೀವನ ಪ್ರೀತಿಯನ್ನೂ ಸಮಾಜದ ಮುನ್ನಡೆಯನ್ನು ಕಟ್ಟಿಕೊಡುವಂತಿರಬೇಕು.

# ಬಂಜೆಂಬ ಶಬುದ ಬಿಡಿಸಯ್ಯಾ.....

**ಚಂದ್ರಮತಿ ಸೋಂದಾ**

ತಾಯ್ತನವು ಒಂದು ಜೈವಿಕ ಕ್ರಿಯೆ. ಪ್ರಕೃತಿಯ ನಿರಂತರತೆಗೆ ಇದು ಅನಿವಾರ್ಯ. ಎಲ್ಲ ಜೀವಿಗಳಲ್ಲಿಯೂ ತನ್ನ ಸಂತಾನವು ಸ್ವತಂತ್ರವಾಗುವವರೆಗೆ ಬೆಳೆಸುವ ಕಾರ್ಯ ತಾಯಿಯಿಂದ ನಡೆಯುತ್ತದೆ. ಕೆಲವು ಜೀವಿಗಳಲ್ಲಿ ತಂದೆಯ ಪಾಲೂ ಇದಕ್ಕೆ ಸಲ್ಲುತ್ತದೆ. ಮಾನವನಲ್ಲಿ ಮಗುವಿನ ಲಾಲನೆ ಪಾಲನೆಗಳ ಜವಾಬ್ದಾರಿಯು ತಾಯಿಗೆ ಸೇರಿದುದು ಎಂದು ಭಾವಿಸುತ್ತ ಬರಲಾಗಿದೆ. ಸುದೀರ್ಘಕಾಲ ಆಕೆ ಮಗುವನ್ನು ತನ್ನ ಬಸಿರಲ್ಲಿ ಇರಿಸಿಕೊಳ್ಳ ಬೇಕಾಗಿರುವುದರಿಂದ ಮಗುವಿನೊಂದಿಗೆ ಭಾವನಾತ್ಮಕ ಸಂಬಂಧವು ಸಹಜವಾಗಿ ಬೆಳೆಯುತ್ತದೆ. ಜನಿಸಿದ ಮೇಲೂ ಹಾಲುಣಿಸುವ ಕ್ರಿಯೆಯಿಂದಾಗಿ ಅವಳಿಗೆ ಆ ಮಗುವಿನ ಸಾಮೀಪ್ಯ ಅಧಿಕವಾಗಿರುತ್ತದೆ. ಈ ಎಲ್ಲ ಜೈವಿಕ ಕಾರಣಗಳೊಂದಿಗೆ ಭಾವನಾತ್ಮಕ ಅಂಶಗಳನ್ನು ತಳುಕುಹಾಕಿ ತಾಯ್ತನವನ್ನು ವೈಭವೀಕರಿಸುವ ಪರಿಪಾಠ ಬೆಳೆದು ಬಂತು. ಅದು ಯಾವ ಹಂತ ತಲುಪಿತೆಂದರೆ ತಾಯಿಯಾಗದೆ ಹೆಣ್ಣಿನ ವ್ಯಕ್ತಿತ್ವ ಪರಿಪೂರ್ಣವಾಗದೆಂಬ ಭಾವನೆಯನ್ನು ಪಟ್ಟಿಕಟ್ಟಿ ಅವಳನ್ನು ಕೀಳಾಗಿ ಕಾಣುವ ಪ್ರವೃತ್ತಿ ಬಲಿಯಿತು. ವಂಶದ ಮುಂದುವರಿಕೆಗೆ ಸಂತಾನೋತ್ಪತ್ತಿ ಅಗತ್ಯ ಎನ್ನುವುದು ಸತ್ಯವಾದರೂ ಪತಿ ಪತ್ನಿಯರಲ್ಲಿ ಯಾರಲ್ಲಿ ದೋಷವಿದ್ದರೂ ಮಗುವಾಗದಿರುವುದಕ್ಕೆ ಮಹಿಳೆಯನ್ನೇ ತಪ್ಪಿತಸ್ಥಳನ್ನಾಗಿ ಕಾಣುತ್ತಾ ಬರಲಾಗಿದೆ. ಹಾಗಾಗಿ, 'ಬಂಜೆ' ಎನ್ನಿಸಿಕೊಳ್ಳಲು ಆಕೆ ಹೆದರುತ್ತ ಬಂದಿದ್ದಾಳೆ. ಮಗುವಿಲ್ಲದಿದ್ದರೆ ಅವಳ ಬಾಳು ವ್ಯರ್ಥ ಎಂದೇ ತಿಳಿಯಲಾಗಿದೆ. 'ಗರ್ಭ ಬಳೆಯದ ಬಾಳಕಿಯ ಬಸಿರನರ್ಥಕಮತ್ತೀ' ಎಂದು ಯೋಚಿಸುವ ಪರಿಸರದಲ್ಲಿ ಮಗುವನ್ನು ಪಡೆಯಲೇಬೇಕೆಂಬ ಹಂಬಲ ಅವಳಲ್ಲಿ ತೀವ್ರವಾಗಿರುವುದು ಸಹಜವೇ. ತನ್ನ ಬದುಕು 'ಬಾಳೆಲೆಯ ಹಾಸ್ಯಂಡು ಬೀಸಿ ಒಗೆದಂಗೆ' ಆಗಬಾರದು, 'ಹಂಗಿನ ಬಾನ' ತನಗೆ ಬೇಡವೆಂದು ತೀರ್ಮಾನಿಸುವ ಆಕೆ ದೈವವನ್ನು 'ಸಂಜೆಗೆ ಕೊಟ್ಟು, ಮುಂಜಾನೆ ಕೊಳ್ಳಯ್ಯ ಬಂಜೆಂಬ ಶಬುದ ಬಿಡಿಸಯ್ಯ' ಎಂದು ಬೇಡುವುದಲ್ಲದೆ ಇನ್ನೇನನ್ನೂ ಮಾಡಲಾರಳು. ಅವಳಿಗೆ ಮಗು ಬೇಕೆಂಬ ಅಭೀಪ್ಸೆಗಿಂತ ಬಂಜೆತನದ ಅಭಿಶಾಪದಿಂದ ಪಾರಾಗಬೇಕೆಂಬ ಬಯಕೆಯೇ ಅಧಿಕವಾಗಿರುವುದು ವ್ಯಕ್ತವಾಗುತ್ತದೆ.

ಮಾನವ ಜೀವಿಯಲ್ಲಿ ಶೈಶವದ ಅವಧಿ ಇತರ ಪ್ರಾಣಿಗಿಂತ ಹೆಚ್ಚಾಗಿರುವುದರಿಂದ ಹುಟ್ಟಿದ ಮಗು ಅವಲಂಬನೆಯನ್ನು ಬಿಟ್ಟು ಸ್ವತಂತ್ರವಾಗಿ ತನ್ನ ಕೆಲಸವನ್ನು ತಾನೇ

ಮಾಡಿಕೊಳ್ಳಲು ಕನಿಷ್ಠ ಹತ್ತು ವರ್ಷಗಳಾದರೂ ಬೇಕಾಗುತ್ತದೆ. ಈ ಸುದೀರ್ಘ ಅವಧಿಯ ಪಾಲನೆ ಪೋಷಣೆಗಳ ಜವಾಬ್ದಾರಿಯು ಬಹುಪಾಲು ತಾಯಿಯದೇ ಆಗಿರುವುದರಿಂದ ಅವಳ ದೈಹಿಕ-ಮಾನಸಿಕ ಸಾಮರ್ಥ್ಯವನ್ನು ಇದು ಅಪೇಕ್ಷಿಸುತ್ತದೆ. ಬದಲಾದ ನಮ್ಮ ಸಾಮಾಜಿಕ ಜೀವನದ ರೀತಿಯಿಂದಾಗಿ ಇಂದು ಮಹಿಳೆ ಈ ಜವಾಬ್ದಾರಿಯನ್ನು ನಿಭಾಯಿಸಲು ಸಾಕಷ್ಟು ಶ್ರಮಿಸುತ್ತಿದ್ದಾಳೆ. ಮನೆಯೊಳಗಿನ ಕೆಲಸ ಹಾಗೂ ಯಾವುದೇ ಬಗೆಯ ಹೊರಗಿನ ದುಡಿಮೆ ಎರಡನ್ನೂ ಮಾಡಬೇಕಾದ ಸಂದರ್ಭದಲ್ಲಿ ಇವೆರಡನ್ನು ಸರಿದೂಗಿಸುವುದು ಅವಳಿಗೆ ಭಾರವಾಗತೊಡಗಿದೆ; ಮಾನಸಿಕ ಒತ್ತಡಕ್ಕೆ ಕಾರಣವಾಗುತ್ತಿದೆ. ಮಹಿಳೆಯ ಈ ಸಂದಿಗ್ಧತೆಯನ್ನು ಹಲವು ಲೇಖಕಿಯರು ತಮ್ಮ ಬರವಣಿಗೆಯ ಮೂಲಕ ತೆರೆದಿಡಲು ಪ್ರಯತ್ನಿಸಿದ್ದಾರೆ. "ಹೆಂಗಸರೆಲ್ಲರೂ ತಾಯಿಯರಾಗಲು ಹಂಬಲಿಸುವರೆಂಬುದು ನಿಜವೆ? ಅಥವಾ ತಾಯಿಯಾಗದ ಹೆಂಗಸಿನ ಜೀವನ ಹೇಗಿದ್ದರೂ ಅಪೂರ್ಣವೆ? ತಾಯ್ತನಕ್ಕೆ ಬೇಕಾದ ಜೀವಪ್ರೀತಿ, ಜೀವನ ಶ್ರದ್ಧೆ, ಅಂತಃಕರಣಗಳು ನಮ್ಮ ಹೆಣ್ಣುದೇಹಗಳೊಂದಿಗೇ ಬಂದುಬಿಡುತ್ತದೆಯೇ? ತಾಯ್ತನದ ಇಕ್ಕಟ್ಟು,ಆಯಾಸ, ಕ್ಲೇಶಗಳಿಂದ ಯಾರೂ ಯಾವತ್ತೂ ರೋಸಿ ಹೋಗಿಲ್ಲವೆ? ಬಹಳ ಜನಕ್ಕೆ ಒಂದು ಅನಿವಾರ್ಯವಾದ ಜೈವಿಕ ಕ್ರಿಯೆಯಾಗಿ ಮಾತ್ರ ತಾಯ್ತನ ಬಂದಿದೆಯೇ?"(ವಿಜಯಾದಬ್ಬೆ, ನಾರಿ:ದಾರಿ-ದಿಗಂತ ಪು೫) ಎನ್ನುವ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವ ಪ್ರಯತ್ನವನ್ನು ಇಲ್ಲಿ ಮಾಡಲಾಗುವುದು.

ಅನುಪಮಾ ನಿರಂಜನ ಅವರ 'ಮಗು' ಕತೆಯ ನಾಯಕಿ ಸುನಂದೆ ಆನರ್ಸ್‌ನಲ್ಲಿ ಮೊದಲ ರ್‍ಯಾಂಕ್ ಪಡೆದವಳು. ಎಂ.ಎ.ಓದುವ ಹಂಬಲ ಅವಳಿಗಿರುತ್ತದೆ. ತಂದೆ ಮದುವೆ ಮಾಡುತ್ತಾನೆ. ಗಂಡನ ಅನುಮತಿ ಪಡೆದು ಆಕೆ ಕಾಲೇಜು ಸೇರುತ್ತಾಳೆ. ಅರ್ಧ ಓದಿನಲ್ಲಿಯೇ ಮಗುವಾಗುವುದರಿಂದ ಒಂದು ವರ್ಷಬಿಟ್ಟು, ಓದನ್ನು ಮುಂದುವರಿಸುವ ಸುನಂದೆ ತನಗಂಟಿಕೊಂಡಿರುವ ಮಗುವನ್ನು ಅನಿವಾರ್ಯವಾಗಿ ತನ್ನ ತಾಯಿಯ ಜೊತೆ ಬಿಡುತ್ತಾಳೆ. 'ಮಕ್ಕಳನ್ನು ಹೆರುವುದು, ಅಡಿಗೆ ಮಾಡುವುದು ಇವಿಷ್ಟೆ ತನ್ನ ಹೊಣೆಯಂತೂ ಅಲ್ಲ. ತಾನು ಎಲ್ಲರಿಗಿಂತ ಬೇರೆ. ತನ್ನ ಸಾಧನೆಗೆ ಗೌರಿಶಂಕರವೇ ಎಲ್ಲೆ' ಎಂದು ಯೋಚಿಸುತ್ತಿದ್ದ ಸುನಂದೆ ಸಂಪೂರ್ಣವಾಗಿ ಓದಿನಲ್ಲಿ ತಲ್ಲೀನಳಾಗುತ್ತಾಳೆ. ತವರಿನಿಂದ ಟೆಲಿಗ್ರಾಂ ಬಂದು ಆಕೆ ಹೋಗುವಷ್ಟರಲ್ಲಿ ಮಗು ಸತ್ತು ಹೋಗಿರುತ್ತದೆ. ತಾಯಿಯಾದವಳು ಮಗುವನ್ನು ಜೊತೆಯಲ್ಲಿಟ್ಟು ಕೊಂಡು ಓದುವುದು ಅಸಾಧ್ಯ ಎನ್ನುವುದು ನಿಜ. ಸುನಂದೆಯ ಮಗುವಿನಂತೆ ಎಲ್ಲರ ಮಗುವೂ ಅಜ್ಜಿಯ ಆರೈಕೆಯಲ್ಲಿ ಸಾಯಲಾರದು ಎಂದೂ ಯೋಚಿಸಬಹುದು. ವಿವಾಹದ ನಂತರದಲ್ಲಿ ಓದುವ ಬಗೆಗೆ ಲೇಖಕಿಯಲ್ಲಿಯೇ ಗೊಂದಲವಿರುವಂತೆ ಕಾಣುತ್ತದೆ. ಸುನಂದೆಯ ಗಂಡ ಮನೆಗೆಲಸಕ್ಕೆ ಯಾವುದೇ ಸಹಾಯ ಮಾಡುತ್ತಿರಲಿಲ್ಲ. ಜೊತೆಗೆ ಸಿಡುಕುತ್ತಿದ್ದ. ಮನೆಯಲ್ಲಿರುವವರ ಸಹಕಾರ ದೊರೆತಲ್ಲಿ ತಾಯಿಯಾದ ಮೇಲೂ ಓದನ್ನು ಪೂರ್ಣಗೊಳಿಸುವ ಸಾಧ್ಯತೆ ಇದ್ದೇ ಇರುತ್ತದೆ. ಆದರೆ ಅದಕ್ಕಾಗಿ ಮಹಿಳೆ ಸಾಕಷ್ಟು ಶ್ರಮಿಸಬೇಕಾಗುತ್ತದೆ. ತನ್ನ ಸಾಧನೆಯ ದಾರಿಯಲ್ಲಿ ಮಗು

ಒಂದು ತಡೆ ಎಂದು ಭಾವಿಸದೆ ಅದರೊಂದಿಗೆ ದಿನದ ಕೆಲವು ಸಮಯ ಕಳೆಯುವ ಅಪಾರ ತಾಳ್ಮೆಯನ್ನು ಮಹಿಳೆ ಹೊಂದಿರಬೇಕಾಗುತ್ತದೆ, ಎನ್ನುವುದು ಕಟುವಾಸ್ತವ. ಹಾಗಾಗಿ ಗುರಿಯತ್ತ ಲಕ್ಷ್ಯವಿರಿಸಿಕೊಂಡ ಮಹಿಳೆಯು ಅದು ಸಾಧಿತವಾಗುವವರೆಗೆ ತಾಯ್ತನವನ್ನು ಮುಂದೂಡುವುದು ಸರಿಯಾದ ಕ್ರಮ ಎನ್ನಬಹುದು.ಉತ್ತಮ ಗೃಹಿಣಿ, ಒಳ್ಳೆಯ ತಾಯಿ ಆಗಲಷ್ಟೇ ಮಹಿಳೆಗೆ ಶಿಕ್ಷಣದ ಅಗತ್ಯವಿದೆ ಎನ್ನುವ ಅಭಿಪ್ರಾಯ ಬಹಳಕಾಲ ಲೇಖಕಿಯರದಾಗಿತ್ತು. ಆ ಕಾರಣದಿಂದ ಮನೆವಾಳ್ತೆ ಬಿಟ್ಟು, ಮಗುವನ್ನು ಬೇರೆಯವರ ಆರೈಕೆಯಲ್ಲಿಟ್ಟು ಓದುವುದು ಗೃಹಿಕೆಗೆ ಮೀರಿದ್ದಾಗಿತ್ತು. ಅನುಪಮಾ ಅದಕ್ಕೆ ಹೊರತಾಗಿರಲಿಲ್ಲ.

ವಿಭಿನ್ನ ಕಾರಣಗಳಿಂದಾಗಿ ಇಂದು ಅನೇಕ ಮಹಿಳೆಯರು ಉದ್ಯೋಗಸ್ಥರಾಗಿದ್ದಾರೆ. ಉದ್ಯೋಗದಲ್ಲಿದ್ದ ಮಹಿಳೆಗೆ ತಾಯ್ತನದ ಅಗತ್ಯವನ್ನು ಪೂರೈಸುವುದು ಒಂದು ಸವಾಲಾಗುತ್ತಿದೆ. ಅವಿಭಕ್ತ ಕುಟುಂಬ ವ್ಯವಸ್ಥೆ ನಶಿಸಿಹೋಗಿ ಚಿಕ್ಕಕುಟುಂಬವು ಸಾಮಾನ್ಯ ವಾಗಿರುವುದರಿಂದ ಮಗು ಶಾಲೆಗೆ ಹೋಗುವವರೆಗಿನ ಅವಧಿಯನ್ನು ನಿಭಾಯಿಸುವುದು ಅವಳಿಗೆ ಭಾರಿ ತೊಡಕಿನದಾಗಿದೆ. ಅನಂತರದಲ್ಲಿಯೂ ಮಗುವಿಗೆ ಸರಿಯಾದ ತಿಳಿವಳಿಕೆ ಬರುವವರೆಗೆ ಮಗು ಯಾರ ಸಹವಾಸಕ್ಕೆ ಬೀಳುತ್ತದೆಯೋ ಎಂಬ ಆತಂಕ ಕಾಡುತ್ತಲೇ ಇರುತ್ತದೆ. ಶಾಲೆ ಮುಗಿಸಿ ಮನೆಗೆ ಬರುವ ಹೊತ್ತಿಗೆ ಎಲ್ಲ ತಾಯಂದಿರಿಗೂ ಮನೆಗೆ ಮರಳಲು ಸಾಧ್ಯವಾಗುವುದಿಲ್ಲವಾದ್ದರಿಂದ ಆತಂಕ. ಮಾನಸಿಕ ತಳಮಳ ಆಕೆಯನ್ನು ಹಿಂಬಾಲಿಸುತ್ತದೆ.

ಶ್ರೀ ಭಾರತೀಯವರ 'ವಾಸವಿ' (ಸವಿತಾರ ಕಥಾಗುಚ್ಛ) ಕತೆಯಲ್ಲಿ ವಾಸವಿ ಒಳ್ಳೆಯ ಉದ್ಯೋಗದಲ್ಲಿರುತ್ತಾಳೆ. ಸಮಾನತೆಯಲ್ಲಿ ನಂಬಿಕೆಯಿಟ್ಟ ವಾಸವಿಯ ಆಲೋಚನೆ ಈ ಬಗೆಯದು 'ಸಮಾಜದಲ್ಲಿ ಹೆಣ್ಣು ಕೇವಲ ಮನೆಕೆಲಸ ಮಾಡುತ್ತ ಗಂಡನ ಬೇಕು-ಬೇಡಗಳ ಪೂರೈಸಿಕೊಂಡು ಗುಲಾಮಳಂತೆ ಬಾಳುವ ಕಾಲ ಮುಗಿದು ಎಲ್ಲ ರಂಗದತ್ತ ದಿಟ್ಟ ಹೆಜ್ಜೆಹಾಕಿ ಗಂಡಿಗಿಂತ ಏನೂ ಕಮ್ಮಿಯಿಲ್ಲ ಎಂದು ಪುರುಷ ಸಮಾಜದ ದಬ್ಬಾಳಿಕೆಯಿಂದ ಸಿಡಿದ ಮಹಿಳೆಯ ಪ್ರತಿನಿಧಿಯಂತೆ ತನ್ನನ್ನು ತಾನು ಕಂಡಾಗ ಎಷ್ಟು ತೃಪ್ತಿ ಸಿಕ್ಕಿತ್ತು' (ಪು೫೫) ತಮ್ಮ ಯೋಜನೆಯಂತೆ ಮದುವೆಯಾದ ಮೂರು ವರ್ಷಗಳನಂತರ ಮಗನನ್ನು ಹೆರುತ್ತಾಳೆ. ಗಂಡ-ಹೆಂಡತಿಯರು ತಮ್ಮ ತಮ್ಮ ಉದ್ಯೋಗದ ಭಡತಿಗೆ ಹಾಗೂ ಸಮಾಜದಲ್ಲಿ ತಮ್ಮ ಪ್ರತಿಷ್ಠೆ ಹೆಚ್ಚಿಸಿಕೊಳ್ಳಲು ಹೋರಾಡುತ್ತಿದ್ದುದರಿಂದ ಮಗನ ಕಡೆ ಲಕ್ಷ್ಯ ವಹಿಸುವುದಿಲ್ಲ. ವಾಸವಿಗೆ ಕೆಲಸದ ಮಧ್ಯೆ ಮಗನ ನೆನಪಾಗುತ್ತಿದ್ದರೂ ಅಸಹಾಯಕತೆಯಿಂದ ಏನೂ ಮಾಡಲಾಗುತ್ತಿರಲಿಲ್ಲ. ತ್ರಿಕೋನ ಜವಾಬ್ದಾರಿಯಲ್ಲಿ ಲೈಂಗಿಕಾಸಕ್ತಿಯೂ ಕಡಿಮೆ ಯಾಗುವುದರಿಂದ ಗಂಡ ಬೇರೆ ಹೆಂಗಸಿನ ಸಹವಾಸಕ್ಕೆ ಬೀಳುತ್ತಾನೆ. ಮುಂದೊಂದು ದಿನ ಮಗ ಎರಡು ದಿನಗಳಾದರೂ ಮನೆಗೆ ಬಾರದೇ ಹೋದಾಗ ಇಬ್ಬರಿಗೂ ಗಾಬರಿಯಾಗುತ್ತದೆ. ಪ್ರೀತಿ-ವಾತ್ಸಲ್ಯಗಳಿಲ್ಲದ ಮನೆಗೆ ಮರಳಿ ಬರಲು ಮಗ ನಿರಾಕರಿಸುತ್ತಾನೆ. ಇಬ್ಬರಿಗೂ ತಮ್ಮ ತಪ್ಪಿನ ಅರಿವಾಗುತ್ತದೆ. ಆದರೆ ವಾಸವಿಯ ಈಗಿನ ಆಲೋಚನೆ ಹಿಂದಿನ

ಆಲೋಚನೆಯ ವಿರುದ್ಧ ದಿಕ್ಕಿನಲ್ಲಿ ಸಾಗುತ್ತದೆ. ಹೆಂಗಸಿನ ಕಲಿಕೆಯನ್ನು ಅವಳು ಅರ್ಥೈಸುವುದು ಸಾಂಪ್ರದಾಯಿಕ ರೀತಿಯಲ್ಲಿಯೇ. ತನ್ನ ಸ್ಥಾನಮಾನದೊಡನೆ ಬದುಕು ಸುಂದರಗೊಳಿಸುವ ಸಲುವಾಗಿ--ಸಂಸಾರಕ್ಕನಿವಾರ್ಯವಾದರೆ ಗಳಿಕೆ,ಫ್ಯಾಶನ್‌ಗಾಗೋ, ಆದರ್ಶಕ್ಕಾಗೋ ದುಡಿದಲ್ಲಿ ಜೀವನದ ಪರಿಣಾಮ ತನ್ನಂತೆ ಖಂಡಿತ.... ಮನಸ್ಸು ಬಯಸುತ್ತದೆ ಅದೇ ಗಂಡನ ಒಲವು, ಮಕ್ಕಳ ಮಮತೆ.... ಒಂದು ಕುಟುಂಬದ ಪೂರ್ತಿಗೆ ರೇಖೆ ಬಗ್ಗಿಸಿ ವೃತ್ತಿಸಿದಾಗ ಮಾತ್ರವೇ ಒಂದುಗೂಡಲು ಸಾಧ್ಯ'. ಎಂದು ರೂಢಿಗತ ಬದುಕಿನ ರೀತಿಗೆ ಮರಳುವ ವಾಸವಿಯ ಆಲೋಚನಾಕ್ರಮ ಲೇಖಕಿಯಲ್ಲಿ ಸಮಾನತೆಯ ಬಗೆಗಿರುವ ಪೂರ್ವಗ್ರಹವನ್ನು ತೋರಿಸುತ್ತದೆ. ಹಾಗಾಗಿಯೇ ವಾಸವಿಗೆ 'ಅಮ್ಮ ಅತ್ತೆಯರ ಬಾಳು ಅಣಕಿಸಿ ನಕ್ಕಂತೆ' ಎನಿಸುತ್ತದೆ. ಇಂತಹ ರಚನೆಗಳು 'ಯಥಾಸ್ಥಿತಿವಾದ'ವನ್ನು ಪ್ರತಿಪಾದಿಸಲು ತೋರಿಸುವ ಉತ್ಸಾಹವನ್ನು ಬದಲಾವಣೆಗೆ ತೋರಿಸುವುದಿಲ್ಲ. ಬದುಕಿನ ಇನ್ನಾವುದೇ ಆಯಾಮವನ್ನು 'ಕಾಣಿಸದೆ ಮಗ ದಾರಿತಪ್ಪಿರುವ ವಿಷಯಕ್ಕೆ ಮಾತ್ರ ಕತೆ ಒತ್ತು ನೀಡುತ್ತದೆ. ಗಂಡ ಹೆಂಡತಿಯರ ನಡುವಿನ ಅನ್ಯೋನ್ಯತೆಯ ಕೊರತೆಗೆ ಹೆಂಡತಿ ಉದ್ಯೋಗಿಯಾಗಿ ರುವುದಷ್ಟೇ ಕಾರಣ ಎನ್ನುವ ಸರಳ ತೀರ್ಮಾನ ಸಾಧುವಲ್ಲ. ಮಕ್ಕಳು ಚಿಕ್ಕವರಿರುವಾಗ ತಾಯಿಯ ಜವಾಬ್ದಾರಿ ಹೆಚ್ಚಿರುತ್ತದೆ. ಅವಳಿಗೆ ಉದ್ಯೋಗ-ತಾಯ್ತನಗಳ ನಡುವಿನ ಹೊಂದಾಣಿಕೆ ಕಷ್ಟವಾಗುತ್ತದೆ ಎನ್ನುವುದು ನಿಜವಾದರೂ ಅದೇ ಕಾರಣಕ್ಕಾಗಿ ಸಂಸಾರದ ಸುಖ-ಸಮಾಧಾನಗಳು ಕ್ಷೀಣವಾಗಿ ಸಂಸಾರ ಹಾಳಾಗುತ್ತದೆ ಎಂಬ ತೀರ್ಮಾನಕ್ಕೆ ಬಂದಿರುವುದು ಸಮಾನತೆಯ ತತ್ತ್ವವನ್ನು ವಿರೋಧಿಸುವ ಉದ್ದೇಶದಿಂದ ಮಾತ್ರ ಎನ್ನುವಂತೆ ತೋರುತ್ತದೆ. ಮಹಿಳೆಯ ಉದ್ಯೋಗಪರತೆಯನ್ನು ಪುರುಷನೊಂದಿಗಿನ ಸ್ಪರ್ಧೆ ಎಂದು ಭಾವಿಸುವಲ್ಲಿಯೇ ತಪ್ಪಿದೆ. ಮನೆಯನ್ನು ಸಂಪೂರ್ಣ ಕಡೆಗಣಿಸಿ, ಸಾರ್ವಜನಿಕ ಸಂಘ ಸಂಸ್ಥೆಗಳಲ್ಲಿ ತೊಡಗಿಕೊಂಡು ಸ್ಥಾನ-ಮಾನ ಹೆಚ್ಚಿಸಿಕೊಳ್ಳಬೇಕೆನ್ನುವ ಹುಸಿ ಪ್ರತಿಷ್ಠೆಯ. ಬಗೆಗೂ ಮಹಿಳೆ ಎಚ್ಚರದಿಂದಿರಬೇಕಾಗುತ್ತದೆ. ಈ ಎಲ್ಲವುಗಳ ನಡುವೆ ಹೊಂದಾಣಿಕೆ ಮಾಡಿಕೊಳ್ಳುವ, ಆದ್ಯತೆ ನೀಡುವ ತಿಳಿವು ಇದ್ದಲ್ಲಿ ಹೆಚ್ಚಿನ ಗೊಂದಲಿವಿಲ್ಲದೆ ನಿಭಾಯಿಸಲು ಸಾಧ್ಯವಾಗುತ್ತದೆ. ಜೊತೆಗೆ 'ತಂದೆತನ'ದ ಜವಾಬ್ದಾರಿಯನ್ನು ಪುರುಷ ಅರ್ಥಮಾಡಿ ಕೊಳ್ಳಬೇಕಾಗುತ್ತದೆ ಎನ್ನುವುದೂ ಅಷ್ಟೇ ಮುಖ್ಯವಾಗುತ್ತದೆ.

ವತ್ಸಲಾ ವಿಶ್ವನಾಥನ್ ಅವರ 'ಮನೆ' (ಸವಿತಾರ ಕಥಾಗುಚ್ಛ) ಕತೆಯ ಉಮಾಳೂ ವಾಸವಿಯಂತಹುದೇ ಪರಿಸ್ಥಿತಿಯನ್ನು ಎದುರಿಸುತ್ತಾಳೆ. ಉದ್ಯೋಗ-ತಾಯ್ತನದ ನಡುವೆ ನಲುಗಿ ಹೋಗುತ್ತಾಳೆ. ಶ್ರೀಕರ(ಗಂಡ) ಸ್ವಂತ ಮನೆಗಾಗಿ ಸಾಲ ಮಾಡಿದ್ದರಿಂದ, ಮಗಳಿಗೆ ಕಾಯಿಲೆಯಾದಾಗ ಕೆಲಸ ಬಿಡಬೇಕೆಂದು ಕೊಂಡರೂ ಸಾಧ್ಯವಾಗುವುದಿಲ್ಲ. ಮಗು ಸತ್ತು ಹೋದಾಗ ಮಾನಸಿಕ ರೋಗಿಯಾಗುವ ಉಮಾ ಗಂಡ ಹಾಗೂ ವೈದ್ಯರ ಆರೈಕೆಯಲ್ಲಿ ಚೇತರಿಸಿಕೊಳ್ಳುತ್ತಾಳೆ. ಮನೆಯೂ ಪೂರ್ಣಗೊಳ್ಳುತ್ತದೆ. ಅಷ್ಟರಲ್ಲಿ ಅವಳು ಮತ್ತೊಂದು ಮಗುವಿನ ತಾಯಿಯಾಗುವ ಲಕ್ಷಣ ಕಾಣಿಸುತ್ತದೆ.

ತಾಯ್ತನ-ಉದ್ಯೋಗದ ನಡುವಿನ ಸಂಘರ್ಷದ ದಾರಿಯನ್ನು ಲೇಖಕಿ ಚಿತ್ರಿಸಿದರೂ ಮೊದಲಿನೆರಡು ಕತೆಗಳಂತೆ ವಿರೋಧ ನಿಲುವಿಗೆ ಬರುವುದಿಲ್ಲ. ಅಡೆತಡೆಗಳನ್ನು ದಾಟಿ ಬದುಕನ್ನು ಸುಸೂತ್ರವಾಗಿ ಸಾಗಿಸಲು ಎಷ್ಟೊಂದು ತಾಳ್ಮೆ-ಸಹನೆ ಮಾನಸಿಕ ಸ್ಥೈರ್ಯ ಬೇಕಾಗುತ್ತದೆನ್ನುವ ಕಡೆ ಗಮನ ಸೆಳೆಯುತ್ತಾರೆ. ಅದೇ ಹೊತ್ತಿನಲ್ಲಿ ಗಂಡನ ಸಹಕಾರವೂ ಬೇಕಾಗುತ್ತದೆ ಎನ್ನುವ ಸೂಕ್ಷ್ಮವನ್ನು ಕತೆಯಲ್ಲಿ ಪ್ರತಿಪಾದಿಸುತ್ತಾರೆ.

ಗಂಡನ ಸಹಕಾರ ದೊರೆತಲ್ಲಿ ಹೆಂಗಸಿಗೆ ಮನೆಯನ್ನು ತೂಗಿಸಿಕೊಂಡು ಹೋಗುವುದಕ್ಕೆ ಉದ್ಯೋಗ ಅಡ್ಡಿಯುಂಟು ಮಾಡುವುದಿಲ್ಲ. ಮಕ್ಕಳನ್ನು ಸರಿಯಾಗಿ ನೋಡಿಕೊಳ್ಳುವಂತಹ ಸಾರ್ವಜನಿಕ ಸಂಸ್ಥೆಗಳ ಕೊರತೆ ನಮ್ಮ ದೇಶದಲ್ಲಿ ಈ ಸಮಸ್ಯೆಗೆ ಒಂದು ಕಾರಣ. ಶಾಂತಾದೇವಿ ಮಾಳವಾಡ ಅವರು 'ರಮಾ' ಕತೆಯಲ್ಲಿ ಈ ಕಡೆ ಗಮನ ಸೆಳೆಯುತ್ತಾರೆ. ತಾಯಿ ಮನೆಯಿಂದ ಹೊರಗಿರುವಷ್ಟು ಸಮಯ ಮಕ್ಕಳನ್ನು ಕೆಲಸದವಳ ಬಳಿ ಬಿಟ್ಟುಹೋಗುತ್ತಾಳೆ. ತಂದೆಗೆ ಮನೆ ಹಾಗೂ ಮಕ್ಕಳ ಬಗೆಗೆ ಯಾವುದೇ ಕಾಳಜಿ ಇರುವುದಿಲ್ಲ. ಹಾಗಾಗಿ, ಆಕೆ ಮಾನಸಿಕವಾಗಿ ತೊಳಲಾಡುತ್ತಾಳೆ. ಭಾರತೀಯ ಮಹಿಳೆಯರು ಎದುರಿಸುತ್ತಿರುವ ಈ ಸಮಸ್ಯೆಯ ಬಗೆಗೆ ಆಲೋಚಿಸುವ ಅವಳು ಹೊರದೇಶಗಳಲ್ಲಿ ದುಡಿಯುವ ಮಹಿಳೆಗೆ ಇಲ್ಲಿಗಿಂತ ಹೆಚ್ಚಿನ ಅನುಕೂಲಗಳು ಇರುತ್ತವೆಂದು 'ಹೊಂದಿಕೊಂಡು ಹೋಗುವ ಮನಸ್ಸು ಇರುತ್ತದೆ' ಎಂದು ಯೋಚಿಸುತ್ತಾಳೆ. ಆದರೆ ಎಲ್ಲರ ಬದುಕಿನ ಸಂದರ್ಭದಲ್ಲಿಯೂ ಈ ಮಾತು ಸತ್ಯ ಎಂದು ತಿಳಿಯುವಂತಿಲ್ಲ. ದೂರದ ಬೆಟ್ಟ ನುಣ್ಣಗೆ ಕಾಣುವುದೇ ಹೆಚ್ಚು. ಅಮೆರಿಕಾದಲ್ಲಿ ಪ್ರಕಟವಾದ 'Second shift' ಪುಸ್ತಕ ಶೀರ್ಷಿಕೆಯೇ ಸೂಚಿಸುವಂತೆ ಮಹಿಳೆಯು ಎರಡು ಪಾಳಿಗಳಲ್ಲಿ ದುಡಿಯಬೇಕಾಗಿರುವ ಪ್ರಸ್ತುತ ಪರಿಸ್ಥಿತಿಯ ಮೇಲೆ ಬೆಳಕು ಚೆಲ್ಲುತ್ತದೆ. "....is taking paid work outside the home, massess of women live a life devided between two competing urgency systems two clashing rhythms of living, that of the family and the work place what the new in scale at least, is child care for pay, the massive spread of the double day and the struggle within marriage to equalize the load at home"(p.239). ಅಮೆರಿಕದಂತಹ ಅತ್ಯಂತ ಮುಂದುವರಿದ ದೇಶದಲ್ಲಿಯೂ ಮಹಿಳೆಯರ ಸಮಸ್ಯೆ ಭಾರತದ ಮಹಿಳೆಯರ ಸಮಸ್ಯೆಗಿಂತ ತೀರ ಭಿನ್ನವಲ್ಲ ಎನ್ನುವುದನ್ನು ಈ ಮೇಲಿನ ಅಭಿಪ್ರಾಯ ತೆರೆದಿಡುತ್ತದೆ.ಕೆಲವು ಸಂಘ-ಸಂಸ್ಥೆಗಳು ಮಕ್ಕಳ ಜವಾಬ್ದಾರಿಯನ್ನು ಸಮಾಧಾನಕರ ರೀತಿಯಲ್ಲಿ ನಿಭಾಯಿಸುತ್ತವೆ ಎನ್ನುವುದೇನೋ ನಿಜ. ಆದರೆ ಅದಕ್ಕೆ ವಿಧಿಸುವ ಶುಲ್ಕವನ್ನು ತೆರುವುದು ಸಾಮಾನ್ಯ ಜನರಿಗೆ ಭಾರವಾಗುತ್ತದೆ ಎಂಬ ಅಭಿಪ್ರಾಯವೂ ಇದೆ.

ಉದ್ಯೋಗಸ್ಥ ಮಹಿಳೆಗೆ ಮಗುವಿನ ಲಾಲನೆ-ಪಾಲನೆಗಳ ಜವಾಬ್ದಾರಿ ಇಂದು ಸಮಸ್ಯೆಯಾಗಿದೆ ಎನ್ನುವುದರ ಮೇಲೆ ಈ ಎಲ್ಲ ಕತೆಗಳ ಒತ್ತಿದೆ. ಒಂದು ಮಗು ಅಥವಾ ಎರಡು ಮಕ್ಕಳನ್ನು ಬೆಳಸುವುದಷ್ಟೇ ಈಗಿನ ಅಗತ್ಯವಾಗಿರುವುದರಿಂದ ಈ ಅವಧಿ ತೀರ

ದೀರ್ಘವಲ್ಲ ಎನ್ನುವುದು ನಿಜವಾದರೂ ದುಡಿಮೆಯ ಉತ್ಸಾಹದ ಸಮಯವನ್ನು ಇದು ಕಬಳಿಸುತ್ತದೆ ಎನ್ನುವುದೇ ಆತಂಕದ ಸಂಗತಿ.

ಎಂದಿನಿಂದಲೂ ತಾಯ್ತನ ಮಹಿಳೆಯ ಆಯ್ಕೆಯಾಗಿಲ್ಲ. ಅವಳಿಗೆ ಇಷ್ಟವಿರಲಿ ಇಲ್ಲದಿರಲಿ ಆಕೆ ತಾಯಿಯಾಗಲೇ ಬೇಕು. ತಾಯಿಯಾಗದಿದ್ದಲ್ಲಿ ಬಂಜೆ ಎನಿಸಿಕೊಂಡು ಸಮಾಜದ ಕಣ್ಣಲ್ಲಿ ಅಪರಾಧಿಯಾಗುತ್ತಾಳೆ. ದೋಷವಿರುವುದು ಅವಳಲ್ಲಿಯೇ ಅಥವಾ ಗಂಡನಲ್ಲಿಯೇ ಎನ್ನುವುದರ ಬಗೆಗೆ ಸಮಾಜವು ಎಂದೂ ವಿಚಾರ ಮಾಡಿದಂತೆ ಕಾಣುವುದಿಲ್ಲ. ಮಗು ಹೆರದಿದ್ದುದು ಅವಳದೇ ತಪ್ಪು ಎಂದೇ ಭಾವಿಸಲಾಗುತ್ತದೆ. ಮಗುವಿಗಾಗಿ ಗಂಡಸು ಎಷ್ಟು ಮದುವೆಯನ್ನಾದರೂ ಮಾಡಿಕೊಳ್ಳಬಹುದು. ಆಗಲೂ ಮಗುವಾಗದಿದ್ದರೆ ದಶರಥ ಮಹಾರಾಜನಂತೆ ಪುತ್ರಕಾಮೇಷ್ಠಿಯ (ಧಾರ್ಮಿಕ ವಿಧಿವಿಧಾನಗಳು) ಮೊರೆಹೊಗಬಹುದು. ಪುರಾಣಕಾವ್ಯಗಳ ಕಾಲದಿಂದ ಆಧುನಿಕ ಕಾಲದವರೆಗೆ (ಇತ್ತೀಚಿನವರ್ಷದಲ್ಲಿ ಕೇರಳದಲ್ಲಿ ನಡೆದ ಯಾಗ) ಇದಕ್ಕೆ ಸಾಕಷ್ಟು ಪುರಾವೆಗಳು ದೊರಕುತ್ತವೆ. ಬಂಜೆತನದಿಂದ ಬಿಡುಗಡೆ ಪಡೆಯಲು, ಗಂಡನ ಪ್ರೀತಿಯನ್ನು ಇನ್ನೊಬ್ಬಳೊಂದಿಗೆ ಹಂಚಿಕೊಳ್ಳುವುದನ್ನು ತಪ್ಪಿಸಿಕೊಳ್ಳಲು ಕೆಲವು ಮಹಿಳೆಯರು ಒಳದಾರಿಗಳನ್ನು ಕಂಡುಕೊಳ್ಳುವ ಸಾಹಸಕ್ಕೆ ಮುಂದಾದದ್ದಿದೆ.ತಮ್ಮ ಯಾವುದೇ ದೋಷವಿಲ್ಲದೆ ಬಂಜೆತನದ ಅಭಿಶಾಪಕ್ಕೆ ತುತ್ತಾದಾಗ ಮಹಿಳೆಯು ಯಾವ ನಿರ್ಣಯಕ್ಕೆ ಬರಬಲ್ಲಳೆನ್ನುವುದನ್ನು ಕೆಲವು ಕಥಾನಕಗಳು ಬಿಚ್ಚಿಡುತ್ತವೆ.

ಗಂಡನ ದೋಷದಿಂದ ಮಗುವಾಗದಿದ್ದ ಸನ್ನಿವೇಶದಲ್ಲಿ ಆತ ಅದನ್ನು ಮುಚ್ಚಿಟ್ಟು ಹೆಂಡತಿಯದೇ ದೋಷ ಎನ್ನುವಂತೆ ವರ್ತಿಸಬಹುದು, ಆಧುನಿಕ ವಿಜ್ಞಾನದ ಮೊರೆಹೊಗಬಹುದು. ಒಟ್ಟಿನಲ್ಲಿ ಸಮಾಜದೆದುರು ತನ್ನ ಪುರಷತ್ವವನ್ನು ಸಾಬೀತು ಗೊಳಿಸಲು ಬೇಕಾದ ಯಾವುದೇ ಹುನ್ನಾರವನ್ನು ಮಾಡಲೂ ಸಿದ್ಧನಿರುತ್ತಾನೆ. ತನ್ನ ಈ ಕಾರ್ಯವು ಹೆಂಡತಿಯ ಮೇಲೆ ಯಾವ ಪರಿಣಾಮ ಬೀರಬಹುದುದೆನ್ನುವ ಕಡೆ ಆತನ ಗಮನ ಹರಿಯುವುದು ತೀರ ವಿರಳ. ಹೆಂಗಸಿನ ವಿಷಯದಲ್ಲಿ ತಾಯ್ತನವನ್ನು ಒಂದು ಮೌಲ್ಯವಾಗಿ ಅವಳ ಮೇಲೆ ಹೇರಿರುವ ಸಮಾಜವು ಗಂಡಸಿಗೆ 'ತಂದೆತನ' ಕುರಿತಂತೆ ಯಾವ ಒತ್ತಡವನ್ನೂ ಹೇರುವುದಿಲ್ಲ. ಆತನ ವಂಶದ ಮುಂದುವರಿಕೆಗೆ ವಾರಸುದಾರ ಬೇಕೆಂದು ಮಾತ್ರ ಬಯಸುತ್ತದೆ. ಹೆಂಗಸಿನಂತೆ ಕರುಳಬಳ್ಳಿಯ ಭಾವನಾತ್ಮಕ ಸಂಬಂಧಕ್ಕಿಂತ ವಾರಸುದಾರತ್ವದ ವ್ಯಾವಹಾರಿಕ ಸಂಬಂಧವೇ ಇಲ್ಲಿ ಮುಖ್ಯವಾಗುತ್ತದೆ. ಅದರ ಪೂರೈಕೆಗಾಗಿ ಮಹಿಳೆಯುನ್ನು ಉಪಕರಣವಾಗಿ ಬಳಸುತ್ತ ಬರಲಾಗಿದೆ. ಅಂದರೆ ಮಹಿಳೆಯ ಪ್ರಜನನತ್ವವನ್ನು ಪುರುಷ ಪ್ರತಿಷ್ಠೆಯ ಸಂಕೇತವಾಗಿ ಮಾತ್ರ ಕಾಣಲಾಗುತ್ತಿದೆ. ಮುಂದುವರಿಕೆಗೆ ಮಗು ಬೇಕೇ ಬೇಕು ಎಂದು ಯೋಚಿಸುವ ಗಂಡ ಆತನಲ್ಲಿ ದೋಷವಿದ್ದುದರಿಂದ ಆಧುನಿಕ ವಿಜ್ಞಾನದ ಸಹಾಯದಿಂದ ಮಗುವನ್ನು ಪಡೆಯಲು ಸಿದ್ಧನಾದುದನ್ನು ಶಾಂತಾದೇವಿಕಣವಿಯವರ 'ತಾಯ್ತನ' (ಬಯಲು ಆಲಯ) ಕತೆ ಕಂಡರಿಸುತ್ತದೆ. ಹುಟ್ಟಿನಿಂದಲೇ ಹೆಣ್ಣಿಗೆ ಪಾತಿವ್ರತ್ಯದ ಪಾಠ ಬೋಧಿಸುವ ಪರಿಸರದಲ್ಲಿ

ಈ ರೀತಿ ಗಂಡನ ಹೊರತಾಗಿ ಅನ್ಯರ ವೀರ್ಯದಿಂದ ಬಸಿರನ್ನು ಹೊತ್ತ ಮಹಿಳೆಯ ತಳಮಳ ಯಾವ ಬಗೆಯದು ಎನ್ನುವುದನ್ನು ಕತೆ ಅನಾವರಣಗೊಳಿಸುತ್ತದೆ. ಗರ್ಭಿಣಿಯಾದವಳಿಗೆ ಸಹಜವಾಗಿ ಹುಟ್ಟಲಿರುವ ತನ್ನ ಮಗುವಿನ ಬಗೆಗೆ ಇರುವ ವಾತ್ಸಲ್ಯ ಭಾವನೆಗಳು ಪಾರ್ವತಿಯಲ್ಲಿ ಮೂಡುವುದೇ ಇಲ್ಲ. ಅವಳಿಗಿದ್ದುದು ಬರೀ ಕುತೂಹಲ. 'ಈ ಕಂದನ ಕಾಣದ ಜನ್ಮದಾತನ ಭೂತ ತನ್ನನ್ನು ಕಾಡುತ್ತಿದೆ. ಆ ಭಯ ತನ್ನ ಪ್ರೀತಿಯ ಕತ್ತು ಹಿಚುಕುತ್ತಿದೆ. ತನ್ನನ್ನು ಹೋಲದೆ ಅವರನ್ನು ಹೋಲದೆ ಬೇರೆ ಯಾವುದೋ ಒಂದು ರೂಪವನ್ನು ಹೊರಬಹುದಾದ ಮಗು ತನ್ನ ಹೊಟ್ಟೆಗೆ ಭಾರವಾಗುತ್ತಿದೆ ಎನ್ನುವ ಪಾರ್ವತಿಯ ಆಲೋಚನೆ ಅವಳ ಇಚ್ಛೆಗೆ ವಿರುದ್ಧವಾಗಿ ಅವಳ ಮೇಲೆ ತಾಯ್ತನವನ್ನು ಹೇರಲಾಗಿದೆ ಎನ್ನುವುದನ್ನು ತೆರೆದಿಡುತ್ತದೆ.

ಸಂತಾನಾಪೇಕ್ಷೆಯನ್ನು ಪೂರೈಸಲು ಗಂಡನ ಒಪ್ಪಿಗೆ ಪಡೆದು ಹೆಂಡತಿ ಅನ್ಯವ್ಯಕ್ತಿಯಿಂದ ಗರ್ಭಧಾರಣೆ ಮಾಡಿಸಿಕೊಳ್ಳುವುದನ್ನು (ನಿಯೋಗ) ಪ್ರಾಚೀನ ಸಮಾಜವು ಆಪದ್ಧರ್ಮವೆಂದು ಸ್ವೀಕರಿಸಿತ್ತು. ವಂಶಮುಂದುವರಿಕೆಯ ಅನಿವಾರ್ಯತೆಯಿದ್ದಲ್ಲಿ ವಿಧವೆಯರೂ ನಿಯೋಗದಿಂದ ಮಗುವನ್ನು ಪಡೆಯಬಹುದಿತ್ತು. ಇಂತಹ ನಿಯೋಗಕ್ಕೆ ಸಾಕಷ್ಟು ಷರತ್ತುಗಳಿದ್ದವು.ಈ ಪದ್ಧತಿಯನ್ನು ಮಹಿಳೆಗೆ ನೀಡಿದ ಲೈಂಗಿಕ ಸ್ವಾತಂತ್ರ್ಯ ಎಂದೋ, ಅವಳ ತಾಯ್ತನದ ತೃಪ್ತಿಗಾಗಿ ಸಮಾಜವು ಕಲ್ಪಿಸಿದ್ದ ಅವಕಾಶ ಎಂದೋ ತಿಳಿಯುವಂತಿಲ್ಲ.ಗಂಡನ ಆಸ್ತಿಗೆ ವಾರಸುದಾರನನ್ನು ಹೆರುವ ವ್ಯಕ್ತಿಯಾಗಿ ಮಾತ್ರ ಅವಳನ್ನು ಬಳಸಿಕೊಳ್ಳಲಾಗುತ್ತಿತ್ತು. ಇಲ್ಲಿ ಅವಳ ಇಷ್ಟಾನಿಷ್ಟಗಳು ಗಣನೆಗೆ ಬರುತ್ತಿರಲಿಲ್ಲ. ಅವಳ ಲೈಂಗಿಕತೆಯು ಪುರುಷಾಧೀನವಾಗಿಯೇ ಇತ್ತು.

ಮಹಾಭಾರತದ ಕಾಲಕ್ಕಾಗಲೇ ಸಮಾಜದಲ್ಲಿ ನಿಯೋಗ ಪದ್ಧತಿಯ ಬಗೆಗೆ ಸದಭಿಪ್ರಾಯವಿದ್ದಂತೆ ಕಾಣುವುದಿಲ್ಲ.ಪಾಂಡವರು ಬದುಕಿನುದ್ದಕ್ಕೂ ಅವರ ವಂಶದ ಬಗೆಗೆ ಇತರರ ಹೀಯಾಳೀಸುವಿಕೆಗೆ ಬಲಿಯಾದುದನ್ನು ನೆನೆಯಬಹುದು. ಮಹಿಳೆಯ ಮೇಲೆ ಪಾತಿವ್ರತ್ಯದ ಬಿಗಿತಗಳು ಹೆಚ್ಚಾದಂತೆಲ್ಲ ಆತನ ಬಂಜೆತನಕ್ಕೂ ಆಕೆಯೇ ಬಲಿಪಶುವಾಗಿ ಈ ಸಮಸ್ಯೆ ಅಪರಿಹಾರ್ಯವಾಗಿ ಉಳಿಯಿತು. ಗಂಡನ ದೈಹಿಕ ದೋಷದ ಕಾರಣದಿಂದ ಹೆಂಡತಿಯರು ಬಂಜೆ ಎನ್ನುವ ಮೊದಲಿಕೆಗೆ ಗುರಿಯಾದಾಗ ಕೆಲವರಾದರೂ ತಮ್ಮದೇ ಆದ ಮಾರ್ಗಗಳನ್ನು ಕಂಡುಕೊಂಡದ್ದಿದೆ. ಶಾಂತಾದೇವಿ ಕಣವಿಯವರ 'ತೆಪ್ಪೋತ್ಸವ' (ಜಾತ್ರೆಮುಗಿದಿತ್ತು) ಗೀತಾನಾಗಭೂಷಣರ 'ಗೌಡನಗೋರಿ' (ಜ್ವಲಂತ) ಕತೆಗಳ ನಾಯಕಿಯರು ಕಂಡುಕೊಂಡ ಪರಿಹಾರ ನಿಯೋಗದ ರೀತಿಯದೇ. ಆದರೆ ಇಲ್ಲಿ ಗಂಡನ ಅರಿವಿಗೆ ಬಾರದಂತೆ ಅವರು ತಮ್ಮ ತಾಯ್ತನದ ಆಕಾಂಕ್ಷೆಯನ್ನು ಪೂರೈಸಿಕೊಳ್ಳುತ್ತಾರೆ. ಗಂಡಸಿನ ಬಂಜೆತವನ್ನು ಮುಚ್ಚಿಡುವ ವ್ಯವಸ್ಥೆಯು ಅವರಿಗೆ ಅನುಕೂಲವಾಗಿ ಪರಿಣಮಿಸುತ್ತದೆ. ತೆಪ್ಪೋತ್ಸವದ ಕೆಂಪಮ್ಮನ ಗಂಡನಿಗೆ ಅವನ ಬಂಜೆತನದ ಅರಿವಿರುವುದಿಲ್ಲ. ಗೌಡನಗೋರಿಯ ಗೌಡನಿಗೆ ತನ್ನ 'ಫಲಹೀನತೆ' ಗೊತ್ತಿರುತ್ತದೆ. ಮೊದಲ

ಕತೆಯಲ್ಲಿ ಗಂಡಸಿನ ಬಂಜೆತನದ ಅನಾವರಣ ಲೇಖಕಿಯ ಉದ್ದೇಶವಾಗಿದ್ದರೆ, ಎರಡನೆಯ ಕತೆಯಲ್ಲಿ ತನ್ನ ಮೇಲಿನ ಅಪವಾದವನ್ನು ಕಳೆದುಕೊಳ್ಳಲು ಹೆಂಗಸು ಆಯ್ದುಕೊಂಡ ದಾರಿಯನ್ನು ತಿಳಿಸುವುದಾಗಿದೆ. ಇಲ್ಲಿ ಗಂಡನಿಗೆ ಇದು ಗೊತ್ತಾಗುತ್ತದೆಯಾದರೂ ತನ್ನ 'ಪುರುಷತ್ವದ' ಸಂಕೇತವೆಂದು ಹೆಂಡತಿಯ ತಾಯ್ತನವನ್ನು 'ಜಾಣಕಿವುಡಿ'ನಿಂದ ಸ್ವೀಕರಿಸುತ್ತಾನೆ. ತನ್ನ ಪಿತೃತ್ವದ ನಿರಾಕರಣೆ ತನಗೇ ಅವಮಾನವೆಂದು ತಿಳಿಯುವ ಗೌಡ ಸಾಯುವ ಹೊತ್ತಿನಲ್ಲಿ ಹೆಂಡತಿಯ ಗುಟ್ಟು ತನಗೆ ಗೊತ್ತಿರುವುದಾಗಿ ಹೇಳಿ ಸಾಯುತ್ತಾನೆ. ಆದರೆ ಸಮಾಜದೆದುರು ಹೆಂಡತಿಯ ಪಾತಿವ್ರತ್ಯವು ಸುರಕ್ಷಿತವಾಗಿಯೇ ಉಳಿಯುತ್ತದೆ.

ತನಗೆ ಮಗುವಾಗುವ ಸಾಧ್ಯತೆಯೇ ಇಲ್ಲ ಎಂದು ತಿಳಿದಿದ್ದಾಗಲೂ ಮದುವೆಯಾಗಿ, ಹೆಂಡತಿಯಿಂದ ವಿಷಯವನ್ನು ಮುಚ್ಚಿಟ್ಟು ಅವಳು ಬಂಜೆ ಎಂದು ಹಂಗಿಸಿಕೊಳ್ಳುತ್ತ, ನೋಯುತ್ತ ಇದ್ದಾಗಲೂ ಸುಮ್ಮನಿರುವ ಗಂಡನ ಬಗೆಗೆ ಈ ವಿಷಯ ತಿಳಿದ ಹೆಂಡತಿಯರ ಪ್ರತಿಕ್ರಿಯೆ ವಿಭಿನ್ನವಾಗಿರಲು ಸಾಧ್ಯ. ಎಚ್. ಎಸ್. ಪಾರ್ವತಿಯವರ 'ಜಬಾಲ' ಮತ್ತು ಗಂಗಾಪಾದೇಕಲ್ ಅವರ 'ಇನ್ನೊಂದು ಅಧ್ಯಾಯ' ಕಾದಂಬರಿಗಳ ನಾಯಕಿಯರು ಎದುರಿಸಿದ ಬದುಕಿನ ಸನ್ನಿವೇಶ ಒಂದೇ ರೀತಿಯದು. ಗಂಡಿಗೊಂದು ಹೆಣ್ಣಿಗೊಂದು ಎಂಬ ಮೌಲ್ಯಪ್ರತಿಪಾದನೆಯ ಸಾಮಾಜಿಕ ರೀತಿಯನ್ನು ಈ ಕೃತಿಗಳು ಪ್ರಶ್ನಿಸುತ್ತವೆ. ಈ ನಾಯಕಿಯರು ತಾಯ್ತನದಿಂದ ವಂಚಿತರಾಗುವುದು ಗಂಡಂದಿರ ಅಸಾಮರ್ಥ್ಯದ ಕಾರಣದಿಂದ. ಜಬಾಲದ ಗೀತಾಳಿಗೆ ಮಕ್ಕಳ ಬಗೆಗೆ ಅತೀವ ಆಸಕ್ತಿ. ಮದುವೆಯಾಗಿ ಹಲವು ವರ್ಷ ಕಳೆದರೂ ಮಕ್ಕಳಾಗದೆ ಹೋದಾಗ ಉನ್ನತ ವ್ಯಾಸಂಗದಲ್ಲಿ ತಲ್ಲೀನಳಾಗುತ್ತಾಳೆ. ಅತ್ತೆ, ನಾದಿನಿಯರ ಮೂದಲಿಕೆಯನ್ನು ಸಹಿಸಬೇಕಾಗುತ್ತದೆ. ಮಕ್ಕಳ ವಿಷಯ ಮಾತನಾಡಿದರೆ ಸಿಡುಕುತ್ತಿರುವ ಗಂಡನ ನಡವಳಿಕೆಗೆ ಕಾರಣ ತಿಳಿದಮೇಲೆ ಅವನ ಬಗೆಗೆ ದ್ವೇಷ ಉಂಟಾಗಿ ಇನ್ನೊಬ್ಬನಿಂದ ಗರ್ಭಧರಿಸುತ್ತಾಳೆ. ಗಂಡ ರಾಜಶೇಖರನನ್ನು ಚಿಂತೆಯ ದಳ್ಳುರಿಗೆ ತಳ್ಳಿ ತೃಪ್ತಿಪಟ್ಟುದಾಗಿ ಭಾವಿಸಿದರೂ ತಾನೂ ಸಾಕಷ್ಟು ಮಾನಸಿಕ ತೊಳಲಾಟಕ್ಕೆ ಒಳಗಾಗುತ್ತಾಳೆ. ಸತ್ಯವನ್ನು ತಂದೆಗೆ ತಿಳಿಸಿ ಅವರ ಸಾಂತ್ವನದಿಂದ ಮನಸ್ಸಿಗೆ ನೆಮ್ಮದಿ ದೊರಕುತ್ತದೆ. ಸದಾ ಮಗಳ ಅಭಿವೃದ್ಧಿಯನ್ನೇ ಹಾರೈಸುತ್ತಿದ್ದ ತಂದೆಗೆ ಮಗಳ ನಿರ್ಧಾರ ಅವಸರದ್ದು ಎನಿಸಿದರೂ, ಅಪರಾಧ ಮಾಡಿದ್ದಾಳೆ ಎಂದು ಭಾವಿಸುವುದಿಲ್ಲ. ತಂದೆಯ ಅಭಯ ಹಸ್ತ ದೊರಕಿದ್ದರಿಂದ ಮಗು ಸತ್ಯಕಾಮ ಜಾಬಾಲಿಯಂತೆ ತಾಯಿಯ ಆಶ್ರಯದಲ್ಲಿಯೇ ಬೆಳೆಯಬೇಕೆಂದು ನಿರ್ಧರಿಸಿ ಮಗುವಿನ ರಹಸ್ಯವನ್ನು ಗಂಡನಿಗೆ ತಿಳಿಸಿ ಅವನಿಂದ ವಿಚ್ಛೇದನ ಪಡೆಯಲು ಮುಂದಾಗುತ್ತಾಳೆ.

'ಇನ್ನೊಂದು ಅಧ್ಯಾಯ'ದ ವಸುಧಳಿಗೆ ಗಂಡ ಶ್ರೀಧರನಿಂದಲೇ ಅವನಲ್ಲಿ ದೋಷವಿರುವ ವಿಷಯ ತಿಳಿಯುತ್ತದೆ. ತನ್ನಲ್ಲಿರುವ ದೋಷವನ್ನು ಮರೆಮಾಚಿ ಹೆಂಡತಿಯಲ್ಲಿ ದೋಷವಿರುವುದಾಗಿ ತಾಯಿಗೆ ಹೇಳುವ ಆತನ ಧೂರ್ತತನಕ್ಕೆ ವಸುಧ ಹೇಸುತ್ತಾಳೆ. ಅಷ್ಟು ಸಾಲದೆನ್ನುವಂತೆ ಅವಳ ಸಹೋದ್ಯೋಗಿ ಗಿರೀಶನೊಂದಿಗೆ ಅವಳಿಗೆ

ಅನೈತಿಕ ಸಂಬಂಧವಿರುವುದಾಗಿ ಆರೋಪಿಸುತ್ತಾನೆ. ಗಂಡನ ಕಾರಣದಿಂದ ತಾನು ತಾಯ್ತನದಿಂದ ವಂಚಿತಳಾಗಿದ್ದರೂ ಇತರರ ಕಣ್ಣಲ್ಲಿ ತಾನೇ ಅಪರಾಧಿಯಾಗಿರುವುದಕ್ಕೆ ರೋಸಿದ ವಸುಧ ದೂರದ ಊರಿಗೆ ವರ್ಗಮಾಡಿಸಿಕೊಂಡು ಹೋಗುತ್ತಾಳೆ. ತನ್ನ ಬದುಕಿನ ನಿರ್ಣಯವನ್ನು ತಾನೇ ತೆಗೆದುಕೊಳ್ಳುತ್ತಾಳೆ. ಗೆಳತಿ ಶ್ಯಾಮಲೆಯ ಸ್ನೇಹ, ಗಿರೀಶನ ಆತ್ಮೀಯತೆಗಳು ಬದುಕನ್ನು ಸಹ್ಯವಾಗಿಸುತ್ತವೆ. ಮುಂದೊಂದು ದಿನ ಗಿರೀಶನನ್ನು ವಿವಾಹವಾಗುವ ನಿರ್ಧಾರಕ್ಕೆ ಬರುತ್ತಾಳೆ. ತವರಿನವರ ಹಣದ ದಾಹ ಹಾಗೂ ಅವಳ ಸಂಪಾದನೆಯ ವಾರಸುದಾರತ್ವಕ್ಕೆ ಗಂಡನ ಮನೆಯವರಂತೆಯೇ ತವರಿನವರೂ ಪೈಪೋಟಿ ನಡೆಸಿದಾಗ ಅವಳಿಗೆ ಸಂಬಂಧಗಳ ಬಗೆಗೆ ಜುಗುಪ್ಸೆ ಉಂಟಾಗುತ್ತದೆ. ಗೀತಾ ಮತ್ತು ವಸುಧರಿಗೆ ಹೊಟ್ಟೆಪಾಡಿಗಾಗಿ ಇನ್ನೊಬ್ಬರ ಮುಂದೆ ಕೈಚಾಚಬೇಕಾದ ಅಗತ್ಯ ಇದ್ದಿರದ ಕಾರಣ ತಮಗಾದ ಅನ್ಯಾಯವನ್ನು ಪ್ರತಿಭಟಿಸಲು ಸಾಧ್ಯವಾಗುತ್ತದೆ. ಶ್ರೀಧರ ಮತ್ತು ರಾಜಶೇಖರ ತಮ್ಮ ದೋಷವನ್ನು ಮರೆಮಾಚಲು ಹೆಂಡತಿಯ ಮೇಲೆ ಅಧಿಕಾರ ಚಲಾಯಿಸುವ ರೀತಿ ಗೀತಾ ವಸುಧರ ಅಸಹನೆಗೆ ಕಾರಣವಾಗುತ್ತದೆ. ಹೆಂಡತಿಯನ್ನು ವಿಶ್ವಾಸದಿಂದ ಕಂಡು ತಮ್ಮ ದೋಷವನ್ನು ಹೇಳಿಕೊಂಡಿದ್ದ ಪಕ್ಷದಲ್ಲಿ ವಿದ್ಯಾವಂತೆಯರಾದ ಅವರು ಅದನ್ನು ಸರಳವಾಗಿ ತೆಗೆದುಕೊಳ್ಳುವ ಸಾಧ್ಯತೆಯಿತ್ತು. ಆದರೆ ತಮ್ಮ ನ್ಯೂನತೆಯನ್ನು ಮುಚ್ಚಿಟ್ಟು ಹೆಂಡತಿಯರನ್ನು ಸಮಾಜದ ದೃಷ್ಟಿಯಲ್ಲಿ ಬಂಜೆಯರನ್ನಾಗಿಸುವ ಪುರುಷರ ದ್ವಂದ್ವ ನಿಲುವಿಗೆ ತೋರಿದ ಪ್ರತಿಭಟನೆಯನ್ನು ಕೃತಿಗಳು ದಾಖಲಿಸುತ್ತವೆ. ಸ್ಥಾಪಿತ ಮೌಲ್ಯಗಳ ತಾರತಮ್ಯವನ್ನು ಇಬ್ಬರು ಲೇಖಕಿಯರು ಪ್ರಶ್ನಿಸಿದ ರೀತಿಯಲ್ಲಿ ಸಾಮ್ಯತೆಯಿದೆ. ಮಹಿಳೆಗೆ ದೊರೆತ ಶಿಕ್ಷಣದಿಂದಾಗಿ ತನಗಾಗುತ್ತಿರುವ ಅನ್ಯಾಯವನ್ನು ಅರ್ಥಮಾಡಿ ಕೊಳ್ಳಲು, ಪ್ರಶ್ನಿಸಲು ಇಂದು ಆಕೆಗೆ ಸಾಧ್ಯವಾಗುತ್ತಿದೆ. ಇದೆಲ್ಲ ಹೆಂಗಸಾದ ತನ್ನ ಪ್ರಾರಬ್ಧ ಎನ್ನುವ ಭಾವನೆಯಿಂದ ಆಕೆ ಹೊರಬರುತ್ತಿದ್ದಾಳೆ. ಈ ಬದಲಾದ ಪರಿಸ್ಥಿತಿಯನ್ನು ಸ್ವೀಕರಿಸಲು ಪುರುಷನ ಅಹಮಿಕೆ ಅಡ್ಡಿಯುಂಟು ಮಾಡುತ್ತಿದೆ. ಹಾಗಾಗಿ, ಬದುಕಿನಲ್ಲಿ ಎದುರಾಗುವ ಸಮಸ್ಯೆಗಳು ಬೃಹದಾಕಾರವಾಗಿ ಪರಿಣಮಿಸಿ ದಾಂಪತ್ಯವನ್ನು ಅಸಹನೀಯ ವಾಗಿಸುತ್ತಿವೆ. ಮಹಿಳೆ ವಿನಾಕಾರಣ ಸಂಘರ್ಷಕ್ಕೆ ಇಳಿಯುತ್ತಿದ್ದಾಳೆ ಎಂದು ಮೇಲು ನೋಟಕ್ಕೆ ಕಾಣುತ್ತಿದೆ. ಈ ಅಂಶಗಳನ್ನು ಇವೆರಡು ಕಾದಂಬರಿಗಳು ಪರಿಣಾಮಕಾರಿಯಾಗಿ ತೆರೆದಿಡುತ್ತವೆ.

ತಾಯ್ತನಕ್ಕೆ ಮಾನ್ಯತೆ ಇರುವುದು ವೈವಾಹಿಕ ಪರಿಧಿಯೊಳಗೆ ಮಾತ್ರ. ಅದಕ್ಕೆ ಹೊರತಾದ ತಾಯ್ತನವನ್ನು ಬಯಸಿದರೆ ಸಮಾಜವು ಅಂತಹ ಮಹಿಳೆಯನ್ನು ಅತ್ಯಂತ ಕೀಳಾಗಿ ಕಾಣುತ್ತದೆ. ಆ ಸಂತಾನವನ್ನು ನಿಕೃಷ್ಟವಾಗಿ ನಡೆಸಿಕೊಳ್ಳುತ್ತದೆ. ಆದಾಗ್ಯೂ ಒಂದು ಕಾಲಕ್ಕೆ ಅವಿವಾಹಿತ ತಾಯ್ತನವು ಕೆಲಮಟ್ಟಿಗೆ ಪ್ರಚಲಿತವಾಗಿತ್ತು. ಎನ್ನುವುದಕ್ಕೆ 'ಕಾನೀನ' ಎಂಬ ಪದ ಸಾಕ್ಷಿಯೊದಗಿಸುತ್ತದೆ. ಸತ್ಯಕಾಮ, ಕರ್ಣರ ಹುಟ್ಟು ಉದಾಹರಣೆಯಾಗುತ್ತದೆ. ಕುತೂಹಲಕ್ಕಾಗಿ ಕರ್ಣನನ್ನು ಪಡೆದ ಕುಂತಿ ಹುಟ್ಟಿದ ಮಗುವನ್ನು ಗಂಗೆಯಲ್ಲಿ ತೇಲಿ

ಬಿಟ್ಟಳೆಂದರೆ ಮಹಾಭಾರತದ ಕಾಲಕ್ಕಾಗಲೇ ಸಮಾಜವು ಇದನ್ನು ಮಾನ್ಯ ಮಾಡುತ್ತಿರಲಿಲ್ಲವೆಂದೇ ಅರ್ಥೈಸಬೇಕಾಗುತ್ತದೆ. ಮಹಿಳೆಯ ತಾಯ್ತನದ ಹಕ್ಕು ಎಂದಿನಿಂದಲೂ ಆಕೆಯದಾಗಿರದೆ ಸಮಾಜದ್ದಾಗಿತ್ತು. ತಾಯ್ತನದ ಎಲ್ಲ ಬವಣೆಯನ್ನು ಅನುಭವಿಸುವ ಮಹಿಳೆಗೆ ಆಯ್ಕೆಗೆ ಸ್ವಾತಂತ್ರ್ಯ ತನ್ನದಲ್ಲ ಎನ್ನುವ ಅರಿವುಂಟಾದಾಗ ತನ್ನಹಕ್ಕನ್ನು ಸ್ಥಾಪಿಸುವ ಅಗತ್ಯ ಕಂಡುಬಂದುದರ ಫಲವಾಗಿ ಕೆಲವು ಕೃತಿಗಳು ರಚಿತವಾದವು.

ಹಿರಿಯ ಲೇಖಕಿ ಎಚ್ .ವಿ ಸಾವಿತ್ರಮ್ಮನವರಿಂದ ಎಂ.ಎಸ್ .ವೇದಾ ಅವರವರೆಗೆ ವಿವಿಧ ತಲೆಯಾರಿಗೆ ಸೇರಿದ ಲೇಖಕಿಯರು ಸ್ಥಾಪಿತ ಮೌಲ್ಯವನ್ನು ತಿರಸ್ಕರಿಸಿ ತಾಯ್ತನದ ಸಂಪೂರ್ಣ ಹಕ್ಕು ಮಹಿಳೆಯದು ಎನ್ನುವುದನ್ನು ಪ್ರತಿಪಾದಿಸಲು ಪ್ರಯತ್ನಿಸಿದ್ದಾರೆ.

ಸಾವಿತ್ರಮ್ಮನವರ 'ಸುಪ್ತಬಯಕೆ' ಕತೆಯ ಸೀತೆ ಲಂಡನ್ನಿನಲ್ಲಿ ಮಗುವನ್ನು ಹೆತ್ತು ದೇಶಕ್ಕೆ ವಾಪಸ್ಸಾಗುತ್ತಾಳೆ. ಮದುವೆಯ ಹೊರತಾಗಿಯೂ ಮಗುವನ್ನು ಪಡೆದ ಸೀತೆ ಮದುವೆ ಆಗದಿದ್ದರೆ ಮಕ್ಕಳಾಗ ಬಾರದೇನೇ ಎಂದು ತಂಗಿ ರಮೆಯನ್ನು ಪ್ರಶ್ನಿಸುತ್ತಾಳಾದರೂ ಸಮಾಜಕ್ಕೆ ಹೆದರಿದ ರಮೆ ಮಗುವಿನ ತಂದೆ ತೀರಿಹೋಗಿರುವುದಾಗಿ ಕತೆ ಕಟ್ಟುತ್ತಾಳೆ. ದೂರದ ನಾಡಿನಲ್ಲಿನ ಸೀತೆಯ ಹೆರುವಿಕೆ ಹಾಗೂ ರಮೆ ಇತರರನ್ನು ನಂಬಿಸಲು ಹೇಳುವ ಕಟ್ಟುಕತೆಗಳಲ್ಲಿ ಲೇಖಕಿ ಮಹಿಳೆಯರಿಗೆ ಸಮಾಜದ ಬಗೆಗಿರುವ ಅಂಜಿಕೆಯನ್ನು ಹೇಳಿದ್ದಾರೆ. ಆ ಮಗುವಿನ ತಂದೆಯಾದವನ ಎದುರಿನಲ್ಲಿಯೇ ಬಾಳುವ ಸೀತೆಯ ಧೈರ್ಯ ಅಸಾದಾರಣವಾದದ್ದೇ. ಮಗುವನ್ನು ಪಡೆಯಬೇಕೆಂಬ ಹಟವೇನೂ ಅವಳದಾಗಿರಲಿಲ್ಲ. ಆದ ಮಗುವನ್ನು ಅವಳು ನಿರಾಕರಿಸದೆ ಬೆಳೆಸುವ ಧೈರ್ಯ ಮಾಡುತ್ತಾಳೆ. ಸೀತೆಯಂತೆಯೇ ಅನಿರೀಕ್ಷಿತವಾಗಿ 'ತಾಯ್ತನ'ವನ್ನು ಸ್ವೀಕರಿಸಿದವಳು ಗೀತಾನಾಗಭೂಷಣರ 'ಧುಮ್ಮಸು' ಕಾದಂಬರಿಯ ನಾಯಕಿ ಸೋನಿ. ನಿಶ್ಚಯವಾಗಿದ್ದ ಗಂಡು ಮಲ್ಲೇಶಿ ಅಪಘಾತದಲ್ಲಿ ಸತ್ತು ಹೋದ ಆಘಾತವನ್ನು ಮರೆಯಬೇಕೆಂದುಕೊಳ್ಳುವ ಪೂರ್ವದಲ್ಲಿಯೇ ಅವನ ಅಂಶ ತನ್ನ ಗರ್ಭದಲ್ಲಿ ಬೆಳೆಯುತ್ತಿರುವ ಸಂಗತಿ ಗೊತ್ತಾಗುತ್ತದೆ. ಎಷ್ಟೇ ಒತ್ತಡ ಹೇರಿದರೂ ಸೋನಿ ಅದನ್ನು ತೆಗೆಸಲು ಒಪ್ಪವುದಿಲ್ಲ. ಊರಲ್ಲಿ ಪಂಚಾಯ್ತಿ ನಡೆದು ಅವಳು ಹಾದರದ ಬಸಿರು ತೆಗೆಸಲು ಒಪ್ಪದ್ದರಿಂದ ಊರುಬಿಟ್ಟು ಹೋಗಬೇಕೆಂದೂ, ಸಾವಿರ ರೂಪಾಯಿ ದಂಡತೆತ್ತರೆ ಅವಳ ಅಪ್ಪ ಊರಲ್ಲಿರಬಹುದೆಂದೂ ಊರಿನ ಮುಖಂಡರು 'ಫತ್ವಾ' ಹೊರಡಿಸುತ್ತಾರೆ. ಇದರಿಂದ ಅವಮಾನಿತನಾದ ಅವಳ ಅಪ್ಪ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಊರುಬಿಟ್ಟು ಹೋಗುವ ಸೋನಿ ಮಲ್ಲೇಶಿಯ ಸ್ನೇಹಿತರ ಸಹಾಯದಿಂದ ನಗರದ ಝೋಪಡಿ ಪಟ್ಟಿಯಲ್ಲಿದ್ದು ಕೂಲಿಮಾಡಿ ಬದುಕುತ್ತಾಳೆ. ಹಳ್ಳಿಯವರ ತಾರತಮ್ಯದ ಕಾನೂನಿನ ಪರಿಧಿಯಿಂದ ಹೊರಗಡೆ ಮಗನನ್ನು ಬೆಳೆಸಬೇಕೆಂಬ ಸಂಕಲ್ಪದಂತೆ ಮಗುವನ್ನು ಸಾಕುತ್ತಾಳೆ. ಧುಮ್ಮಸಿನ ಹೊಡೆತ ಬಿದ್ದಂತೆ ನೆಲಗಟ್ಟಿಯಾಗುವಂತೆ ಬಾಳಿನಲ್ಲಿ ಎದುರಾಗುವ ಆಘಾತ ಗಳಿಂದ ವ್ಯಕ್ತಿತ್ವ ಗಟ್ಟಿಯಾಗುತ್ತದೆನ್ನುವ ನಂಬಿಕೆ ಸೋನಿಯದು. ತುಡುಗು ದನದಂತೆ ಬೇಕಾದಲ್ಲಿ ಹೊಕ್ಕು ಮೇಯುವ ಮೇಲುಜಾತಿಯ ಗಂಡಸರಿಗೆ ಸೊಪ್ಪುಹಾಕದೆ ತಾಯ್ತನವನ್ನು

ಮಾತುಗಳೂ (ಕ್ಷಿತಿಜದಾಚೆಗಿನ ನೋಟಗಳು-ಎಂ.ಎಸ್.ವೇದಾ) ತಾಯ್ತನದೊಂದಿಗೆ ತಳಕು ಹಾಕಿಕೊಂಡಿರುವ ಇತರ ಸಂಬಂಧಗಳ ಬಗೆಗೂ ಆಲೋಚಿಸಬೇಕೆನ್ನುವುದರ ಕಡೆ ಗಮನ ಸೆಳೆಯುತ್ತವೆ. ಅವಿವಾಹಿತ ತಾಯ್ತನವನ್ನು ಸ್ವೀಕರಿಸುವುದು ಒಂದು ಸವಾಲು ಎನ್ನುವುದನ್ನು ಒಪ್ಪುವ ಕತೆ ಒಂದು ಕಾಲಕ್ಕೆ 'ಬಿಚ್ಚೋಲೆ ಗೌರಮ್ಮ'ಸಾಗಿದ್ದ ಮೌನ ಇಂತಹ ನಿರ್ಧಾರಕ್ಕೆ ಬರಬೇಕಾದ ಬದುಕಿನ ಸಂದರ್ಭವನ್ನು ಪರಿಗಣಿಸುತ್ತದೆ. "ಬದುಕಿನ ಸಂಘರ್ಷಗಳು ಮೌನವನ್ನು ಮುರೀತವೆ, ಮೌಲ್ಯಗಳನ್ನು ನುಂಗ್ತವೆ, ಮನುಷ್ಯನನ್ನು ಉಲ್ಟಾ ಪಲ್ಟಾ ಮಾಡಿಬಿಡ್ತವೆ. ಆದ್ರೆ ಅದಕ್ಕೆಲ್ಲಾ ನಾವು ಗಾಬರಿಯಾಗಬಾರದಷ್ಟೆ" ಎನ್ನುವ ಮೌನಳ ಮಾತುಗಳು ಮೇಲಿನ ಅಭಿಪ್ರಾಯವನ್ನು ಮೂಡಿಸುತ್ತವೆ. ಬ್ಯಾಂಕಿನಲ್ಲಿ ಅಧಿಕಾರಿಯಾಗಿದ್ದ ಅವಳು ಮದುವೆಯ ಬಗೆಗೆ ಯೋಚಿಸಿರುವುದಿಲ್ಲ. ಆದರೆ ಖಾಲಿಯಾಗಿದ್ದ ಬದುಕಿನ ಸಂದರ್ಭದಲ್ಲಿ ಪರಿಚಯವಾಗುವ ಪ್ರಹೇಲಿಯ ಆಕರ್ಷಣೆಗೆ ಆಕೆ ಒಳಗಾಗುವುದು ಅನಿರೀಕ್ಷಿತವಾಗಿಯೇ ಆದರೂ ಅವಳ ಒಳಗೊಂದು ಆಲೋಚನಾಕ್ರಮ ಬೆಳೆಯುತ್ತಿತ್ತು. 'ಹೆಣ್ತನ ಗೆದ್ದಷ್ಟು ಸುಲಭವಾಗಿ ನನಗೆ ತಾಯ್ತನವನ್ನು ಗೆಲ್ಲಲಿಕ್ಕೆ ಆಗಲೇ ಇಲ್ಲ' ಎನ್ನುವ ಭಾವನಾತ್ಮಕ ನೆಲೆ ಅವಳದಾಗಿತ್ತು. ಲೈಂಗಿಕತೆಗೂ, ವೈವಾಹಿಕ ಸ್ಥಿತಿಗೂ, ತಾಯ್ತನಕ್ಕೂ ಪೂರಕ ಸಂಬಂಧಗಳಿದ್ದರೂ ವಿವಾಹಸಂಸ್ಥೆಯನ್ನು ನಿರಾಕರಿಸಿ ತಾಯ್ತನದ ಪೂರೈಕೆಗಾಗಿ ಮಾತ್ರ ಲೈಂಗಿಕ ಸಂಪರ್ಕವನ್ನು ಹೊಂದುವ ಮೌನ ಹೀಗೊಂದು ಕತೆಯ ನಾಯಕಿಯಂತೆ ಅಕಸ್ಮಾತ್ತಾಗಿ ಬದುಕಲ್ಲಿ ಒದಗಿದ ಅವಕಾಶವನ್ನು ಅವಚಿಕೊಂಡವಳಲ್ಲ, ಅಥವಾ 'ಕೊನೆಯದಾರಿ' ಯ ಲೀಲಾಳಂತೆ ಯಾರ್ಯಾರದೋ ಸ್ನೇಹವನ್ನು ಬಯಸುವುದೂ ಇಲ್ಲ. ನಿರ್ದಿಷ್ಟ ದಾರಿಯನ್ನು ಆಯ್ದುಕೊಂಡವಳು. ತನ್ನ ಬಯಕೆ ಪೂರೈಸಿದ ಮೇಲೆ ಇನ್ನೊಬ್ಬರ ಬದುಕಿಗೆ ತನ್ನಿಂದ ತೊಂದರೆಯಾಗುತ್ತದೆ ಎಂಬ ವಿಷಯ ಗಮನಕ್ಕೆ ಬರುತ್ತಲೇ ಹಿಂದೆ ಸರಿಯುವ ನಿರ್ಧಾರ ಕೈಗೊಳ್ಳುತ್ತಾಳೆ. ಅಂದರೆ, ಕ್ರಿಯೆಯ ಪರಿಣಾಮದ ಕಡೆಗೂ ಕತೆಯ ದೃಷ್ಟಿಹರಿಯುತ್ತದೆ. ಸ್ವಕೇಂದ್ರಿತ ನೆಲೆಯನ್ನು ದಾಟುವ ಪ್ರಯತ್ನವನ್ನು ಮೌನಳಂತೆಯೇ ಮನಸ್ವಿನಿಯೂ ಮಾಡುತ್ತಾಳೆ.ಮಾನವೀಯ ಸಂಬಂಧಗಳ ವಿಶ್ಲೇಷಣೆಯನ್ನು ಕತೆ ಒಳಗೊಳ್ಳುತ್ತದೆ.

ಬದುಕಿನ ಯಾವುದೋ ಒಂದು ಹಂತದಲ್ಲಿ ಒಂಟಿತನದ ದಿಗಿಲಿಗೆ ಬೆಚ್ಚಿ ವಿವಾಹಬಾಹಿರ ಸಂಬಂಧದಿಂದ ಮಗುವನ್ನು ಪಡೆದರೂ ಮುಂದೆ ಆ ಮಗು ಕೇಳುವ ಪ್ರಶ್ನೆಗಳಿಗೆ,ಆ ಮಗು ದೊಡ್ಡದಾದ ಮೇಲೆ ಎದುರಿಸಬೇಕಾಗಿ ಬರುವ ಪರಿಸ್ಥಿತಿಯ ಬಗೆಗೆ ಈ ಎಲ್ಲ ಕತೆಗಳೂ ಮೌನ ತಾಳುತ್ತವೆ. ಇವೆಲ್ಲವನ್ನೂ ಎದುರಿಸುವ ಎದೆಗಾರಿಕೆ ಹೆಂಗಸಿನದಾಗ ಬೇಕಾಗುತ್ತದೆ. ಈ ಬಾಧ್ಯಸ್ಥಿಕೆಯಿಂದ ಆಕೆ ನುಣುಚಿಕೊಳ್ಳಲು ಸಾಧ್ಯವಾಗುವುದಿಲ್ಲ. ಬದಲಾಗುತ್ತಿರುವ ಸಾಮಾಜಿಕ ಸನ್ನಿವೇಶದಲ್ಲಿಯೂ ಹಲವಾರು ಪ್ರಶ್ನೆಗಳನ್ನು ಎದುರಿಸುವ ನುಂಗುವ ಸ್ಥೈರ್ಯವನ್ನು ಪಡೆದವಳು ಭಾಗೀರಥಿ ಹೆಗಡೆಯವರ 'ಸೂರ್ಯಪುತ್ರ' ಕತೆಯ (ಪ್ರವಾಹ) ಅಮ್ಮ. ಮದುವೆಯ ಅರ್ಥಗೊತ್ತಾಗುವ ಪೂರ್ವದಲ್ಲಿಯೇ ವಿಧವೆಯಾಗಿ ಗತಿ

ಇಲ್ಲದಿರುವಾಗ, 'ನನಗೆ ಕುಂತಲ್ಲಿ ನಿಂತಲ್ಲಿ ಕಾಲಿಗೆ ತೊಡರಿಕೊಳ್ಳೋ 'ನಂದು' ಅನ್ನೋದೊಂದು ಬೇಕಾಗಿತ್ತು. 'ನೀನೇ' ಎಂದು ಕೇಳೋರಿಲ್ದ ಬಿಕನಾಸಿಗೆ ಏನಾದ್ರೂ ಒಂದು ಆಧಾರ ಬೇಕಾಗಿತ್ತು' ಎಂದು ತಮ್ಮಯ್ಯನಿಗೆ ಹೇಳುವ ಅವನ ಅಮ್ಮನ ಮಾತುಗಳು ಅವಳ ಬಾಳನ್ನು ತೆರೆದಿಡುತ್ತವೆ. 'ಅಪ್ಪಯಾರು'?ಎಂದು ಕೇಳುವ ಪ್ರಶ್ನೆಗೆ ಉತ್ತರ ಹೇಳುವುದು ಕಷ್ಟವೇ. ಅಪ್ಪನ ಅಸ್ತಿತ್ವದ ಮೂಲಕವೇ ಮಕ್ಕಳನ್ನು ಗುರುತಿಸುವ ಸಮಾಜದಲ್ಲಿ ಅದಕ್ಕೆ ಹೊರತಾದ ಹುಟ್ಟನ್ನು ಕೀಳಾಗಿ ಕಂಡು ಆ ಮಗುವಿನ ಬಾಳು ದುರ್ಬಲವಾಗುವಂತೆ ಮಾಡುವುದರ ಮೂಲಕ ತೃಪ್ತಿ ಪಡೆಯುವುದು, ಮೌಲ್ಯಗಳನ್ನು ಕಾಪಾಡುವ ವಕ್ತಾರರಂತೆ ವರ್ತಿಸುವುದು ಮನುಷ್ಯಸ್ವಭಾವವಾಗಿದೆ. ಈ ಕತೆಯಲ್ಲಿ ತಮ್ಮಯ್ಯ ಅಂಥವರ ಮಾತಿನಿಂದ ನೊಂದು ಅಪ್ಪಯಾರೆಂದು ತಿಳಿಯಲು ಪ್ರಯತ್ನಿಸಿದಾಗ ತಾಯಿ ಆಡುವ ಮಾತುಗಳು ಅವಳ ಬದುಕಿನ ಅನಿವಾರ್ಯತೆಯನ್ನು ತೆರೆದಿಡುತ್ತವೆ.'ಮೆಟ್ಟುಮೆಟ್ಟಿಗೆ ನೀ ಪಾಪಿ, ನೀ ದರಿದ್ರಿ ಅನ್ನಿಸಿಕೊಂಡುಈ ಕುತೂಹಲ ಎದ್ದು ನಿಂತಿತೆನ್ನುವಾಗ, ಆ ದನ ಹ್ಯಾಂಗ್ ಕರು ಹಾಕಿತೆಂದು, ಈ ತೆಂಗು ಹ್ಯಾಂಗ್ ಕಾಯಿ ಬಿಟ್ಟಿತೆಂದು, ಒಂದು ಕುನ್ನಿ ಗೊಡ್ಡೂಕೂಡ ತನ್ನ ಮರಿಗಳ್ನ ಮುಚ್ಚಿಟ್ಟು, ಮುಚ್ಚಿಟ್ಟುಯಾಕೆ ಮೊಲೆಯುಣಿಸುತ್ತದೆಂದು, ಅವೆಲ್ಲಕೆ ಅಪ್ಪ ಯಾರೆಂದು ಹೇಗೆ ಹೇಳೋದು'' (ಪು. ೭೭) ತಾಯ್ತನ ಪ್ರಕೃತಿ ಸಹಜವಾದದ್ದು. ಅದಕ್ಕಿರುವ ಸಮಾಜ ನಿರ್ಮಿತ ಗೋಡೆಯನ್ನು ಕೃತಿ ಪ್ರಶ್ನಿಸುತ್ತದೆ. ತಾಯಿ ಅನ್ನೋದು ಸತ್ಯ, ತಂದೆ ಅನ್ನೋದು ನಂಬಿಕೆ ಎಂಬ ಮಾತು ಬಹಳ ಪ್ರಚಲಿತವಾದದ್ದು. ಈ ಹಿನ್ನೆಲೆಯಲ್ಲಿಕತೆಯ ಅರ್ಥವಂತಿಕೆ ಸಂಕೀರ್ಣತೆಯ ಕಡೆಗೆ ಗಮಿಸುತ್ತದೆ. ಕತೆಯ ಶೀರ್ಷಿಕೆಯು ಕರ್ಣನ ನೆನಪನ್ನು ತರುತ್ತದೆ. ಅಲ್ಲಿ ಆತನ ಪರಾಕ್ರಮ ಮುಖ್ಯವಾಗದೆ ಕುಲದ ಹೆಸರಿನಲ್ಲಿ ಕೀಳಾಗಿ ಕಾಣಲಾಗುತ್ತದೆ. ಇಲ್ಲಿ ತಮ್ಮಯ್ಯನ ಸಾಹಿತ್ಯಾಸಕ್ತಿಯಾಗಲಿ, ಕಠಿಣ ಪರಿಶ್ರಮವಾಗಲಿ ಗಣನೆಗೇ ಬರುವುದಿಲ್ಲ. ತಮ್ಮೈಶಾಸ್ತ್ರಿ 'ಜಮೀನು ಮನೆ, ಮಾಡ್ಕೊಂಡು ಬಿಟ್ರೆ ಮಂತಾನಸ್ಥ ಆಗ್ತಾನೆಯೇ....? ಕೂಲಿ ಮಾಡುವುದು ಬಿಟ್ಟ ಮಾತ್ರಕ್ಕೆ 'ಅಪ್ಪಂಥ ಗ್ರಸ್ಥ' ನಾಗಬಹುದೊ?....ಮಾತಿನ ಚೂರಿ ನೋಟದ ಮೊನೆ ಹತ್ತಿರ ಹಾದರೆ ಸೆರಗು ತಾಗಿ ಬಿಡಬಹುದೆಂಬ ಹೀನಾಯೆ ನಿಲ್ಲಬಹುದೊ...' ಎನ್ನುವ ಪ್ರಶ್ನೆಯನ್ನು ಕತೆ ಎತ್ತುತ್ತದೆ. ಮಹಾಭಾರತದ ಕಾಲಕ್ಕಿಂತ ಈ ಕಾಲ ಈ ವಿಷಯದಲ್ಲಿ ಕಿಂಚಿತ್ತೂ ಬದಲಾಗಿಲ್ಲ ಎನ್ನುವುದು ಲೇಖಕಿಯ ನಿಲುವಾಗಿದೆ. ಮಗುವಿನ ಬೆಳವಣಿಗೆಯಲ್ಲಿ ಪಾತ್ರವಹಿಸುವ ತಾಯಿಯ ಅಸ್ತಿತ್ವ ಗೌಣವಾಗಿ ತಂದೆಯ ಹೆಸರಿನ ಪ್ರತಿಷ್ಠೆಯೇ ಪ್ರಧಾನ ನೆಲೆಯಲ್ಲಿರುವುದನ್ನು ಕತೆ ಕಂಡರಿಸುತ್ತದೆ. ಪಿತೃತ್ವದ ಖಚಿತತೆ ಇದ್ದಾಗ ಮಾತ್ರ ಸಂತಾನಕ್ಕೆ ಸಿಗುವ ಅಧಿಕೃತತೆಯನ್ನು ತಾಯಿ ಮತ್ತು ಮಗ ಒಪ್ಪುವುದಿಲ್ಲ. ಮಗುವನ್ನು ಪಡೆಯುವ ಸಲುವಾಗಿ ತನ್ನದೆನ್ನುವ ತೋಟ, ಜಾಗಗಳನ್ನು ಅದರ ಜನ್ಮದಾತನಿಗೆ ದಾನ ಮಾಡಿದ್ದ ತಾಯಿಯ 'ಔದಾರ್ಯ'ದಿಂದ ಪ್ರಸ್ತುತ ತಾಯಿ, ಮಗನಿಗೆ ನಿಲ್ಲಲು ನೆಲೆಯಿಲ್ಲದ ಸ್ಥಿತಿ ಎದುರಾದದ್ದು, ತಾಯ್ತನದ ತೃಪ್ತಿಗಾಗಿ ಎಂದೋ ಮಾಡಿದ ತಪ್ಪಿನಿಂದಾಗಿ ಇಂದು ಅವರಿಬ್ಬರೂ 'ಅಬ್ಯೆಪಾರಿ' ಯಾಗುವ ಸನ್ನಿವೇಶ ನಿರ್ಮಾಣವಾದದ್ದು, ಅವಳ

ಬದುಕಿನ ದುರಂತವೇ ಸರಿ. ಒಂಟಿತನದಿಂದ ಪಾರಾಗಲು ತನ್ನದಾದ ಇನ್ನೊಂದು ಜೀವ ಬೇಕೆನ್ನುವ ಹೆಂಗಸಿನ ಹಂಬಲವು ಸಮಾಜ ವ್ಯವಸ್ಥೆಯ ಕರಾಳ ಕೈಗೆ ಸಿಕ್ಕು ನಲುಗಿ ಹೋಗುತ್ತದೆಯೇ ವಿನಾ ನಳನಳಿಸದು ಎನ್ನುವುದನ್ನು ಕತೆಯ ಓದು ತೋರಿಸಿಕೊಡುತ್ತದೆ. ದೈಹಿಕ ದೋಷದಿಂದ ಮಹಿಳೆ ಮಗುವನ್ನು ಹೆರಲು ಅಸಮರ್ಥಳಾದರೆ, ಗಂಡನಿಗೆ ಇನ್ನೊಂದು ಮದುವೆ ಮಾಡಿ ವಂಶ ಮುಂದುವರಿಸುವ ಮೊಮ್ಮಗನನ್ನು ಪಡೆಯುವುದು ಮನೆಯ ಹಿರಿಯರ ತೀರ್ಮಾನವಾಗಿತ್ತು. ಕೆಲವೊಮ್ಮೆ ಹೆಂಡತಿಯೇ ಆ ಮನೆಯ ದೀಪಬೆಳಗಲು ಮಗು ಬೇಕೆಂದು ಗಂಡನಿಗೆ ತಾನೇ ಇನ್ನೊಂದು ಹೆಣ್ಣು ನೋಡಿ ಮದುವೆ ಮಾಡುವುದೂ ಇತ್ತು. ಮಗುವನ್ನು ಹೆರದ ಹೆಂಗಸನ್ನು ಬಂಜೆ ಎಂದು ಹೀನಾಯವಾಗಿ ನಡೆಸಿಕೊಳ್ಳುವುದು ಸಾಮಾನ್ಯವಾಗಿತ್ತು. ಈಗಲೂ ಇದರಲ್ಲಿ ಬಹಳ ಬದಲಾವಣೆ ಆಗಿದೆ ಎನ್ನುವಂತಿಲ್ಲ. ಇಂತಹ ಸನ್ನಿವೇಶವನ್ನು ಎದುರಿಸಬೇಕಾಗಿ ಬಂದ ಹೆಂಗಸೊಬ್ಬಳು ಕೈಗೊಂಡ ಕಾರ್ಯ ತೀರ ಅಪರೂಪದ್ದು. ವಿದೇಶಗಳಲ್ಲಿ, ಹೆಚ್ಚಾಗಿ ಮುಂದುವರಿದ ವಿಷಯವನ್ನು ಪತ್ರಿಕೆಗಳಲ್ಲಿ ಓದಿರುವುದುಂಟು. ಗೀತಾ ನಾಗಭೂಷಣರ 'ಗರ್ಭ' (ಜ್ವಲಂತ) ಕತೆ ಆ ಬಗೆಯದು. ಮದುವೆಯಾಗಿ ಹತ್ತು ವರ್ಷಗಳಾದರೂ ಮಕ್ಕಳೇ ಆಗದೇ ಹೋದಾಗ ಗೌರವ್ವ ಅತ್ತೆಯ ಮೂದಲಿಕೆಗೆ ಗುರಿಯಾಗುತ್ತಾಳೆ. ಸವತಿ ತರಲು ಗಂಡ ಒಪ್ಪುವುದಿಲ್ಲ. ಸಹಾಯಕ್ಕಾಗಿ ತವರಿನಿಂದ ಕರೆತಂದ ಅನಾಥೆ ಚಿಕ್ಕಿಯನ್ನು ತನ್ನ ಗಂಡನಿಂದ ಗರ್ಭಧರಿಸಿ ಮಗುವನ್ನು ಹೆತ್ತುಕೊಡಲು ಒಪ್ಪಿಸುತ್ತಾಳೆ. ಚಿಕ್ಕಿಗೆ ಬಸಿರು ನಿಲ್ಲುತ್ತಲೇ ತಾನು ಬಸುರಿಯೆನ್ನುವುದಾಗಿ ಊರಿನಲ್ಲಿ ಸುದ್ದಿ ಹಬ್ಬಿಸಿದ ಗೌರವ್ವ ಚಿಕ್ಕಿ ಹಾಗೂ ಗೌಡರೊಂದಿಗೆ ಮುಂಬಯಿಗೆ ತೆರಳುತ್ತಾಳೆ. ಮಗುವಾದ ಮೇಲೆ ಅದರ ಆರೈಕೆಯನ್ನು ಸಂಪೂರ್ಣವಾಗಿ ಗೌರವ್ವನೇ ಮಾಡುತ್ತಾಳೆ. ಆಗ ಚಿಕ್ಕಿಗೆ 'ತನ್ನದೆಲ್ಲಾ ದರೋಡೆಯಾದಂತೆ, ಖಾಲಿಖಾಲಿಯಾದಂತೆ,ಎದೆ, ಹೊಟ್ಟೆ, ಗರ್ಭಗಳಲ್ಲಿ ಮಾತಿಗೆ ಮೀರಿದ ಸಂಕಟ...ಗೆಳತಿ ಗೌರವ್ವನಿಗಾಗಿ ತಾನು ಗರ್ಭದಾನ ಮಾಡಿದ್ದು,ಮಗುವನ್ನು ಹೆತ್ತು ಕೊಟ್ಟದ್ದು ತನಗೆ ಎಷ್ಟು ಭಾರಿ ಬೀಳುತ್ತದೆ' ಎಂಬ ಅರಿವಾಗುತ್ತದೆ. ಅದರಿಂದಾಗಿ ಸಿಕ್ಕ ಅವಕಾಶವನ್ನು ಬಳಸಿಕೊಂಡು ಮಗು ಸಮೇತವಾಗಿ ಮುಂಬಯಿ ನಿಲ್ದಾಣದಲ್ಯಾವುದೋ ರೈಲು ಹತ್ತಿ ಹೊರಟುಬಿಡುತ್ತಾಳೆ. ತನ್ನ ಸಮಸ್ಯೆಯ ಪರಿಹಾರಕ್ಕಾಗಿ ಇನ್ನೊಂದು ಹೆಣ್ಣಿನ ಭಾವನೆಯನ್ನು ಅರ್ಥಮಾಡಿಕೊಳ್ಳದ ಗೌರವ್ವನ ಕ್ರಿಯೆಗೆ ಸೋಲಾಗುತ್ತದೆ. ತಾಯ್ತನದಂತಹ ಭಾವನಾತ್ಮಕ ಸಂಬಂಧವನ್ನು ತೀರ ವ್ಯಾವಹಾರಿಕವಾಗಿ ಕಾಣುವ ಗೌರವ್ವ, ಗೆಳತಿಯ ಮಾತನ್ನು ನಡೆಸಿಕೊಡಲು ಮುಗ್ಧಳಾಗಿ ಒಪ್ಪುವ ಚಿಕ್ಕಿಯ ಅಮಾಯಕತೆಯನ್ನು ಬಳಸಿಕೊಳ್ಳುತ್ತಾಳೆ. ಆದರೆ ತಾಯ್ತನದ ನೋವು ನಲಿವುಗಳು ಮಗುವಿನ ಬಗೆಗಿನ ವಾತ್ಸಲ್ಯ ಪ್ರಾಣಿಪ್ರಪಂಚವನ್ನೂ ಆವರಿಸಿರುವಾಗ ಚಿಕ್ಕಿ ಅದರಿಂದ ಹೊರಬರಲು ಸಾಧ್ಯವಾಗದೆ ಹೋಗುವುದು ಸ್ವಾಭಾವಿಕ. ಹೆತ್ತ ತಾಯಿಯ ಎದುರಿನಲ್ಲಿಯೇ ಅವಳ ತಾಯ್ತನವನ್ನು ನಿರಾಕರಿಸಿ, ಬೇರೆಯವರು ತಾಯ್ತನ ಆರೋಪಿಸಿಕೊಳ್ಳುವುದನ್ನು ಸಹಿಸಲು ಚಿಕ್ಕಿಗೆ ಸಾಧ್ಯವಾಗುವುದಿಲ್ಲ. ಹಾಗಾಗಿ ಮಗುವನ್ನು ತನ್ನದಾಗಿ ಉಳಿಸಿಕೊಳ್ಳುವ ನಿರ್ಧಾರಕ್ಕೆ

ಬಂದು ಕ್ರಿಯಾಶೀಲಳಾಗುತ್ತಾಳೆ. ತಾಯಿ ಮಗುವಿನ ಸಂಬಂಧವು ಮೇಲು ನೋಟಕ್ಕೆ ಕಾಣುವುದಕ್ಕಿಂತ ಗಾಢವಾದುದು ಎಂದು ಕತೆ ಪ್ರತಿದಿಪಾದಿಸುತ್ತದೆ. ಹೆಣ್ಣೊಬ್ಬಳು ತನ್ನ ಬದುಕಿನ ಅಭದ್ರತೆಯನ್ನು ಗೆಲ್ಲಲು ಇನ್ನೊಂದು ಹೆಣ್ಣನ್ನು ಅಭದ್ರತೆಗೆ ತಳ್ಳಬೇಕಾಗಿ ಬಂದಂತಹ ಪರಿಸ್ಥಿತಿಯ ದುರಂತವನ್ನು ಕತೆ ಅನಾವರಣಗೊಳಿಸುತ್ತದೆ.

ತಾಯ್ತನವನ್ನು ಒಂದು ಮೌಲ್ಯವಾಗಿ ಪ್ರತಿಪಾದಿಸುವ ಸಮಾಜದಲ್ಲಿ ಅದರ ನಿರಾಕರಣೆ ಊಹೆಗೂ ನಿಲುಕದ್ದು. ತಾಯ್ತನದ ಆಕಾಂಕ್ಷೆ ಎಲ್ಲ ಮಹಿಳೆಯರಲ್ಲಿಯೂ ಇದ್ದೇ ಇರುತ್ತದೆ ಎಂದು ನಂಬುತ್ತಬರಲಾಗಿದೆ. ತಾಯಿಯಾಗುವುದೇ ಮಹಿಳೆಯ ಬದುಕಿನ ಪರಮೋದ್ದೇಶ ಎಂದೂ,ಅವಳು ತಾಯಿಯಾದಾಗಲೇ ಬದುಕು ಸಾರ್ಥಕವಾಗುತ್ತದೆ ಎಂದೂ ಬಿಂಬಿಸುತ್ತ ಬಂದ ಪರಿಸರದಲ್ಲಿ ಅದನ್ನು ನಿರಾಕರಿಸುವುದು ಬಹು ದೊಡ್ಡ ಪ್ರತಿಭಟನೆ. ಮಹಿಳೆಯ ಇನ್ನಿತರ ಸೃಜನಶೀಲತೆಗಾಗಲಿ, ಬೌದ್ಧಿಕ ಸಾಮರ್ಥ್ಯಕ್ಕಾಗಲಿ ಮಾನ್ಯತೆ ನೀಡದಿರುವುದನ್ನು ವಿರೋಧಿಸಿ ಅನುಪಮಾ ಅವರ 'ಆಳ'ದ ನಾಯಕಿ ಮಾಲಿನಿ ಹಾಗೂ ನೇಮಿಚಂದ್ರ ಅವರ 'ಹೊಸಹುಟ್ಟು', ಕತೆಯ ನಾಯಕಿ ಶಶಿ ತಾಯ್ತನದಾಚೆಗೆ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುತ್ತಾರೆ.ತನ್ನ ವೃತ್ತಿಪರತೆಯಲ್ಲಿ ಮಗ್ನಳಾಗಿದ್ದ ಮಾಲಿನಿಗೆ ತನಗೆ ಮಗುವಾಗುವ ಸಾಧ್ಯತೆಯಿಲ್ಲ ಎಂದಾಗ ಬೇಸರವೆನಿಸುವುದಿಲ್ಲ. ತಾನು ಬಯಸಿದ ಸಂಶೋಧನಾಕ್ಷೇತ್ರದಲ್ಲಿ ತೊಡಗಿಕೊಳ್ಳುತ್ತಾಳೆ. ಶಶಿ ತಾಯ್ತನದ ಬಗೆಗೆ ಎಂದೂ ಅಂತಹ ಆಸಕ್ತಿ ಇದ್ದವಳಲ್ಲ, ತನ್ನಲ್ಲಿ ದೋಷವಿದೆ ಎಂದು ಗೊತ್ತಾದಾಗ ಹಳಹಳಿಸುವ ಆಕೆ ನಿಧಾನವಾಗಿ ಆ ಪರಿಧಿಯಿಂದ ಹೊರಬಂದು ಕುಂಚಪ್ರಪಂಚದಲ್ಲಿ ಮಗ್ನಳಾಗುತ್ತಾಳೆ. ತಾಯ್ತನ ಅನಿವಾರ್ಯವಲ್ಲ ಎನ್ನುವ ತೀರ್ಮಾನಕ್ಕೆ ಬರಲು ಇವರಿಗೆ ಸಾಧ್ಯವಾಗುತ್ತದೆ. ವಿಜಯಾದಬ್ಬೆಯವರು ಗುರುತಿಸಿರುವಂತೆ 'ಅನುಪಮಾ ಅವರ ಕಾದಂಬರಿಯಲ್ಲಿ ಯಶಸ್ವಿಯಾಗಿ ಮಗುವನ್ನು ಹೆರುವ ಸಾಧ್ಯತೆಯ ಬಗ್ಗೆ ಶಂಕೆಯಿದ್ದಾಗ, ನೇಮಿಚಂದ್ರರಲ್ಲಿ ಮಗುವಿಗೆ ಜನ್ಮಕೊಡಲಾಗದ ದೈಹಿಕ ಸ್ಥಿತಿಯಿದ್ದಾಗ ಅವರು ಹೊಸಮೌಲ್ಯದತ್ತ ನಡೆದಿರುವುದು ಲೇಖಕಿಯರು ತಾಯ್ತನದ ವಿರುದ್ಧ ಜಿಗಿಯಲು ಪಡುತ್ತಿರುವ ತ್ರಾಸಿನ ಪ್ರತೀಕವೆಂದು ತೋರುತ್ತದೆ." (ಮಹಿಳೆ ಸಾಹಿತ್ಯ ಸಮಾಜ ಪುಂ೫-೧೬)ತಾಯ್ತನದ ಪೂರೈಕೆಗಾಗಿ ಬೇರಾವುದೇ ದಾರಿಯನ್ನು ಹುಡುಕಲು ಪ್ರಯತ್ನಿಸದೆ ನಿರಾಳವಾಗಿ ತಮ್ಮ ಆಸಕ್ತಿಯ ವಿಷಯದಲ್ಲಿ ತೊಡಗುವುದು ಸ್ಥಾಪಿತ ಮೌಲ್ಯಗಳ ಧಿಕ್ಕಾರವೇ ಆಗಿದೆ. ಇಬ್ಬರ ಬದುಕಿನ ಸನ್ನಿವೇಶಗಳು ಬೇರೆಯಾಗಿವೆ. ಮಾಲಿನಿಗೆ ಮಗುವನ್ನು ಹೆರಬೇಕೆಂಬ ಗಂಡನ ಒತ್ತಡವಿದ್ದಂತೆ ಶಶಿಗೆ ಇರುವುದಿಲ್ಲ. ಅವಳ ಗಂಡ ರಮೇಶ ಶಶಿಗೆ ಒತ್ತಾಸೆಯಾಗಿ ನಿಂತಿರುತ್ತಾನೆ. "ನನ್ನ ಮಟ್ಟಿಗೆ ನೀನೇ ಹೆತ್ತರೂ, ನಿನ್ನ ನವಮಾಸಗಳ ಹೊರೆಯಿಂದ, ಹೆರುವ ನೋವಿನಿಂದ ನಾ ಹೊರಗೇ ಉಳಿದಿರುತ್ತೇನೆ. ಆ ಅರ್ಥದಲ್ಲಿ ಪ್ರತಿ ಗಂಡಸೂ ಬಂಜೆಯೆ.....ತಾಯ್ತನ ಹೊರುವ ಹೆರುವ ಕ್ರಿಯೆಯಲ್ಲಿ ಅಡಗಿಲ್ಲ"(ಪು) ಎನ್ನುವ ರಮೇಶನ ಮಾತು ತಾಯ್ತನಕ್ಕೆ ಹೊಸ ವ್ಯಾಖ್ಯಾನವನ್ನು ನೀಡುತ್ತದಲ್ಲದೆ ರೂಢಿಗತ ಆಲೋಚನೆಯಿಂದ ಹೊರಬರಲು ಶಶಿಗೆ ಧೈರ್ಯವನ್ನೂ ತಂದು ಕೊಡುತ್ತದೆ.

ಪಿತೃಪ್ರಧಾನತೆಯು ಮಹಿಳೆಯ ಮೇಲೆ ಹೇರಿರುವ 'ತಾಯ್ತನ'ದ ಮೌಲ್ಯಕ್ಕೆ ವ್ಯಕ್ತವಾದ ಪ್ರತಿಕ್ರಿಯೆಯನ್ನು ಈ ರೀತಿ ವಿಶ್ಲೇಷಿಸಬಹುದು.

೧. ಸಂಪೂರ್ಣವಾಗಿ ಒಪ್ಪಿಕೊಳ್ಳುವಿಕೆ

೨. ಮಾತೃತ್ವದ ಹಕ್ಕು ಮಹಿಳೆಯದೆನ್ನುವ ಪ್ರತಿಪಾದನೆ

೩. ಮಾತೃತ್ವದ ಅನಿವಾರ್ಯತೆಯ ನಿರಾಕರಣೆ

ಪ್ರಧಾನ ಸಂಸ್ಕೃತಿಯು ಹೇರಿರುವ ಮೌಲ್ಯವನ್ನು ಒಪ್ಪಿಕೊಂಡಂತೆ ಕಾಣುವ ಈ ಮಹಿಳೆಯರು ಅದರ ಪೂರೈಕೆಗಾಗಿ ಅದೇ ಸಂಸ್ಕೃತಿಯು ಪ್ರತಿಪಾದಿಸುವ 'ಪಾತಿವ್ರತ್ಯ'ದ ಮೌಲ್ಯವನ್ನು ತಿರಸ್ಕರಿಸಿ ಮಗುವನ್ನು ಪಡೆಯುವುದರ ಮೂಲಕ ವ್ಯವಸ್ಥೆಗೆ ಪ್ರತಿಭಟನೆ ತೋರಿದ್ದಾರೆ. ಇದರಲ್ಲಿ ಕೆಂಪಮ್ಮನಂತಹ ಅವಿದ್ಯಾವಂತೆಯರೂ ಗೀತಾಳಂತ ಸುಶಿಕ್ಷಿತರೂ ಸೇರಿದ್ದಾರೆ. ವೈವಾಹಿಕ ಪರಿಧಿಯೊಳಗಿನ ತಾಯ್ತನವನ್ನಷ್ಟೇ ಮಾನ್ಯಮಾಡುವ ಪರಿಸರದಲ್ಲಿ ಅದರಾಚೆಗಿನ ಸಂಬಂಧದಿಂದ ಮಗುವನ್ನು ಪಡೆಯುವ ಅದಕ್ಕೆ ಅಧಿಕೃತ ಮುದ್ರೆ ಬೀಳುವಂತೆ ನೋಡಿಕೊಳ್ಳುವ ಮಹಿಳೆಯ ಕ್ರಿಯಾಶೀಲತೆ ಸಂಸ್ಕೃತಿಯ ವಕ್ತಾರರನ್ನು ಬೆಚ್ಚಿಸುವಂತಹದು. ತನ್ನ ಅಸ್ತಿತ್ವ ಉಳಿಸಿಕೊಳ್ಳಲು ಮಹಿಳೆ ಕಂಡುಕೊಂಡ ಇಂತಹ ಒಳದಾರಿಗಳು ಎಲ್ಲ ಕಾಲಕ್ಕೂ ಇರುವಂಥವೇ. ಅದನ್ನು ಇತ್ಯಾತ್ಮಕವಾಗಿ ಗುರುತಿಸುವ ಕೆಲಸವನ್ನು ಈ ರಚನೆಗಳು ಮಾಡಿವೆ.

ವಿವಾಹಕ್ಕೂ, ಮಾತೃತ್ವಕ್ಕೂ ಇರುವ ಸಂಬಂಧವನ್ನು ನಿರಾಕರಿಸಿ ತಾಯ್ತನದ ಆಯ್ಕೆ ಮಹಿಳೆಯದು ಎನ್ನುವುದನ್ನು ಪ್ರತಿಪಾದಿಸುವ ಕಥಾನಕಗಳ ನಾಯಕಿಯರು ವಿದ್ಯಾವಂತೆಯರು, ಆರ್ಥಿಕ ಸ್ವಾವಲಂಬಿಗಳು. ಆರ್ಥಿಕತೆಗೂ, ಅಧಿಕಾರಕ್ಕೂ ಇರುವ ಸಂಬಂಧವನ್ನು ಇಂತಹ ಕೃತಿಗಳು ತೆರೆದಿಡುತ್ತವೆ. ಅಧಿಕಾರದ ಶಕ್ತಿಕೇಂದ್ರವನ್ನು ನಿರಾಕರಿಸಿ ಅದರ 'ಅಹಮಿಕೆ'ಯನ್ನು ಒಡೆಯಬೇಕಾದರೆ, ಇನ್ನೊಂದು ಶಕ್ತಿಕೇಂದ್ರವನ್ನು ಸ್ಥಾಪಿಸಬೇಕಿದೆ ಎನ್ನುವುದನ್ನು ಇವು ಸಾಬೀತುಪಡಿಸುತ್ತವೆ. ಇರುವ ಗೆರೆಯನ್ನು ಅಳಿಸದೆ ಅದನ್ನು ಚಿಕ್ಕದು ಮಾಡಲು ಅದಕ್ಕಿಂತ ಉದ್ದವಾದ ಗೆರೆಯ ಮೇಲೆ ಹಕ್ಕನ್ನು ಸ್ಥಾಪಿಸುವುದರ ಮೂಲಕ ಪುರುಷ ಪ್ರಧಾನ ಸಂಸ್ಕೃತಿಯ ಸ್ವಾಮ್ಯವನ್ನು ಮುರಿಯುವುದು ಈ ರಚನೆಗಳ ಹಿಂದಿನ ಉದ್ದೇಶವಾಗಿದೆ.

ಮಹಿಳೆಯು ಬದುಕಲ್ಲಿ ಏನನ್ನು ಆಯ್ಕೆಮಾಡಿಕೊಳ್ಳಬೇಕು ಯಾವುದಕ್ಕೆ ಆದ್ಯತೆ ನೀಡಬೇಕು ಎನ್ನುವುದರ ನಿರ್ಣಯ ಆಕೆಯದೇ ಎನ್ನುವುದನ್ನು ಪ್ರತಿಷ್ಠಾಪಿಸ ಹೊರಡುವ ಈ ಬಗೆಯ ಕೃತಿಗಳು ಅವಳ ಬೌದ್ಧಿಕತೆಗೆ, ಇತರ ಸಾಧನೆಗಳಿಗೆ ಕೊಡುವ ಮಹತ್ವವನ್ನು ತಾಯ್ತನಕ್ಕೆ ಕೊಡುವುದಿಲ್ಲ. ಅದನ್ನು ಒಂದು ಮೌಲ್ಯವೆಂದು ಅವಳ ಮೇಲೆ ಒತ್ತಡ ತರುವ ಆವರಣ ನಿರ್ಮಾಣವಾದಲ್ಲಿ ಸಂಪೂರ್ಣವಾಗಿ ತಾಯ್ತನವನ್ನು ನಿರಾಕರಿಸಿ ತಮ್ಮದಾದ ಬದುಕಿನ ಮಾರ್ಗವನ್ನು ರೂಪಿಸಿಕೊಳ್ಳುವ ಅಧಿಕಾರವನ್ನು ಪಡೆಯುವ ಸಾಮರ್ಥ್ಯವನ್ನು ಹೊಂದಿರುವವರು ಈ ನಾಯಕಿಯರು.

ಸಮಾಜ ನಿರ್ದೇಶಿತ 'ಸಿದ್ಧಮಾದರಿ'ಗಳನ್ನು ಮೀರುವ 'ಹೊಸಮಾದರಿ'ಗಳನ್ನು ರೂಪಿಸುವ ದಿಕ್ಕಿನಲ್ಲಿ ಈ ಬರವಣಿಗೆಗಳು ಕ್ರಿಯಾಶೀಲವಾಗಿವೆ. ಮಹಿಳೆಯ 'ಇರುವಿಕೆ'ಯನ್ನು ಗುರುತಿಸುವ ಅವಳ 'ಅನನ್ಯತೆ'ಯನ್ನು ಪ್ರತಿಪಾದಿಸುವ ಮೂಲಕ ಸಮಾನತೆಯ ಸಮಾಜ ನಿರ್ಮಾಣದ ಕಡೆಗೆ ಇಡುವ ರಚನಾತ್ಮಕ ಹೆಜ್ಜೆ ಇದಾಗಿದೆ.

# ಮಹಿಳಾ ಸಾಹಿತ್ಯದಲ್ಲಿ ಯಾಜಮಾನ್ಯ ಮತ್ತು ಪ್ರತಿರೋಧದ ನೆಲೆಗಳು

ಎಂ. ಉಷಾ

ಧರ್ಮಗ್ರಂಥಗಳಲ್ಲಿ ಸೃಷ್ಟಿಯನ್ನು ಕುರಿತಂತೆ ಒಂದು ವಿವರಣೆ ಇದೆ. ಸೃಷ್ಟಿಕರ್ತ, ಅಂದರೆ ಗಂಡು, ತನ್ನ ಲೀಲಾ ವಿನೋದಕ್ಕಾಗಿ ಹೆಣ್ಣನ್ನು ಸೃಷ್ಟಿಸಿ ಅವಳೊಂದಿಗೆ ಕ್ರೀಡಿಸಿದ ಎಂದು. ಸ್ತ್ರೀವಾದಿ ಚಿಂತನೆಯ ಸಂದರ್ಭದಲ್ಲಿ ಕನ್ನಡದ ಮಹಿಳಾ ಸಾಹಿತ್ಯವನ್ನು ಕುರಿತಂತೆ ಮಹತ್ವದ ಚರ್ಚೆಯೊಂದನ್ನು ಈ ವಿವರಣೆಯು ಎತ್ತಬಹುದೆಂಬ ಕಾರಣಕ್ಕಾಗಿ ನಾನಿಲ್ಲಿ ಅದನ್ನು ಪ್ರಸ್ತಾಪಿಸಿದ್ದೇನೆ. ಬಹುಶಃ ಗ್ರಾಂಶಿಯ 'ಹೆಜಮೊನಿ' ಪರಿಕಲ್ಪನೆಯನ್ನು ಅರ್ಥೈಸಿಕೊಳ್ಳಲೂ ಇದಕ್ಕಿಂತ ಸೂಕ್ಷ್ಮವಾದ ಉಪಮೆಯೊಂದು ಸ್ತ್ರೀವಾದಿ ಚಿಂತನೆಗೆ ದೊರೆಯಲಾರದೇನೋ?

ಸ್ತ್ರೀವಾದಿ ನೆಲೆಯಿಂದ ಪುರುಷಪ್ರಧಾನ ಸಮಾಜವನ್ನು ಯಾಜಮಾನ್ಯ ಎಂದು ಗ್ರಹಿಸುವುದಾದರೆ ಆ ಸಮಾಜದ ಆಧುನಿಕ ಚಿಂತನಾ ಕ್ರಮವು, ಆಧುನಿಕ ಸಾಹಿತ್ಯ ಪ್ರಕ್ರಿಯೆಯು ಭಾರತದಲ್ಲಿ ತನ್ನ ಯಾಜಮಾನ್ಯವನ್ನು ಬಲಪಡಿಸಿಕೊಳ್ಳಲು ಹೊರಟಿದ್ದೇ ಮಹಿಳೆಯರ ಪರವಾದ ಅಪಾರ ಕಾಳಜಿಯನ್ನು ಪ್ರಕಟಿಸುವುದರೊಂದಿಗೆ. ಮಹಿಳೆಯ ಸೀಮಿತಾರ್ಥದ ಆಧುನೀಕರಣ, ಸ್ವಾತಂತ್ರ್ಯಗಳೇ ತನ್ನ ಶ್ರೇಯಸ್ಸಿನ ಆದರ್ಶಮಾರ್ಗವೆಂದು ಅರಿತ ಸುಧಾರಣಾವಾದಿಗಳು ಸ್ತ್ರೀಯ ಪರವಾದ ಸುಧಾರಣೆಗಳಿಗೆ ಕೈ ಹಾಕಿದ್ದರ ಫಲವಾಗಿಯೇ ಸ್ತ್ರೀವಾದಿ ಪ್ರತಿರೋಧಗಳು ಆಧುನಿಕ ಸಮಾಜದಲ್ಲಿ ಹುಟ್ಟಿಕೊಳ್ಳಲು ಕಾರಣವಾಯಿತು. ಈ ಅರ್ಥದಲ್ಲಿ ಕನ್ನಡ ಮಹಿಳಾ ಸಾಹಿತ್ಯದ ಆರಂಭಿಕ ಕಾಲದ ಮೈಲುಗಲ್ಲಾಗಿ ತಿರುಮಲಾಂಬ ಅವರನ್ನು ಗುರುತಿಸಿಕೊಳ್ಳುವುದಾದರೆ, ತಿರುಮಲಾಂಬ ಶಿಕ್ಷಣ ಪಡೆದರು, ಸಾಹಿತ್ಯ ರಚಿಸಿದರು ಹಾಗು ಆ ಮೂಲಕ ತಮ್ಮ ಸ್ತ್ರೀವಾದಿ ಪ್ರತಿರೋಧವನ್ನು ಒಡ್ಡಿದರು ಎಂಬ ಮಾತುಗಳು ಅದಕ್ಕೆ ಭಿನ್ನವಾದ ಇನ್ನೊಂದು ನೆಲೆಯ ಚರ್ಚೆಯನ್ನೇ ಆಹ್ವಾನಿಸುತ್ತವೆ.

ಎಪ್ಪತ್ತರ ದಶಕದ ಮಹಿಳಾ ಸಾಹಿತ್ಯವಾದರೂ ಸರಿಯೇ ಈ ಅರ್ಥದಲ್ಲಿ ಭಿನ್ನತೆಯನ್ನೇನು ಹೊಂದಿಲ್ಲ. ಅದು ಕೂಡ ಯಾಜಮಾನ್ಯದ ಪ್ರೋತ್ಸಾಹದೊಂದಿಗೆ ತನ್ನ ಪ್ರತಿರೋಧವನ್ನು ರೂಪಿಸಿಕೊಂಡಿದೆ. ಒಂದು ನೆಲೆಯಲ್ಲಿ ಪ್ರಧಾನ ಸಾಹಿತ್ಯ ಕ್ಷೇತ್ರವೇ ತನ್ನ ಸಾಹಿತ್ಯಿಕ ಧೋರಣೆಗಳಲ್ಲಿ ಹಲವಾರು ಬದಲಾವಣೆಗಳನ್ನು ಒಪ್ಪಿಕೊಳ್ಳುವ ಮೂಲಕ ಮಹಿಳಾ ಸಾಹಿತ್ಯದ ಬೆಂಬಲಕ್ಕೆ ನಿಂತು, ಸ್ತ್ರೀ ಸಂವೇದನೆ ಎಂಬುದು ಸಾಹಿತ್ಯಕ್ಷೇತ್ರದ

ಅವಿಭಾಜ್ಯ ಅಂಗವೆಂದು ಒಪ್ಪಿಕೊಳ್ಳುವ ಮೂಲಕವೇ ಸಾಹಿತ್ಯಿಕ ವಾತಾವರಣವನ್ನು ಸ್ತ್ರೀಪರವಾಗಿಸಿತು. ಇನ್ನೊಂದು ನೆಲೆಯಲ್ಲಿ ಆಧುನಿಕ ಚಿಂತನಾ ಕ್ರಮವು ಒತ್ತಾಯಿಸಿದ ಸ್ತ್ರೀ ಶಿಕ್ಷಣದ ಕಾರಣದಿಂದಾಗಿ, ಎರಡು-ಮೂರನೆ ತಲೆಮಾರಿಗೆ ವಿಸ್ತರಿಸಿದ ಶಿಕ್ಷಣದಿಂದಾಗಿ ಮಹಿಳೆಯರು ಪ್ರಧಾನ ಸಾಹಿತ್ಯದ ನಿರೀಕ್ಷೆಗಳನ್ನು ತಲುಪುವುದರತ್ತ ಹೆಜ್ಜೆ ಇಡತೊಡಗಿದರು. ಮುಖ್ಯವಾಗಿ ಸಾಹಿತ್ಯವನ್ನೊಂದು ಅಧ್ಯಯನ ಶಿಸ್ತಾಗಿ ಓದುವುದರೊಂದಿಗೆ ಸ್ತ್ರೀವಾದಿ ಚಿಂತನೆಗಳನ್ನು ಓದಿಕೊಳ್ಳುವ ಮೂಲಕ ತಮ್ಮ ಅಭಿವ್ಯಕ್ತಿ ವಿಧಾನವನ್ನು ವಿಶಿಷ್ಟವಾಗಿ ದುಡಿಸಿಕೊಳ್ಳಬೇಕೆಂಬ ಒಂದು ವರ್ಗವೇ ೭೦ರ ದಶಕದ ನಂತರ ಮುಂಚೂಣಿಗೆ ಬಂದಿತು. ಹೀಗೆ ೭೦ರ ದಶಕದಲ್ಲಿ ಕನ್ನಡ ಸಾಹಿತ್ಯವು ಸಾಹಿತ್ಯಿಕ ನಿಲುವಿನಲ್ಲಿ ಪಡೆದುಕೊಂಡ ಪಲ್ಲಟಗಳ ಹಿನ್ನೆಲೆಯಲ್ಲಿ ಗಮನಿಸುವುದಾದರೆ ಸ್ತ್ರೀವಾದಿ ಪ್ರತಿರೋಧವೆನ್ನುವುದು ಅದರ ಪ್ರಧಾನ ಆಶಯಗಳಲ್ಲಿ ಒಂದಾಯಿತು. ಪ್ರಧಾನ ಸಾಹಿತ್ಯದ ಸಮೃದ್ಧಿಗಾಗಿ, ಹೊಸತನಕ್ಕಾಗಿಯೇ ಸ್ತ್ರೀವಾದಿ ನಿಲುವುಗಳನ್ನು ಅತ್ಯಂತ ಉತ್ಸುಕತೆಯಿಂದ ಸ್ವೀಕರಿಸಲಾಯಿತು. ಪ್ರೋತ್ಸಾಹಿಸಲಾಯಿತು. ಹಾಗಾಗಿ ೭೦ರ ದಶಕದ ನಂತರದ ಸ್ತ್ರೀವಾದಿ ಪ್ರತಿರೋಧವೆನ್ನುವುದು ಪ್ರಧಾನ ಸಾಹಿತ್ಯದ/ಯಾಜಮಾನ್ಯದ ಬೆಂಬಲವನ್ನು ಗಳಿಸಿದ್ದೇ. ಅಂದರೆ ನಿಜ ಅರ್ಥದಲ್ಲಿ ಗ್ರಾಂಶಿಯ 'ಹೆಜಮೊನಿ' ಸ್ವರೂಪದ್ದೇ. ಆದ್ದರಿಂದಲೇ ಮಹಿಳಾ ಸಾಹಿತ್ಯದ ಸಂದರ್ಭದಲ್ಲಿ ಯಾಜಮಾನ್ಯ ಮತ್ತು ಪ್ರತಿರೋಧದ ಕುರಿತು ಮಾತನಾಡುವುದು ಅತ್ಯಂತ ಸಂಕೀರ್ಣವಾದ ಸಂಗತಿ. ಇಡಿಯಾಗಿ ಮಹಿಳಾ ಸಾಹಿತ್ಯದ ಮೇಲೆ ಅದನ್ನು ಪ್ರೋತ್ಸಾಹಿಸುವ ಹಾಗು ನಿರುತ್ಸಾಹಿಸುವ ನೆಲೆಗಳೆರಡರಿಂದಲೂ ತನ್ನ ಯಾಜಮಾನ್ಯವನ್ನು ಹೊಂದಿಯೇ ಇರುವ ಪ್ರಧಾನ ಕನ್ನಡ ಸಾಹಿತ್ಯದ ಯಾಜಮಾನಿಕೆಯನ್ನು ಗ್ರಹಿಸದೆ, ಅದಕ್ಕೆ ಪ್ರತಿಕ್ರಿಯಿಸದೆ, ಸರಳವಾಗಿ ಮಹಿಳಾ ಸಾಹಿತ್ಯದೊಳಗಿನ ಯಾಜಮಾನ್ಯ ಮತ್ತು ಪ್ರತಿರೋಧದ ಕುರಿತು ಮಾತನಾಡುವುದು ಅಸಹಜವಾದುದೂ ಆತ್ಮಘಾತಕವಾದುದೂ ಆಗಿಬಿಡುತ್ತದೆ.

ಸಾಹಿತ್ಯವನ್ನು ಯಾವುದೇ ಬಗೆಯ ಸಾಹಿತ್ಯೇತರ ಕಾಳಜಿಗಾಗಿ ಓದುವುದೆಂದರೆ-ಮಾರ್ಕ್ಸವಾದವಾಗಿರಲಿ, ಗ್ರಾಂಶಿಯ ಹೆಜಮೊನಿಯಾಗಿರಲಿ-ಅದು ಹಲವಾರು ಸಾಹಿತ್ಯಿಕ ಮಾನದಂಡಗಳನ್ನು ಒಡೆದುಕೊಂಡು ಓದುವ ಓದೇ ಆಗಿರುತ್ತದೆ. ಸಾಹಿತ್ಯವನ್ನು ಒಂದು ಸಾಮಾಜಿಕ ಪ್ರತಿಕ್ರಿಯೆಯ ಉಪ ಉತ್ಪತ್ತಿಯಾಗಿ, ಸಾಹಿತಿಯನ್ನು ಆ ಸಮಾಜ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿ ಭಾವಿಸಿ ಸಮಾಜ-ಸಾಹಿತ್ಯ-ಸಾಹಿತಿ ಈ ಮೂರರ ಕಾರ್ಯಕಾರಣ ಸಂಬಂಧದಡಿಯಲ್ಲಿ ಚರ್ಚಿಸುವುದಾಗಿರುತ್ತದೆ. ಶುದ್ಧ ಸಾಹಿತ್ಯಿಕ ಚರ್ಚೆಯ ಸ್ವರೂಪದಲ್ಲಿ ನಡೆಯುವ ಪ್ರತಿಭೆ, ಸ್ವೋಪಜ್ಞತೆ, ಶ್ರೇಷ್ಠತೆ ಸಾರ್ವಕಾಲಿಕತೆ ಇತ್ಯಾದಿ ಮೌಲಿಕ ಪರಿಕಲ್ಪನೆಗಳನ್ನೇ ಪುನರ್ ಮೌಲ್ಯೀಕರಣಕ್ಕೆ ಒಳಪಡಿಸುವುದಾಗಿತ್ತದೆ. ಅಂತೆಯೇ ಮಹಿಳಾ ಸಾಹಿತ್ಯದ ಕುರಿತ ಸ್ತ್ರೀವಾದಿ ಓದು ಕೂಡ ಪ್ರಧಾನ ಸಾಹಿತ್ಯ ವಿಮರ್ಶೆಯ ಸಾಹಿತ್ಯದ ತೀರ್ಮಾನಗಳನ್ನು ಪ್ರಶ್ನಿಸುತ್ತಲೇ ತನ್ನ ಓದನ್ನು ಆರಂಭಿಸುತ್ತದೆ. ಹಾಗಲ್ಲದೆ ಒಂದು ವೇಳೆ ಪ್ರಧಾನ ಸಾಹಿತ್ಯ ವಿಮರ್ಶೆಯ ಮೌಲಿಕ ಸಾಧನಗಳನ್ನೇ ಸ್ತ್ರೀವಾದಿ ಚಿಂತನೆಯು

ಸಾರಾಸಗಟಾಗಿ ಸ್ವೀಕರಿಸಿದ್ದಾದರೆ ಮಹಿಳಾ ಸಾಹಿತ್ಯದ ಚರ್ಚೆ ಎಲ್ಲವೂ 'ಜನಪ್ರಿಯ-ಗಂಭೀರ' ಈ ತರದ ವರ್ಗೀಕರಣದಾಚೆ ಏನನ್ನು ಹೇಳಲಾರದಂತಾಗುತ್ತವೆ.

'ಸ್ತ್ರೀವಾದ' ಎಂಬುದು ಒಂದು ಪಠ್ಯವಲ್ಲ. ಅದೊಂದು ಜೀವನ ಕ್ರಮ, ರಾಜಕೀಯ ಹುನ್ನಾರು, ಸಾಂಸ್ಕೃತಿಕ ಸಂಘರ್ಷ. ಹಾಗಾಗಿಯೇ ಸ್ತ್ರೀವಾದಿ ನೆಲೆಯಿಂದ ಪಠ್ಯವೊಂದನ್ನು ನಿರ್ವಚಿಸುವುದೆಂದರೆ ಅದು ಕೇವಲ ಪಠ್ಯ ಕೇಂದ್ರಿತ ನಿರ್ವಚನವಾಗಿವುದು ಸಾಧ್ಯವೇ ಇಲ್ಲ. ಅಂತಹ ನಿರ್ವಚನದಲ್ಲಿ ಅದಕ್ಕೆ ಆಸಕ್ತಿಯೂ ಇಲ್ಲ. ಆದ್ದರಿಂದಲೇ ಪ್ರಧಾನ ಸಾಹಿತ್ಯ ವಿಮರ್ಶೆಯು ಹೇಳುವ ಕಾಲಾತೀತ ಸಾಹಿತ್ಯಿಕ ಮೌಲ್ಯವನ್ನು ನಾವಿಂದು ಬಿಟ್ಟು ಕೊಡಬೇಕಾಗುತ್ತದೆ. ಇಡೀ ಸ್ತ್ರೀ ಸಮುದಾಯವು ಹೆಚ್ಚು ಕಡಿಮೆ ಒಂದೇಬಗೆಯ ಕಷ್ಟನಷ್ಟಗಳನ್ನು ಅನುಭವಿಸಿದೆ, ಅವುಗಳ ಪ್ರತಿರೋಧವು ಏಕತೆಯ ಹೋರಾಟವಾಗಿ ರೂಪುಗೊಳ್ಳಬೇಕಿದೆ ಎಂಬರ್ಥದ ನಿಲುವುಗಳನ್ನು ನಿರಾಕರಿಸಬೇಕಾಗುತ್ತದೆ. ಏಕೆಂದರೆ ಭಾರತದ ಸ್ತ್ರೀ ಸಮುದಾಯ ಲಿಂಗಭೇದದೊಂದಿಗೆ ವರ್ಣ ಹಾಗೂ ವರ್ಗಭೇದಗಳ ರುಚಿ-ಅರುಚಿಗಳನ್ನು ಕಂಡಿದೆ. ವ್ಯವಸ್ಥೆಯ ಒಂದು ಭಾಗವಾಗಿಯೇ ತನ್ನ ಕೊಡುಗೆಯನ್ನು ಆ ಭೇದ ರಾಜಕಾರಣಕ್ಕೆ ನೀಡಿದೆ. ಹಾಗಾಗಿ ಇಂದಿನ ಸ್ತ್ರೀವಾದಿ ನಿರ್ವಚನವು ಸೋದರಿಕೆಯ ಭ್ರಮೆಯನ್ನಾಗಲಿ,ಏಕತೆಯ ಮುಗ್ಧತೆಯನ್ನಾಗಲಿ ಉಳಿಸಿಕೊಳ್ಳುವುದು, ಬೆಳೆಸಿಕೊಳ್ಳುವುದು ಕಷ್ಟಸಾಧ್ಯವಾದುದಾಗಿದೆ. ಭಾರತೀಯ ಸ್ತ್ರೀ ಸಮುದಾಯದ ಈ ಬಹುಮುಖತೆಯ ವಾಸ್ತವವನ್ನು ಗ್ರಹಿಸುತ್ತಲೇ ಸ್ತ್ರೀವಾದಿ ಅಧ್ಯಯನಗಳು ಮೊನಚಾಗಬೇಕಿದೆ. ಆ ಕಾರಣಕ್ಕಾಗಿಯೇ ನಾನಿಲ್ಲಿ ಪ್ರಸ್ತಾಪಿಸಲಿರುವ ಲೇಖಕಿಯರ ಸಾಹಿತ್ಯ ಪ್ರಕ್ರಿಯೆಯನ್ನು ಪ್ರಭಾವಿಸಿದ, ಪ್ರೇರಿಸಿದ ಹಾಗೂ ಪ್ರೋತ್ಸಾಹಿಸಿದ ಸಾಮಾಜಿಕ, ಸಾಹಿತ್ಯಿಕ ಸಂದರ್ಭ ಗಳೆರಡನ್ನು ಒಳಗೊಂಡಂತೆ ಚರ್ಚಿಸುತ್ತೇನೆ. ಪ್ರಧಾನಧಾರೆಯ ಪ್ರೋತ್ಸಾಹ ಎನ್ನುವುದು ಇನ್ನೊಂದು ಅರ್ಥದಲ್ಲಿ ಯಜಮಾನ್ಯವೇ ಆಗಿರುತ್ತದೆ ಎಂಬುದನ್ನು ವಿವರಿಸಲು ಯತ್ನಿಸುವ ಸಂದರ್ಭದಲ್ಲಿ ಯಾಜಮಾನ್ಯಕ್ಕಿಂತ ಭಿನ್ನವಾದ ಪ್ರತಿರೋಧದ ನೆಲೆಯೊಂದು ಅಸ್ತಿತ್ವದಲ್ಲಿರಲು ಸಾಧ್ಯವೇ ಎಂಬ ಪ್ರಶ್ನೆಯನ್ನು ೭೦ರ ದಶಕದ ನಂತರದ ಮಹತ್ವದ ಲೇಖಕಿಯರೆಂದು ಗುರುತಿಸಲಾಗಿರುವ ವೀಣಾ,ಸಾರಾ, ವೈದೇಹಿ ಹಾಗೂ ಸುನಂದಾ ಅವರ ಸಾಹಿತ್ಯ ಪ್ರಕ್ರಿಯೆ ಹಾಗು ಅವುಗಳ ಕುರಿತ ಪ್ರತಿಕ್ರಿಯೆಗಳ ಹಿನ್ನೆಲೆಯಲ್ಲಿ ಎತ್ತಲು ಪ್ರಯತ್ನಿಸುತ್ತೇನೆ.

### ವೀಣಾ

ವೀಣಾ ಕನ್ನಡದ ಪ್ರಧಾನ ವಿಮರ್ಶೆಯ ಸಂದರ್ಭದಲ್ಲಿಯೇ ಸಾಕಷ್ಟು ಪ್ರತಿಕ್ರಿಯೆಗಳನ್ನು ಪಡೆದ ಲೇಖಕಿ. ಅವರ ಮೊದಲ ಕಥಾ ಸಂಕಲನಕ್ಕೆ ಮುನ್ನುಡಿ ಬರೆದ ಅಂದಿನ ಪ್ರಮುಖ ನವ್ಯ ಬರಹಗಾರರಾಗಿದ್ದ ಶಾಂತಿನಾಥ ದೇಸಾಯಿ ವೀಣಾ ಅವರ ಕೃತಿಯ ಮಹತ್ವವನ್ನು ಗುರುತಿಸಿಕೊಂಡಿರುವುದು ಹೀಗೆ. "ಪ್ರೊ ವೀಣಾ ಅವರಿಗೆ ಪ್ರಾಮುಖ್ಯವಾಗಿ ಸ್ತ್ರೀಮನವನ್ನು

ಚಿತ್ರಿಸುವುದರಲ್ಲಿ ಬಹಳ ಆಸಕ್ತಿ ಹಾಗೂ ಇಂಥ ಚಿತ್ರಣವನ್ನು ಅವರು ಸ್ವಲ್ಪ ದಿಟ್ಟತನದಿಂದ ಆದಷ್ಟು ಪ್ರಾಮಾಣಿಕವಾಗಿ, ಸೂಕ್ಷ್ಮವಾಗಿ ಮಾಡಲು ಯತ್ನಿಸುತ್ತಾರೆ ಎಂದು ಮುಂತಾದ್ದಾಗಿ, ಇಲ್ಲಿಯ ಕತೆಗಳನ್ನು ಓದಿದ ಯಾರಿಗೂ ಅನಿಸುವ ಮಾತುಗಳನ್ನು ಎತ್ತಿ ಹೇಳುವ ಅವಶ್ಯಕತೆ ಇದೆಯೆಂದು ನನಗನಿಸುವುದಿಲ್ಲ. ಈ ಕತೆಗಳಲ್ಲಿ ವಿಮರ್ಶಕನ ಕುತೂಹಲವನ್ನು ಕೆರಳಿಸುವ ವಿಷಯವೆಂದರೆ ಅವುಗಳಲ್ಲಿನ ಕಥನ ಕಲೆಯ ಸ್ವರೂಪ ಮತ್ತು ಅಭಿವ್ಯಕ್ತಿಯ ರೀತಿ''.

ಈ ಮಾತುಗಳಲ್ಲಿ ಗಮನಿಸ ಬೇಕಾದ ಸಂಗತಿ ಎರಡು ೧.ವಿಮರ್ಶಕರನ್ನು ಓದುಗ ವರ್ಗಕ್ಕಿಂತ ಭಿನ್ನವಾಗಿ ಗುರುತಿಸಿಕೊಂಡಿರುವುದು. ೨. ಸ್ತ್ರೀ ಮನವನ್ನು ಚಿತ್ರಿಸುವ ಇತ್ಯಾದಿ ವಿಚಾರಗಳು ಯಾರಾದರೂ ಗಮನಿಸಬಹುದಾದ ಸಂಗತಿ ಎಂದು ಭಾವಿಸುವುದು (ವಿಮರ್ಶಕರು ಅದರಾಚೆಗೆ ಇನ್ನೇನನ್ನೋ ಹುಡುಕಬೇಕೆಂಬ ನಂಬಿಕೆ). ಇವೆರಡೂ ೭೦ರ ದಶಕದ ಮೊದಲಿನ ವಿಮರ್ಶೆಗಿದ್ದ ಪ್ರಧಾನ ನಂಬಿಕೆಗಳೇ. ಆದರೆ ಆ ನಂತರದಲ್ಲಿ ಪ್ರವರ್ಧಮಾನಕ್ಕೆ ಬಂದ ಸ್ತ್ರೀವಾದಿ ಚಿಂತನೆಗಳಿಂದಾಗಿ ನಂತರದ ವಿಮರ್ಶೆಗಳು ಹೆಣ್ಣಿನ ಮನವನ್ನು ಚಿತ್ರಿಸಿದ್ದಾರೆ ಎಂದು ಯಾರಿಗೂ ಅನಿಸುವ ಮಾತುಗಳನ್ನೇ ಮಹತ್ವದ್ದಾಗಿ ಭಾವಿಸಿ ತಮ್ಮ ವಿಮರ್ಶೆಗಳನ್ನು ಬರೆಯಬೇಕಾಯಿತು. ಆದರೆ ಹಾಗೆ ಬರೆಯುವಾಗಲೂ ಕೂಡ ಅಮೂರರಂತಹ ವಿಮರ್ಶಕರು ಪ್ರಬುದ್ಧ ಸ್ತ್ರೀವಾದವಾಗಿಯೂ, ವಿಜಯಾದಬ್ಬೆಯಂತಹ ಸ್ತ್ರೀವಾದಿ ವಿಮರ್ಶಕಿಯು ಸ್ತ್ರೀವಾದವೇ ಅಲ್ಲವೆಂದೂ ಸಂಪೂರ್ಣ ಭಿನ್ನವಾಗಿ ಗ್ರಹಿಸಿ ವೀಣಾ ಅವರ ಸಾಹಿತ್ಯವನ್ನು ವಿಮರ್ಶಿಸತೊಡಗಿದ್ದು ನಿಜಕ್ಕೂ ಗಮನಿಸಬೇಕಾದ ಸಂಗತಿಯಾಗಿದೆ. ಆದರೆ ಅದಕ್ಕೆ ಪೂರ್ವದಲ್ಲಿ ವೀಣಾ ಅವರೇ ನವ್ಯ ಬರಹಗಾರರ ಬಗ್ಗೆ ಹೇಳಿರುವ ಈ ಕೆಳಗಿನ ಮಾತುಗಳನ್ನು ಗಮನಿಸಿ ಮುಂದುವರಿಯಬಹುದೆನಿಸುತ್ತದೆ.

"ಆದರೆ ಇವರು (ನವ್ಯರು) ಯಾರೂ ಮಹಿಳೆಯ ಅಸ್ತಿತ್ವದ ಬಗ್ಗೆ, ತಮ್ಮಂತೆಯೇ ಆಕೆಗೂ ಇರಬಹುದಾದ ಸಮಸ್ಯೆಗಳು-ತೊಳಲಾಟಗಳು-ದ್ವಂದ್ವಗಳ ಬಗ್ಗೆ, ಆಕೆಗೆ ಸಹಜವಾಗಿ ಇರುವ ಸ್ವಾತಂತ್ರ್ಯದ ಹಂಬಲದ ಬಗ್ಗೆ, ಏನೂ ಯೋಚಿಸಿಲ್ಲ. ಹಾಗೂ ಬರೆದಿಲ್ಲ.... ಪ್ರಭುತ್ವದ ಹಿಡಿತದಿಂದ ಬಿಡುಗಡೆ ಪಡೆಯಬೇಕೆನ್ನುವ ಆಶಯ ಗಂಡಸಿನಷ್ಟೇ ತೀವ್ರವಾಗಿ ಮಹಿಳೆಗೂ ಇರುತ್ತದೆ. ಹತ್ತಿಕ್ಕುವ ಶಕ್ತಿಗಳ ವಿರುದ್ಧ ಹೋರಾಡಲು ಆಕೆಯ ಜೀವವೂ ತಹತಹಿಸುತ್ತದೆ. ಹೋರಾಟವು ಸಾಧ್ಯವಾಗದಾಗ ಹಾಗು ವಿಫಲವಾದಾಗ ಬದುಕಿನ ಅರ್ಥಹೀನತೆಯ ತೀಕ್ಷ್ಣ ಪ್ರಜ್ಞೆಯಿಂದಾಗಿ ಆಕೆಯೂ ಆಂತರಿಕ ನೋವು ಅನುಭವಿಸುತ್ತಾಳೆ ಎಂಬ ಈ ಯಾವ ವಾಸ್ತವಿಕ ಅಂಶಗಳೂ ಬಹುಪಾಲು ನವ್ಯ ಲೇಖಕರ ಗಮನ ಸೆಳೆದಿಲ್ಲ''.

ವೀಣಾ ಹೇಳುವ ಈ ಮಾತುಗಳು ನಂತರದವಾದರೂ ವಾಸ್ತವವಾಗಿ ಅವರ ಸಾಹಿತ್ಯ ಆ ಕೊರತೆಯನ್ನು ಗಮನದಲ್ಲಿಟ್ಟುಕೊಂಡೇ ರಚಿಸಿದ್ದಾಗಿದೆ (ನವ್ಯ ವಿಮರ್ಶಕರಿಗೆ ಮಹತ್ವದ್ದೆನಿಸಿದ್ದು, ಆ ಕಾರಣಕ್ಕಾಗಿಯೇ). ಪರಿಣಾಮವಾಗಿ ಅವರ ಸಾಹಿತ್ಯ ಸ್ತ್ರೀ

ಕೇಂದ್ರಿತವಾಗಿ ರೂಪುಗೊಂಡರೂ ಸಹ ಅಂತಿಮ ತೀರ್ಮಾನಗಳಿಗೆ ನವ್ಯ ಪಂಥದ ಧೋರಣೆಯನ್ನೇ ಒಪ್ಪಿತು. ಅದರ ಅಂಗವಾಗಿ ಬಂದ ಸ್ತ್ರೀವಾದಿ ನಾಯಕಿಯ ವೈಫಲ್ಯವನ್ನು ಅಮೂರರು 'ಅವಳು ಬದುಕಿರುವ, ಬದುಕಲೇಬೇಕಾದ ಸಾಮಾಜಿಕ ಪರಿಸ್ಥಿತಿಯಿಂದ ಉಂಟಾಯಿತು' ಎಂದು ಗ್ರಹಿಸುವ ಮೂಲಕ ಅದನ್ನು ಪ್ರಬುದ್ಧ ಸ್ತ್ರೀವಾದವಾಗಿ ಗ್ರಹಿಸಿದರೆ, ವಿಜಯಾ ಅದು ಸ್ತ್ರೀವಾದವಲ್ಲ, ಅವರ ಅಣಕು ಎಂಬಂತೆ ಗ್ರಹಿಸಿದರು. ವಾಸ್ತವದಲ್ಲಿ ಯಾದರೋ ವ್ಯಕ್ತಿತ್ವದ ಈ ವೈಫಲ್ಯ ವಿಷಾದಗಳು ಪಾತ್ರವನ್ನು ಸಂಕೀರ್ಣಗೊಳಿಸುತ್ತ ಕೃತಿಯನ್ನು ಗಂಭೀರವಾಗಿಸುತ್ತದೆಂಬ ನವ್ಯ ಪಂಥದವರ ಚಿಂತನಾ ಕ್ರಮದಿಂದ ಪ್ರೇರಿತವಾದದ್ದಾಗಿದೆ.

ವೀಣಾ ಅವರ ಸಂದರ್ಭದಲ್ಲಿ ಅಂದು ಪ್ರಮುಖವಾಗಿದ್ದ ನವ್ಯ ಸಾಹಿತ್ಯದ ಈ ಪ್ರೇರಣೆಯಿಂದಾಗಿ ಅವರ ಸಾಹಿತ್ಯ ಸ್ತ್ರೀ ಸಂವೇದನೆಯ ನೆಲೆಯಿಂದ ನವ್ಯ ಸಾಹಿತ್ಯದ ಕೊರತೆಯನ್ನು ತುಂಬುವ ಮಹತ್ವಾಕಾಂಕ್ಷೆಯನ್ನು ಪ್ರಕಟಿಸುತ್ತಲೇ ತನ್ನೊಳಗೆ ಆ ಸಾಹಿತ್ಯದ ಕೊರತೆಯನ್ನು ತುಂಬಿಕೊಳ್ಳುವಂತಾಯಿತು. ನವ್ಯ ಲೇಖಕರು ಹೇಗೆ ಹೆಣ್ಣಿನ ಸಂವೇದನೆಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ ಕೃತಿ ರಚಿಸಿದರು ಎಂದು ಇವರು ಆರೋಪಿಸಿದರೋ ಹಾಗೆ ಇವರೂ ಪುರುಷ ಸಂವೇದನೆಯನ್ನು ಸಂಪೂರ್ಣ ನೆಗೆಟೀವ್ ಆಗಿ ಗ್ರಹಿಸಿದರು. ಯಾವುದೇ ಸೂಕ್ಷ್ಮತೆಯಿಲ್ಲದೆ ಗಂಡನ್ನು-ಗಂಡುನಾಯಿಯನ್ನು ಯಾಜಮಾನ್ಯವಾಗಿ ಗುರುತಿಸಿಕೊಳ್ಳುವ ಉಗ್ರ ಸ್ತ್ರೀವಾದಿ ನಾಯಕಿಯರನ್ನು ಚಿತ್ರಿಸಿದರು. ಪರೋಕ್ಷವಾಗಿ ಹೇಳುವುದಾದರೆ ಈ ನಾಯಕಿಯರ ಪ್ರಕಾರ ಕ್ರೌರ್ಯ, ನಯವಂಚನೆ, ಅಟ್ಟಹಾಸ, ಸ್ವಾರ್ಥವೇ ಗಂಡಸು. ಹೀಗೆ ಸ್ತ್ರೀವಾದವನ್ನು ವಿಪರೀತಾರ್ಥದಲ್ಲಿ ಪ್ರತಿಪಾದಿಸಿಕೊಂಡಿದ್ದರಿಂದಲೇ ಇಲ್ಲಿನ ಬಹುತೇಕ ಸ್ತ್ರೀವಾದಿ ಹೆಣ್ಣುಗಳು ಅಸಹನೆ, ಅಸಹಜತೆ, ಅತೃಪ್ತಿಗಳಲ್ಲಿ ಮಾತ್ರ ಅಂತಿಮ ಕಾಣುವಂತಾಯಿತು. ಎಲ್ಲೋ ಒಂದೆಡೆ ಸ್ತ್ರೀವಾದದ ದಾರಿಗಳು ವಿಪರೀತಾರ್ಥದ ದಾರಿಗಳೆಂದು, ಅವು ಕೇವಲ ದುರಂತ, ಭ್ರಮನಿರಸನಕ್ಕೆ ಮಾತ್ರ ಕರೆದೊಯ್ಯಬಲ್ಲವೆಂಬ ಗುಮಾನಿಯನ್ನು ಹುಟ್ಟು ಹಾಕಿತು. ಇದಕ್ಕೆಲ್ಲ ಕಾರಣ ವೀಣಾ ಅವರ ಸಾಹಿತ್ಯದ ಯಾಜಮಾನ್ಯದ ವಿರುದ್ಧದ ಸ್ತ್ರೀವಾದಿ ಪ್ರತಿರೋಧವೆನ್ನುವುದು ತನ್ನ ಸಮಕಾಲೀನ ಸಂದರ್ಭದ ಶ್ರೇಷ್ಠ ಸಾಹಿತ್ಯವಾಗಬೇಕೆಂಬ (ಪ್ರಧಾನ ಧಾರೆಯು ಪ್ರತಿಪಾದಿಸುವ) ಹಂಬಲದಲ್ಲಿ ಯಾಜಮಾನ್ಯದ ಸಾಹಿತ್ಯಿಕ ಮಾದರಿಯನ್ನೇ ತನ್ನ ಸಾಹಿತ್ಯಿಕ ಮಾದರಿಯಾಗಿ ಗುರುತಿಸಿಕೊಂಡದ್ದಾಗಿದೆ. ಸ್ತ್ರೀವಾದದಂತಹ ಸಾಂಸ್ಕೃತಿಕ ಸಂಘರ್ಷವನ್ನು ರಾಜಕೀಯ ಹುನ್ನಾರನ್ನು ವ್ಯಕ್ತಿಗಳ ನೆಲೆಗೆ ಅರ್ಥೈಸುವ ಮೂಲಕ ನವ್ಯ ಸಾಹಿತ್ಯದ ಆಲೋಚನಾ ಧಾಟಿಗೆ ಹೊಂದಿಸಲು ಪ್ರಯತ್ನಿಸಿದುದಾಗಿದೆ. ಹಾಗಾಗಿಯೇ ನವ್ಯ ಸಾಹಿತ್ಯವು ೭೦ರ ದಶಕದ ನಂತರ ಹೇಗೆ ಬಂಡಾಯದವರ ಪ್ರತಿರೋಧವನ್ನು ಎದುರಿಸಬೇಕಾಯಿತೋ ಹಾಗೇ ವೀಣಾ ಅವರ ಕೃತಿಗಳು ಸ್ತ್ರೀವಾದದ ಪ್ರತಿರೋಧವನ್ನು ಎದುರಿಸಬೇಕಾಯಿತು.

**ಸಾರಾ**

ಸಾರಾ ಅವರೇ ಹೇಳಿಕೊಂಡಿರುವಂತೆ ಅವರು ಉದಾರವಾದಿ ಇಸ್ಲಾಂ ಕುಟುಂಬದಿಂದ ಬಂದವರು. ತನ್ನೆಲ್ಲ ಸಾಂಪ್ರದಾಯಿಕತೆಯ ನಡುವೆಯೂ ಹೆಣ್ಣು ಮಗುವೊಂದು ಬೇಕು ಎಂದು ಹರಕೆ ಹೊರುವ, ಎಸ್. ಎಸ್. ಎಲ್. ಸಿ. ವರೆಗಾದರೂ ಶಿಕ್ಷಣ ಕೊಡಿಸಿಯೇ ತೀರುತ್ತೇನೆಂದು ಹಠ ಹಿಡಿಯುವ ಕುಟುಂಬದ ಒತ್ತಾಸೆಯಲ್ಲಿ ಬೆಳೆದವರು. ಹಾಗೆಯೇ ಕನ್ನಡದ ಪ್ರಸಿದ್ಧ ಪ್ರತಿಕೆಯೊಂದರ ಕಾಳಜಿಪೂರ್ವಕ ಕೋರಿಕೆಯ ಮೇರೆಗೆ ಸಾಹಿತ್ಯ ಕ್ಷೇತ್ರ ಪ್ರವೇಶಿಸಿದವರು. ಹಾಗಾಗಿ ಅವರ ಕೃತಿಗಳ ಸಂದರ್ಭದಲ್ಲಿ ಯಾಜಮಾನ್ಯವಾಗಿ ಕಂಡುಬರಬಹುದಾಗಿದ್ದ ಎರಡು ಮುಖ್ಯ ಘಟಕಗಳು-ಪುರುಷ ಪ್ರಧಾನ ಕುಟುಂಬ ವ್ಯವಸ್ಥೆ ಹಾಗೂ ಪುರುಷ ಪ್ರಧಾನ ಸಾಹಿತ್ಯ ಕ್ಷೇತ್ರ-ಅವರ ಪ್ರತಿರೋಧದ ಪ್ರಚೋದಕ ಸಂಗತಿಯಾಗಿಬಿಡುತ್ತವೆ. ಯಾಜಮಾನ್ಯದ ಈ ಪ್ರೋತ್ಸಾಹದಿಂದಾಗಿಯೇ ಅವರ ಕೃತಿಗಳಲ್ಲಿ ಕೌಟುಂಬಿಕ ಹಿಂಸೆ ಎನ್ನುವುದು ಪುರುಷನ ಪರಮಾಧಿಕಾರಕ್ಕಾಗಿ ಹುಟ್ಟಿಕೊಂಡದ್ದೆಂಬುದಕ್ಕಿಂತ ಆರ್ಥಿಕ ಸಂಕಷ್ಟಗಳಿಂದ, ಧಾರ್ಮಿಕ ಒತ್ತಾಯಗಳಿಂದ ಉಂಟಾದ ಹಿಂಸೆ ಎಂಬ ಅಂಶವಾಗಿಯೇ ಹೆಚ್ಚು ಪ್ರತಿಪಾದಿತವಾಗುತ್ತವೆ. ಕುಟುಂಬವೊಂದರಲ್ಲಿ ಧಾರ್ಮಿಕ ಹಿಡಿತ ಇಲ್ಲದಿದ್ದರೂ, ಆರ್ಥಿಕ ಸಂಕಷ್ಟಗಳು ಬಂದೊದಗದಿದ್ದರೂ ಅಲ್ಲಿ ಹೆಣ್ಣಿನ ದುರ್ಬಳಕೆ ನಡೆಯುತ್ತಿರಲಿಲ್ಲವೆ? ಎಂಬುದನ್ನು ಪ್ರಧಾನವಾಗಿಸಿಕೊಳ್ಳುವುದಿಲ್ಲ.

ಸಾರಾ ಅವರ ಸಾಹಿತ್ಯದ ಸಂದರ್ಭದಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಮೊತ್ತ ಮೊದಲ ಬಾರಿಗೆ ಮುಸ್ಲಿಮ ಮಹಿಳೆಯೊಬ್ಬಳಿಗೆ ದೊರೆತ 'ನಿಮ್ಮ ಸಮಾಜವನ್ನು ಕುರಿತು ಬರೆಯಿರಿ' ಎಂಬ ಆಹ್ವಾನ. ಆಧುನಿಕ ಸಾಹಿತ್ಯ ಆರಂಭಗೊಂಡಂದಿನಿಂದಲೂ ಇಸ್ಲಾಂ ಧರ್ಮೀಯರು ಕನ್ನಡ ಸಾಹಿತ್ಯದಲ್ಲಿ ಮಾನ್ಯತೆ ಪಡೆಯಬೇಕಾದರೆ ಅವರು ಪ್ರಧಾನ ಧಾರೆಯೊಳಗೆ ಇನ್ನಿಲ್ಲದಂತೆ ಕರಗಿ ಹೋಗಬೇಕಾದ ಸಂಗತಿಗಳು ಮಾತ್ರ ಪ್ರಧಾನವಾಗಿದ್ದವು. ಅದರಂತೆಯೇ ಕೆಲವರು ಬರೆದು ಸೈ ಎನಿಸಿಕೊಂಡರೂ ಸಹ. ಅದರೆ ೭೦ರ ದಶಕದ ನಂತರ ಕನ್ನಡ ಸಾಹಿತ್ಯಕ್ಕಿದ್ದ ಈ ಕೇಂದ್ರಿಕೃತ ಏಕತೆ ಸಡಿಲಗೊಂಡು ಹಲವು ಸಾಂಸ್ಕೃತಿಕ, ಪ್ರಾದೇಶಿಕ ಅಭಿವ್ಯಕ್ತಿಗಳು ತಮ್ಮ ಪ್ರತ್ಯೇಕತೆಯನ್ನು ಹೊಂದಿಯೇ ಕನ್ನಡದ ದಿಗಂತವನ್ನು ವಿಸ್ತರಿಸಬೇಕಿದೆ ಎಂಬ ನಂಬಿಕೆ ಬಲಗೊಂಡಿತು. ಅದರ ಪರಿಣಾಮವಾಗಿಯೇ ಸಾರಾ ಮುಸ್ಲಿಂ ಸಂವೇದನೆಯ ಲೇಖಕಿಯಾಗಿ ತಮ್ಮ ಪ್ರವೇಶ ಪಡೆದುಕೊಂಡರು. ಆದರೆ ಹಾಗೆ ಪಡೆದ ಪ್ರವೇಶವು 'ನಿಮ್ಮ ಜನಾಂಗದ ಬಗ್ಗೆ ಬರೆದು ಕೊಡಿ' ಎಂಬ ನಿರ್ದೇಶನವನ್ನು ಒಳಗಿಂದೊಳಗೆ ಪೂರೈಸಬೇಕಾಗಿ ಬಂತು.

ತಮಗೆ ಬಂದ ಕೋರಿಕೆಯನ್ನು ಅತ್ಯಂತ ಹೆಮ್ಮೆಯಿಂದ, ಧನ್ಯತೆಯಿಂದ ಮನದಟ್ಟು ಮಾಡಿಕೊಂಡೇ ಸಾರಾ, ತಮ್ಮ ಸಮಾಜವನ್ನು ಕುರಿತು (ಅನ್ಯರಿಗೆ ಬೇಕಾಗುವ ರೀತಿಯಲ್ಲಿ) ಕಾದಂಬರಿಯೊಂದನ್ನು ಬರೆದರು. 'ನಿಮ್ಮ ಜನಾಂಗ' ಎಂಬುದನ್ನು ಅತ್ಯಂತ ಮುಗ್ಧವಾಗಿ

ಪರಿಭಾವಿಸಿ ಇಡೀ ಇಸ್ಲಾಂ ಸಮುದಾಯವನ್ನು ಭಾರತದ ಎಲ್ಲ ಕೊಂಡಿಗಳಿಂದ ಕಳಚಿ ಕನ್ನಡ ಓದುಗರಿಗಾಗಿ ನಿರೂಪಿಸಿದರು. ಆದರೆ ಆ ಪುಸ್ತಕದೊಂದಿಗೇ ಅಚ್ಚಾದ ಅವರ ಆತ್ಮಚರಿತ್ರೆಯ ತುಣಕುಗಳನ್ನು ನೋಡಿದರೆ ಸಾಕು ಸಾರಾ ಅವರ ಚಂದ್ರಗಿರಿ ತೀರ ಕಳೆದುಕೊಂಡಿರುವುದೇನು ಎಂಬುದು ಅರಿವಾಗುತ್ತದೆ (ಕದನ ವಿರಾಮ ಕೃತಿ ರಚನೆಯಲ್ಲಿ ಸಾರಾ ಇದಕ್ಕೆ ಭಿನ್ನವಾದ ಪ್ರತ್ಯೇಕತೆ ಪ್ರಕಟಿಸುತ್ತಾರೆ).

ಸಾರಾ ಅತ್ಯಂತ ಏಕಾಂತ ಸ್ಥಿತಿಯಲ್ಲಿ ಇಸ್ಲಾಂ ಸಮಾಜವನ್ನಿಟ್ಟು ಬರೆದರೂ ನಂತರ ನಮ್ಮ ವಿಮರ್ಶಕರು ಅದರ ಬಗ್ಗೆ ಹೆಚ್ಚಿನ ಚರ್ಚೆ ಬೆಳೆಸದೆ ಅತ್ಯಂತ ಉತ್ಸಾಹದಿಂದ ಸ್ವೀಕರಿಸಿದರು. ಸಾಹಿತ್ಯಿಕ ದೃಷ್ಟಿಯಿಂದ ಅದುವರೆಗೂ ನಿರ್ಲಕ್ಷಿಸಲಾಗಿದ್ದ ಜನಪ್ರಿಯ ಕಾದಂಬರಿಗಳ ಮಾದರಿಯಲ್ಲಿಯೇ ಅದಿದ್ದರೂ ಅದರ ಇಸ್ಲಾಂ ಸಂವೇದನೆಯ ಕಾರಣಕ್ಕಾಗಿಯೇ ಮಹತ್ವದ್ದೆಂದು ವಿಮರ್ಶಿಸಿದರು. ಈ ವಿಚಾರವನ್ನು ಸಾರಾ ಅವರ 'ಕದನ ವಿರಾಮ' ಕೃತಿಯ ಸಂದರ್ಭದಲ್ಲಿ ಇನ್ನೂ ಸ್ಪಷ್ಟಪಡಿಸಬಹುದಾಗಿದೆ. ಕದನ ವಿರಾಮ ನಮ್ಮ ಬಹುತೇಕ ಲೇಖಕಿಯರ ಬರವಣಿಗೆಯ ರೀತಿಯಲ್ಲಿಯೇ ಇದೆ (ವಸ್ತುವಿನ ದೃಷ್ಟಿಯಿಂದ ಕೂಡ). ಹಾಗೆಯೇ ಕದನವಿರಾಮ ಮತ್ತು ಚಂದ್ರಗಿರಿ ತೀರದಲ್ಲಿ ಕಾದಂಬರಿಗಳೆರಡೂ ಧರ್ಮದ ದೃಷ್ಟಿಯಿಂದ ಇಸ್ಲಾಂ ಹಾಗು ಹಿಂದೂ ಸಮಾಜ ಎಂಬ ಪ್ರತ್ಯೇಕತೆ ಹೊಂದಿದೆಯೇ ಹೊರತು ಕಥನ ಕ್ರಮದಲ್ಲಿ ವ್ಯತ್ಯಾಸವನ್ನೇನೂ ಹೊಂದಿಲ್ಲ. ಹಾಗಿರುವಾಗ ಕನ್ನಡ ವಿಮರ್ಶೆಯು ಒಂದನ್ನು ಮಹತ್ವದ ಕೃತಿಯೆಂದು ಗ್ರಹಿಸುವುದು, ಇನ್ನೊಂದನ್ನು ಗಮನಿಸದಿರುವುದು ಹೇಗೆ ಸಾಧ್ಯ? ಅಂತೆಯೇ ಸಾರಾ ಅವರ ಸಾಹಿತ್ಯ ಕನ್ನಡಕ್ಕೆ ಮಹತ್ವದ್ದಾಗಿ ಕಂಡುಬರುವುದು ಅವರು ಇಸ್ಲಾಂ ಧರ್ಮಕ್ಕೆ ಪ್ರತಿರೋಧವನ್ನು ಒಡ್ಡುವ ಕಾರಣಕ್ಕಾಗಿ ಮಾತ್ರವೇ. ಕೇವಲ ಒಂದು ಧರ್ಮದ ಬಗೆಗಿನ ಟೀಕೆ ಟಿಪ್ಪಣಿಗಳ ಕಾರಣಕ್ಕಾಗಿಯೇ ಬೆಂಬಲಗಳಿಸುವುದೆಂದರೆ ಅದು ಅಲ್ಪಸಂಖ್ಯಾತ ಇಸ್ಲಾಂ ಸಮಾಜದ ವಿರುದ್ಧದ ಯಾಜಮಾನ್ಯದ ಸಂಚೇ ಆಗಿರಬಾರದೇಕೆ, ಪ್ರಧಾನ ಧಾರೆಯ ಕನ್ನಡ ಸಾಹಿತ್ಯದ ಮೂಲಕ ಇಸ್ಲಾಂ ಸಮಾಜದ ಮೇಲೆ ಯಾಜಮಾನ್ಯ ಸ್ಥಾಪಿಸುವ ದಾರಿ ಇದಿರಬಾರದೇಕೆ, ಇತ್ಯಾದಿ ಪ್ರಶ್ನೆಗಳಿಗೆಲ್ಲ ಇದು ದಾರಿ ಮಾಡಿಕೊಡುತ್ತದೆ ಸಹ. (ಹಾಗೆ ನೋಡಿದರೆ ಈ ಬಗೆಯ ಅನುಮಾನ ಇಸ್ಲಾಂ ಧರ್ಮದೊಳಗೆ ಮಾತ್ರ ಹುಟ್ಟಿಕೊಂಡದ್ದಲ್ಲ. ಬದಲಿಗೆ ಹೊಸ ಹಿಂದೂ ಕಾಯಿದೆಗಾಗಿ ಹೋರಾಡುತ್ತಿದ್ದ ಸಂದರ್ಭದಲ್ಲಿ ಹಿಂದೂ ಸ್ತ್ರೀಯರ ಪರವಾದ ಹಕ್ಕೊತ್ತಾಯಗಳೂ ಸಹ ಕ್ರಿಶ್ಚಿಯನ್ ಧರ್ಮದಿಂದ ಪ್ರೇರಿತವಾದದ್ದೆಂಬ ಅನುಮಾನವನ್ನು ಹಿಂದೂ ಸಮಾಜವೂ ಪ್ರಕಟಿಸಿದ್ದಿದೆ). ಹಾಗಾಗಿ ಸಾರಾ ಅವರ ಮುಸ್ಲಿಂ ಸ್ತ್ರೀ ಸಂವೇದನೆ ಎಂಬುದು ಒಂದೆಡೆ ತನ್ನ ಸಮಾಜದ ಯಾಜಮಾನ್ಯವನ್ನು ಪ್ರತಿರೋಧಿಸುವ ಸ್ವರೂಪವನ್ನು ಪ್ರಕಟಿಸುತ್ತಲೇ, ಇನ್ನೊಂದೆಡೆ ಮತ್ತೊಂದು ಯಾಜಮಾನ್ಯದ ಪ್ರೇರಣೆಯನ್ನು ಒಳಗೊಂಡಿರುವ ಸಾಧ್ಯತೆಯನ್ನು ಸೂಚಿಸುತ್ತದೆ.

**ಸುನಂದಾ**

ತೌರಮನೆ ಹೆಣ್ಣಿಗೆ
ಶಿವನ ವರದಾನ
ಅದು ಗಂಡಿಗಿಲ್ಲ
ಹೆಣ್ಣಿಮಾನ
ಅವಳ ವಾತ್ಸಲ್ಯದ ಅಭಿಮಾನ

ಅನಿವಾಸಿ ಭಾರತೀಯ ಲೇಖಕಿಯಾಗಿರುವ ಸುನಂದಾ ಅವರ ಕಜ್ಜಾಯ ಕೃತಿಯ ಸಮರ್ಪಣೆ ಹೀಗಿದೆ. ಸುನಂದಾ ಅವರಿಗೆ ಭಾರತೀಯ ಜಗತ್ತು ತೌರು. ಅದು ಶಿವನ ವರದಾನದಂತೆ. ಆದ್ದರಿಂದಲೇ ಇವರ ಸಾಹಿತ್ಯ ಭಾರತ-ಭಾರತೀಯತೆ ಎನ್ನುವುದರ ಅಭಿಮಾನವನ್ನು ಧಾರವಾಡದ ಮಣ್ಣಿನ ವಾಸನೆಯಾಗಿ ಜಿನುಗಿಸುತ್ತಲೇ ರೂಪುಗೊಳ್ಳುತ್ತದೆ. ತನ್ನ ಅನಿವಾಸೀಯತೆಯ ಕಾರಣಕ್ಕಾಗಿ ಭಾರತೀಯ ಕುಟುಂಬವನ್ನುಸುಂದರ ಸುಸಂಸ್ಕೃತ ಪರಿಪೂರ್ಣ ಸಾಮಾಜಿಕ ಘಟಕವಾಗಿ ಪರಿಭಾವಿಸುತ್ತದೆ. ಅಂತೆಯೇ ಸುನಂದಾ ಅವರ ಭಾರತದಾಚೆಗಿನ ಲೋಕಜ್ಞಾನ ಹಾಗು ಭಾರತೀಯ ಪ್ರೇಮಗಳು 'ಝುವಾದಿ' ಕಾದಂಬರಿಯಲ್ಲಿ ಯಾವ ರೀತಿಯಲ್ಲಿ ಸ್ತ್ರೀವಾದಿ ಪ್ರತಿರೋಧವನ್ನು ರೂಪಿಸಿಕೊಳ್ಳುತ್ತವೆ ಎಂಬುದು ಕುತೂಹಲದ ಸಂಗತಿಯಾಗಿದೆ.

ಸುನಂದಾ ಅವರೆನ್ನುವಂತೆ ಝುವಾದಿ ಎಂದರೆ ಕಾಣಿಕೆ. ಜಗತ್ತಿಗೆ ಪ್ರಕೃತಿ ನೀಡಿದ ಕಾಣಿಕೆ ಹೆಣ್ಣು ಎಂಬುದನ್ನು ನಿರೂಪಿಸ ಹೊರಡುವ ಕಾದಂಬರಿ ಅದು. ಆದರೆ ಇದಿಷ್ಟೇ ಅದರ ಉದ್ದೇಶವಾಗಿದ್ದರೆ ಇದರಲ್ಲಿ ಹೊಸತೇನೂ ಇಲ್ಲ. ಶತಶತಮಾನಗಳಿಂದಲೂ ಪುರುಷ ಪ್ರಧಾನ ಭಾರತೀಯ ಸಮಾಜ ಇದನ್ನು ಎತ್ತಿಹಿಡಿಯುತ್ತಲೇ ತನ್ನ ಯಾಜಮಾನ್ಯವನ್ನು ಬಲಪಡಿಸಿಕೊಂಡಿದೆ. ಸೃಷ್ಟಿಯ ಕಾಣಿಕೆಯಾದ ಈ ಹೆಣ್ಣನ್ನು ಜತನದಿಂದ ಕಾಪಾಡುವ, ತನ್ನದಾಗಿಸಿಕೊಳ್ಳುವ ಮಹತ್ವಾಕಾಂಕ್ಷೆಯನ್ನು ಹೊಂದಿಯೇ ಕುಟುಂಬ ವ್ಯವಸ್ಥೆಯನ್ನು ರೂಪಿಸಲಾಯಿತು. ಆದರೆ ಸುನಂದಾ ಇಂತಹ ಯಾಜಮಾನ್ಯದ ಆಯುಧವನ್ನೇ ಪುನಃ ನಿರ್ವಚಿಸಿಕೊಳ್ಳುವ ಮೂಲಕ ಪ್ರತಿರೋಧವನ್ನೊಡ್ಡಬಹುದಾದ ಸಾಧ್ಯತೆಯತ್ತ ಗಮನಹರಿಸುತ್ತಾರೆ.ಹೆಣ್ಣಿನ ಮಹತ್ವವನ್ನು, ಅನಿವಾರ್ಯತೆಯನ್ನು ಹೆಚ್ಚಿಸುವುದಕ್ಕೆ ಕುಟುಂಬ ವ್ಯವಸ್ಥೆಯೇ ಸರಿಯಾದ ಸಾಧನ. ಅಂತಹ ಕುಟುಂಬವನ್ನು ಕಳೆದುಕೊಳ್ಳುವ ಮೂಲಕ ಶಂಕರರಾಯರು ತಪ್ತರಾಗಿ ೨೦ ವರ್ಷಗಳು ಅಲೆಯುತ್ತಾರೆ. ಕೊನೆಗೊಮ್ಮೆ ನಿಸರ್ಗದ ನಡುವೆ ಭಿನ್ನವಾಗುವ ಬಗೆ ಈ ರೀತಿಯದು.

ಇದುವರೆಗಿನ ಪಶ್ಚಿಮ ಪ್ರೇರಿತವಾದ ಸ್ತ್ರೀವಾದಿ ಚಿಂತನಾ ಕ್ರಮ ಕುಟುಂಬ ವ್ಯವಸ್ಥೆ ಎಂಬುದು ಕೃತಕವಾದುದು, ಮಾನವನಿರ್ಮಿತವಾದುದು ಆಗಿರುವುದರೊಂದಿಗೆ ಅದು ಪುರುಷ ಪ್ರಧಾನವಾದುದು ಎಂಬುದಾಗಿ ಗ್ರಹಿಸಿ ಚರ್ಚಿಸುತ್ತಿತ್ತು. ಆದರೆ ಸುನಂದಾ ಇದಕ್ಕೆ ವ್ಯತಿರಿಕ್ತವಾದ ರೀತಿಯಲ್ಲಿ ಸಿಂಬಾಕಿಂಗನ ನೆಪದಲ್ಲಿ ಜಗತ್ತಿನ ಸಕಲ ಜೀವರಾಶಿಗಳೆಲ್ಲಕ್ಕೂ

ಈ ಬಗೆಯ ಸಂಬಂಧಗಳಿವೆ ಎಂದು ತರ್ಕಿಸುತ್ತಾರೆ. ಹಾಗು ಅದು ಹೆಚ್ಚು ಕಡಿಮೆ ಭಾರತೀಯ ಪಿತೃಪ್ರಧಾನ ಸ್ವರೂಪವನ್ನು ಹೊಂದಿದ್ದಾಗಿದೆ ಎಂದು ಕಲ್ಪಿಸುತ್ತಾರೆ. ಹಾಗೆಯೇ ಹೆಣ್ಣು ತನ್ನ ತಾಯ್ತನದ ಕಾರಣಕ್ಕಾಗಿಯೇ ಕುಟುಂಬದಂತಹ ಸಣ್ಣ ಘಟಕವೊಂದರ ಸದಸ್ಯಳಾಗಿಯೇ ತನ್ನನ್ನು ಈ ಸಮಾಜದಲ್ಲಿ ಅನಿವಾರ್ಯವಾಗಿ ಪ್ರತಿನಿಧಿಸಿಕೊಳ್ಳಲು ಸಾಧ್ಯವಿದೆ. ಹಾಗು ಗಂಡು ಸೃಷ್ಟಿಸಿರುವ ಈ ವ್ಯವಸ್ಥೆಯನ್ನು ಪೋಷಿಸುವ ಮೂಲಕವೇ ಆಕೆ ತನ್ನ ಪ್ರತಿರೋಧವನ್ನು ಒಡ್ಡಬಲ್ಲಳು ಎಂದು ಭಾವಿಸುತ್ತಾರೆ. ಆದ್ದರಿಂದಲೇ ಕುಟುಂಬದಿಂದ ದೂರವಿದ್ದು ಜೀವನದ 'ಅರ್ಥ'ಕ್ಕಾಗಿ ಎಲ್ಲೆಲ್ಲೋ ಅಲೆದಾಡಿದ ರಾಯರು ತಮ್ಮ ಅಪಾರವಾದ ಹಣದಿಂದ ತನ್ನ ಮಕ್ಕಳಿಗಾಗಿ ಒಂದಿಷ್ಟು, ಉಡುಗೊರೆಗಳನ್ನು ಕೊಡುವುದು ಬಿಟ್ಟರೆ ಇನ್ನೇನೂ ಮಾಡಲಾರದವರಾಗುತ್ತಾರೆ. ಅದೇ ಹೊತ್ತಿಗೆ ಅವರ ಹೆಂಡತಿ ವಿದ್ಯೆ, ಹಣ ಏನೊಂದೂ ಇಲ್ಲದೆಯೂ ತನ್ನ ಮಕ್ಕಳಿಗೆ ಇಡೀ ಬದುಕನ್ನೇ ನೀಡುತ್ತಾಳೆ. ಅಂತೆಯೇ ಕಾದಂಬರಿಯ ಉದ್ದಕ್ಕೂ ಪುಟ ಪುಟಗಳಲ್ಲೂ ಓಡಾಡಿದ, ಆರ್ಭಟಿಸಿದ, ಚಿಂತಿಸಿದ, ಉದ್ವಿಗ್ನಗೊಂಡ ಶಂಕರಾಯರ ಎದುರಿಗೆ ಕಾದಂಬರಿಯುದ್ದಕ್ಕೂ ತಾನೆಲ್ಲಿದ್ದೇನೆ, ಏನು ಮಾಡುತ್ತಿದ್ದೇನೆ, ಏನನ್ನು ಯೋಚಿಸುತ್ತಿದ್ದೇನೆ ಎಂಬುದನ್ನೆಲ್ಲೂ ಕಾಣಿಸದ ಅವರ ಹೆಂಡತಿ ತಮ್ಮ ಮೌನವನ್ನೇ ಪ್ರತಿರೋಧವಾಗಿ ಒಡ್ಡುತ್ತಾರೆ. ಇದುವರೆಗೂ ಶಂಕರರಾಯರಂತಹ ಯಜಮಾನರು,ಅವರ ಯಜಮಾನ್ಯತೆ, ನಿರ್ವಚಿಸುತ್ತ ಬಂದ 'ಕುಟುಂಬ ಇರುವುದು ಹೆಣ್ಣಿನ ರಕ್ಷಣೆಗಾಗಿ' ಎಂಬ ಮಾತನ್ನು 'ಕುಟುಂಬ ಉಳಿದಿರುವುದು ಹೆಣ್ಣಿನ ರಕ್ಷಣೆಯಲ್ಲಿ' ಎಂಬುದಾಗಿ ಪರಿವರ್ತಿಸುತ್ತಾರೆ. ಹಾಗೆಯೇ ಗಂಡು ಒಬ್ಬ ದೊಡ್ಡ ಜ್ಞಾನಿಯಾಗಲಿ, ವಿಜ್ಞಾನಿಯಾಗಲಿ ಆತನ ನಿಜವಾದ ಅಸ್ತಿತ್ವವಿರುವುದು ಕುಟುಂಬದಲ್ಲಿ, ಆದರೆ ಗಂಡು ತನಗಿರುವ ಭೌತಿಕ ಉತ್ಪಾದಕ ಘಟಕಗಳೊಂದಿಗಿನ ಸಂಪರ್ಕದಿಂದಾಗಿ ತನ್ನ ಮತ್ತು ಕುಟುಂಬದ ಸಂಬಂಧವನ್ನು ಕೇವಲ ಆರ್ಥಿಕ ಸಂಗತಿಗಳಿಗೆ ಮಾತ್ರ ಸೀಮಿತಗೊಳಿಸಿ ಕೊಂಡಿದ್ದರೆ ಅಂತಹ ಕೊಂಡಿಗಳು ಅತ್ಯಂತ ಶಿಥಿಲವಾದುದಾಗಿರುತ್ತವೆ. ಈ ಸಂಬಂಧಗಳ ಶಿಥಿಲತೆಯು ಇನ್ನೊಂದರ್ಥದಲ್ಲಿ ಆತನ ಇಡೀ ವ್ಯಕ್ತಿತ್ವದ ಹಾಗು ಸಮಾಜದ ಶಿಥಿಲತೆಯೇ ಆಗಿ ಬಿಡುತ್ತದೆ ಎನ್ನುವ ಮೂಲಕ ಪಶ್ಚಿಮ ಪ್ರೇರಿತವಾದ ಕುಟುಂಬ ವ್ಯವಸ್ಥೆ ಕುರಿತ ಆತಂಕಗಳಿಗೆ ಪೌರ್ವಾತ್ಯ ಕೌಟಂಬಿಕ ಜೀವನ ವಿಧಾನವನ್ನು ಅದರ ಮೌಲ್ಯ ವ್ಯವಸ್ಥೆಯನ್ನು ಪ್ರತಿಯಾಗಿಡುತ್ತಾ ತಮ್ಮ ಭಾರತೀಯತೆಯ ಕನಸನ್ನು ಸಾಕಾರಗೊಳಿಸಲು ಯತ್ನಿಸುತ್ತಾರೆ.

ಆದರೆ ಪಶ್ಚಿಮ ಪ್ರೇರಿತವೆಂದುಕೊಳ್ಳುವ ಭಾರತದ ಸ್ತ್ರೀವಾದ ಕೂಡ ಕುಟುಂಬದ ಸಂದರ್ಭದಲ್ಲಿ ಎತ್ತುವ ಪ್ರಶ್ನೆಗಳು ಇಷ್ಟು ಸರಳವಾದುದಲ್ಲ. ತನ್ನ ಸ್ವಾತಂತ್ರ್ಯದ ದ್ವಿಗುಣಕ್ಕಾಗಲಿ, ಪರಮಾಧಿಕಾರದ ಸ್ಥಾಪನೆಗಾಗಲಿ ಕೇಳುವುದಲ್ಲ. ಬದಲಿಗೆ ತನ್ನ ಸಂಕಷ್ಟಗಳ ಬಿಡುಗಡೆಗಾಗಿ ಹಾಗು ಈಗಾಗಲೇ ಕೇಂದ್ರೀಕೃತಗೊಂಡಿರುವ ಪರಮಾಧಿಕಾರವನ್ನು ಕರಗಿಸುವುದಕ್ಕಾಗಿ ಹೊರಡುವ ಚಿಂತನೆಗಳವು. ರಾಯರು೨೦ ವರ್ಷಗಳ ಅವಧಿಯಲ್ಲಿ ತಾನು ಯಾರನ್ನೂ ಕೂಡಿಲ್ಲ ಎಂಬ ನೈತಿಕ ಸಮಜಾಯಿಷಿ ತಮಗೆ ತಾವೇ ಕೊಟ್ಟುಕೊಳ್ಳುವ

ಅಪರಾಧಿ ಭಾವವೇ ಹೊರತು ಅದು ಸಮಾಜದ ನಿರೀಕ್ಷೆಯಲ್ಲ. ಆದರೆ ಈ ಸಾಧ್ಯತೆ ಹೆಣ್ಣಿಗಿದೆಯೇ ಎಂಬುದು ಸ್ತ್ರೀವಾದದ ಪ್ರಶ್ನೆ. ಅಲ್ಲದೆ ಭಾರತದ ಕುಟುಂಬ ವ್ಯವಸ್ಥೆ ಯೊಳಗಿನ ಬಿಕ್ಕಟ್ಟನ್ನು ಸುನಂದಾ ಬಹಳ ಸರಳವಾದ ಸಮಸ್ಯೆಯಾಗಿ ಭಾವಿಸುತ್ತಾರೆ. 'ಸಿಂಗಲ್ ಪೇರೆಂಟ್ ಫ್ಯಾಮಿಲಿ'ಗಳಲ್ಲಿ ತಲೆದೋರುವ ಸಮಸ್ಯೆಗಳನ್ನು ಅತ್ಯಂತ ಸುಸಂಸ್ಕೃತವಾದ ಸಾಮಾಜಿಕ ಸಂಬಂಧಗಳು ಬಗೆಹರಿಸುತ್ತವೆ ಎಂದು ನಂಬುತ್ತಾರೆ. ಬಹುಶಃ ಇದಕ್ಕೆ ಕಾರಣ "ತೌರು ಮನೆ ಹೆಣ್ಣಿಗೆ ಶಿವನ ವರದಾನ ಅದು ಗಂಡಿಗಿಲ್ಲ" ಎಂಬ ಮುಗ್ಧ ನಂಬಿಕೆಯೇ ಇರಬೇಕು. ಆದರೆ ಈ ನಂಬಿಕೆ ಅವರು ಬಿಟ್ಟು ಹೋದ ಭಾರತವನ್ನು, ಅದರ ಬದುಕನ್ನು, ತೌರುಮನೆ ಎಂದು ಭಾವಿಸಿದ ಕೂಡಲೇ, ಆ ತೌರಿನಲ್ಲಾದ ಅವಮಾನಗಳನ್ನೆಲ್ಲ ಅಭಿಮಾನವಾಗಿ ಪರಿವರ್ತಿಸುಕೊಳ್ಳುವ ಇಲ್ಲವೆ ಆ ತೌರ ಮನೆಯೇ ತನ್ನೆಲ್ಲ ಬಡತನ, ಅವಮಾನಗಳನ್ನು ಮುಚ್ಚಿಟ್ಟು ನಗುತ್ತ ಹೊಸಿಲು ದಾಟಿದ ಹೆಣ್ಣನ್ನು ಸ್ವಾಗತಿಸಬೇಕೆಂಬುದು ಅಪ್ಪಟ ಭಾರತೀಯ ಮನೋಭಾವವೇ ಸರಿ. ಅದನ್ನೇ ಒಬ್ಬ ಅನಿವಾಸಿ ಭಾರತೀಯರಾಗಿ ಸುನಂದ ಪ್ರತಿಪಾದಿಸಿದ್ದಾರೆ ಸಹ.

### ವೈದೇಹಿ

ಕನ್ನಡ ಸಾಹಿತ್ಯ ಕ್ಷೇತ್ರವು ಒಂದೆಡೆ 'ವೈದೇಹಿಯವರನ್ನು ಮಹಿಳಾ ಲೇಖಕಿ ಎನ್ನುವ ಪರಿಮಿತ ಚಾಕಟ್ಟಿನಲ್ಲಿ ಇಟ್ಟು ನೋಡಿ ಮೆಚ್ಚಬೇಕಾದ ಪ್ರಮೇಯವಿಲ್ಲ. ಕನ್ನಡದ ಹೊಸ ಪೀಳಿಗೆಯ ಯಾವುದೇ ಸಣ್ಣ ಕತೆಗಾರರಿಗೆ ಸರಿ ಸಾಟಿಯಾಗಬಲ್ಲದು ಇವರ ಕಥನ ತಂತ್ರ' ಎನ್ನುತ್ತಿದ್ದರೆ, ಇನ್ನೊಂದೆಡೆ ಸ್ತ್ರೀವಾದಿ ವಿಮರ್ಶಕರು 'ಕನ್ನಡ ಸಾಹಿತ್ಯದ ನಿಜವಾದ ಸ್ತ್ರೀ ಸಂವೇದಿತ ಕಥನ ಕ್ರಮ ಅನ್ವೇಷಿತವಾಗುತ್ತಿರುವುದು ವೈದೇಹಿಯವರ ಕಾವ್ಯದಲ್ಲಿಯೇ' ಎಂದು ವಿವರಿಸುತ್ತಿದ್ದಾರೆ. ಹಾಗಾಗಿ ವೈದೇಹಿಯವರ ಕಾವ್ಯ ಬಹಳ ಸೂಕ್ಷ್ಮವಾದ ನೆಲೆಗಳಲ್ಲಿ ವಿಶ್ಲೇಷಣೆಗೆ ಒಳಪಡಬೇಕಾಗುತ್ತದೆ.

೧೯೮೨ರಲ್ಲಿ ಬರೆದಿರುವ (ಪ್ರಕಟಣೆ ೧೯೯೨) 'ಅಸ್ಪೃಶ್ಯರು' ಕಾದಂಬರಿ ಜಾತಿ ಪದ್ಧತಿಯನ್ನು ಹೆಣ್ಣಿನ ಜಗತ್ತಿನ ಮೂಲಕ ಗ್ರಹಿಸುವ ಆಶಯದೊಂದಿಗೆ, ಆಂತರ್ಯದಲ್ಲಿ ಲಿಂಗಭೇದವನ್ನು ಜಾತಿಭೇದಕ್ಕೆ ಸಂವಾದಿಯಾಗಿ ಪರಿಭಾವಿಸುವ ಆಲೋಚನೆಯನ್ನೂ ಹೊಂದಿದ್ದಾಗಿದೆ. ಆದರೆ ಇಲ್ಲಿನ ಸ್ತ್ರೀ ಸಂವೇದನೆಯು ಪ್ರಧಾನವಾಗಿ ಮೇಲ್ವರ್ಗದ ಸಂವೇದನೆಯಾಗಿರುವುದರಿಂದ ಅದು ಈ ಪದ್ಧತಿಗೆ ಪ್ರಬಲವಾದ ಪ್ರತಿರೋಧವನ್ನು ಒಡ್ಡುವ ವಿಧಾನವಾಗಿ ಇಡೀ ಜಾತಿ ಪದ್ಧತಿ ಎಂಬುದನ್ನೇ ಈ ದೇಶದ ಒಂದು ಸಾಂಸ್ಕೃತಿಕ ವೈವಿಧ್ಯವಾಗಿ ಗ್ರಹಿಸಲು ಯತ್ನಿಸುತ್ತದೆ. ಹಲವಾರು ಮೇಲ್ವರ್ಗದ ಲೇಖಕರು ಭಾವಿಸಿದಂತೆಯೇ ಹೆಸರು ಬದಲಿಸಿ, ಕೋಟಾ ಬ್ರಾಹ್ಮಣರ ಅಡಿಗೆ ಕಲಿಸಿ ಸಂಸ್ಕೃತೀಕರಣಗೊಳಿಸುವ ಮೂಲಕ ಪರಿಹರಿಸುವ ಸಾಧ್ಯತೆಯತ್ತ ಗಮನ ಹರಿಸುತ್ತದೆ. ಹಾಗೆಯೇ ಲಿಂಗಭೇದವನ್ನು ಕುರಿತು ಮಾತನಾಡುವಾಗಲೂ ಗಂಡು ಹೆಣ್ಣಿನ ನಡುವಿರುವ, ನೈಸರ್ಗಿಕ ವೈವಿಧ್ಯವನ್ನು,

ಅದನ್ನಾಧರಿಸಿದ ಸಾಂಸ್ಕೃತಿಕ ಭೇದವಾಗಿ ಗ್ರಹಿಸುತ್ತದೆ. ಪರಿಣಾಮವಾಗಿ ಇವರ ಸ್ತ್ರೀವಾದಿ ನೆಲೆಯು ''ಪುರುಷರ ಬಗ್ಗೆ ಯೋಚಿಸುವಾಗ ಎಷ್ಟೋ ಸಲ ಮರುಕವುಂಟಾಗುತ್ತದೆ. ಬದುಕಿನ ಎಷ್ಟೋ ದಿವ್ಯ ಅನುಭವಗಳ ಮೃದು ಸ್ಪರ್ಶದಿಂದ ಇವರೆಲ್ಲ ವಂಚಿತರಾಗಿದ್ದಾರೆಂದು. ಅಂತಹ ಅನುಭವಗಳನ್ನು ತಮ್ಮ ಯಾವ ಪೌರುಷದಿಂದಲೂ ಕೂಡ ಎಂದಿಗೂ ಗಳಿಸಿಕೊಳ್ಳಲಾರರಲ್ಲ. ಈ ಸಿಟ್ಟಿಗೇ ಇರಬಹುದೇ ಇವರೆಲ್ಲ ಪ್ರಪಂಚದ ಬೀಗದ ಕೈಯನ್ನು ತಮ್ಮಲ್ಲಿಟ್ಟುಕೊಂಡು ನಮ್ಮನ್ನು ಸತಾಯಿಸುತ್ತಿರುವುದು? ಎಲ್ಲಿ ಹೋದರೂ ತಮ್ಮ ಸಾಮ್ರಾಜ್ಯ ಬಿಚ್ಚಿಕೊಂಡು ನಾವು ಉಸಿರೆತ್ತದಂತೆ ಮಾಡಿರುವುದು? ಹ್ಞಾ, ಇದಕ್ಕಾಗಿ ನಾವು ರೊಚ್ಚಿಗೆದ್ದು ನಮಗೆ ಪ್ರಾಕೃತಿಕವಾಗಿ ದಕ್ಕಿದ ಮತ್ತು ಅವರು ಎಂದೂ ನಮ್ಮಿಂದ ಕಸಿಯಲಾರದ ಕೆಲ ಅನರ್ಘ್ಯಗಳನ್ನು ಧಿಕ್ಕರಿಸಿ ಅವರಿಗೆ ಸಮನಾಗಲು ಯತ್ನಿಸುವುದು ಎಂದಿಗೂ ಬುದ್ಧಿವಂತಿಕೆಯಲ್ಲ'' ಎಂಬ ದಾರಿಯನ್ನು ಹಿಡಿಯುತ್ತದೆ. ಹಾಗಾಗಿಯೇ ಸಮಾನತೆಯ ಹಕ್ಕೊತ್ತಾಯವಾಗಿ ಹೊರಡುವ ಸ್ತ್ರೀವಾದವನ್ನು (ಪಶ್ಚಿಮ ಪ್ರೇರಿತ ಎಂಬರ್ಥದಲ್ಲಿ) ಇವರು ವಿರೋಧಿಸುತ್ತಾರೆ. ವೈದೇಹಿಯವರ ಪ್ರಕಾರ ಇವು ಸಮಾನ ಅವಕಾಶವನ್ನು ಒಂದಲ್ಲ ಒಂದು ದಿನ ದೊರಕಿಸಿ ಕೊಡಬಲ್ಲವಾದರೂ, ಅವು ನಿಸರ್ಗದಲ್ಲಿ ತಂತಾನೇ ಲಭ್ಯವಾಗುವ ನಮ್ಮದೇ ಆದ ಅನುಭವಗಳನ್ನು ಗುರುತಿಸುವ, ಗೌರವಿಸುವ ಸೂಕ್ಷ್ಮತೆಗಳನ್ನು ನಾಶ ಮಾಡಿ ಬಿಡುತ್ತದೆ. ಹೆಣ್ಣುಗಳಿಗೇ ಸ್ತ್ರೀ ವೇಷವನ್ನು ಧರಿಸುವ ಕೃತಕತೆಯನ್ನು ನಿರ್ಮಿಸಿ ಬಿಡುತ್ತದೆ.

ವೈದೇಹಿ ಹೆಣ್ಣಿಗೆ ಗಂಡಿಗಿಂತ ಭಿನ್ನವಾದ ಕೆಲವು ಸಾಂಸ್ಕೃತಿಕ ವೈವಿಧ್ಯವಿದೆ ಎಂಬುದನ್ನೇ ಪ್ರಧಾನವಾಗಿ ಪರಿಭಾವಿಸುವುದರಿಂದ ಸಹಜವಾಗಿಯೇ ಅವರು ಹೆಣ್ಣಿಗೆ ಈ ಸಾಂಸ್ಕೃತಿಕ ಭಿನ್ನತೆಯ ಕಾರಣದಿಂದಾಗಿಯೇ ತನ್ನದೇ ಆದ ಪ್ರತಿರೋಧದ ಮಾದರಿಗಳಿವೆ ಎಂದು ಪ್ರತಿಪಾದಿಸುತ್ತಾರೆ. ಆದರೆ ಮುಂದುವರಿದು ಸ್ತ್ರೀಯ ಈ ಸಾಮರ್ಥ್ಯವನ್ನೂ ಕೂಡ ಅನ್ಯ ಶಕ್ತಿಗಳು ಹೇಗೆ ತಮ್ಮ ಹಿಡಿತದಲ್ಲಿಟ್ಟುಕೊಂಡು ನಿಯಂತ್ರಿಸುತ್ತವೆ ಎಂಬುದನ್ನು ಪ್ರಸ್ತಾಪಿಸುವುದಿಲ್ಲ. ಬದಲಿಗೆ ''ಈ ಎಲ್ಲದರ ಮೂಲದಲ್ಲಿ ಪುರುಷನ ಅಹಂ ಮಾತ್ರ ಇದ್ದೇ ಇದೆ. ಅದಕ್ಕೆ ಯಥಾಮಿತಿ ನಮಃ'' ಎನ್ನುತ್ತಾರೆ. ಈ ಪುರುಷ ಅಹಂನ್ನು ಪ್ರಶ್ನಿಸುವ ಸ್ತ್ರೀವಾದವನ್ನು ಪಕ್ಕಕ್ಕೆ ಸರಿಸಿ, ''ದುಂಬಿಗಾಗಿ ಕಾದು ನಿಯತ ಕಾಲದಲ್ಲಿ ಅದು ಬರದೇ ಇದ್ದರೆ ಅದರ ಹಂಗು ತೊರೆದು ತನ್ನ ಆಂತರಿಕ ಶಕ್ತಿಯನ್ನೇ ಚಾಲನೆಗೊಳಿಸಿ ಪರಾಗ ಸಂಪರ್ಕ ನಡೆಸಿಕೊಂಡು ಹೊಸ ಹೂವಿನ ಆಗಮನವನ್ನು ಅನುಗೊಳಿಸಿ ಕೊಳ್ಳುವ ಹೂ! ಇದೇ ನಿಯಮ ನೈಸರ್ಗಿಕ ನಿಯಮವಾಗಿಯೇ ನಮಗೂ ದಕ್ಕಿದ್ದರೆ...'' ಎನ್ನುತ್ತಾರೆ. ಆದರೆ ಇಲ್ಲಿ ಏಳುವ ಪ್ರಶ್ನೆ ಹೆಣ್ಣು ಸಂಕಷ್ಟಗಳಿಗೆ ಒಳಪಡಬೇಕೆನ್ನುವುದು ನೈಸರ್ಗಿಕ ನಿಯಮವೇ ಆಗಿದೆ ಎನ್ನುವುದಾದರೆ ಅದು ಸಮ್ಮತದ್ದೇ ಎನ್ನುವುದಾಗುತ್ತದೆ. ಏಕೆಂದರೆ ಈ ನೈಸರ್ಗಿಕತೆಯ ವಾದವನ್ನು ಮಂಡಿಸುತ್ತಲೇ ಪುರುಷ ತನ್ನ ಪರಿಮಾಧಿಕಾರವನ್ನು ಸ್ಥಾಪಿಸಿಕೊಂಡಿರುವನಾದರೂ ಆ ನಿಸರ್ಗವನ್ನೇ ನಂಬಿ ಏನು ಆತ ಸುಮ್ಮನೆ ಕುಳಿತಿಲ್ಲ. ಬದಲಿಗೆ ತನ್ನ ಹಗಲು ರಾತ್ರಿಗಳನ್ನೆಲ್ಲ

ಹಾಗೆ ಸ್ಥಾಪಿಸಿಕೊಂಡ ಪರಮಾಧಿಕಾರವನ್ನು ಉಳಿಸಿಕೊಳ್ಳುವುದಕ್ಕೆ, ಬಲಿಷ್ಠವಾಗಿಸುವುದಕ್ಕೆ ಬೇಕಾದ ರಾಜಕೀಯ, ಸಾಮಾಜಿಕ, ಧಾರ್ಮಿಕ, ತಾಂತ್ರಿಕ ಹುನ್ನಾರುಗಳನ್ನು ರೂಪಿಸಿ ಕೊಳ್ಳುವುದಕ್ಕಾಗಿ ವಿನಿಯೋಗಿಸುತ್ತಿದ್ದಾನೆ. ಈ ಹುನ್ನಾರಗಳಿಗೆ ಪ್ರತಿ ಹುನ್ನಾರವನ್ನೂ ರೂಪಿಸಬೇಕೆಂಬುದೇ ಸ್ತ್ರೀವಾದದ ಆಲೋಚನೆ, ಅಂತಹ ಸ್ತ್ರೀವಾದದ ಮೂಲಧನವನ್ನು ಗುರುತಿಸಿಕೊಳ್ಳದೆ ವೈದೇಹಿಯವರು ಮಂಡಿಸುವ "ಪುರುಷರಿಗೆ ನಾವು ಎಂದಿಗೂ ಸಮರಲ್ಲ. ಅದಕ್ಕಿಂತ ಮುಖ್ಯವಾಗಿ ನಮ್ಮ ಸಮಕ್ಕೆ ಪುರುಷರು ಎಂದೂ ಬಂದು ನಿಲ್ಲಲಾರರು... ನಾವೇಕೆ ಪುರುಷ ದನಿಯಲ್ಲಿ ಮಾತಾಡಬೇಕು? ನಾವು ನಮ್ಮ ಕಂಠದಲ್ಲಿ ಹಾಡೋಣ, ಅದು ಜೋರಾಗವಿರಲಿ, ಪ್ರೇಮರಾಗವಿರಲಿ, ಇನ್ನಾವ ಬಗೆಯ ರಾಗ-ವಿರಾಗಗಳೇ ಇರಲಿ" ಎನ್ನುವ ಮಾತುಗಳು ತೀರ ಭ್ರಮಾತ್ಮಕವಾದುದೆನಿಸುತ್ತದೆ. ಸಹಜತೆಯನ್ನು ಕಾವ್ಯಮಯ ಗೊಳಿಸುತ್ತ ಅಸಹಜವಾಗಿಸುವುದೆನಿಸುತ್ತದೆ. ವೈದೇಹಿಯವರ ಸಾಂಸ್ಕೃತಿಕ ಸ್ತ್ರೀವಾದದ ನೆಲೆ ಕಾವ್ಯಮಯವಾದಷ್ಟೂ ಮೂಲಭೂತ ಪ್ರಶ್ನೆಗಳಿಂದ ಹೇಗೆ ವಿಮುಖವಾಗಲಾರಂಭಿಸುತ್ತದೆ ಎಂಬುದಕ್ಕೆ ಈ ಸಂಗತಿಯೊಂದನ್ನು ಗಮನಿಸಬಹುದು:

"ಅರವತ್ತನಾಲ್ಕು ವಿದ್ಯೆಗಳಲ್ಲಿ ಬಾಣಸಿಗ ವಿದ್ಯೆಯೂ ಒಂದಷ್ಟೆ! ಅದು ಗಂಡಸರು ಕಲಿಯುವ ವಿದ್ಯೆಯೇ ಆಗಿತ್ತು ಎನ್ನುವ ಅವರು, ಹೆಂಗಸರು ಅಡಿಗೆ ಮಾಡುತ್ತಾರೆ ಸಮ! ಆದರೆ ಸ್ವಲ್ಪ ದೊಡ್ಡ ಆಡುಗೆಯೇ? ಅದಕ್ಕೆ ಗಂಡಸರೇ ಬರಬೇಕು! ಎಂದು ಚುಡಾಯಿಸುತ್ತಾರೆ. ಅದಕ್ಕೆ ನಮ್ಮ ಉತ್ತರವಿದೆ. ಸಾಮೂಹಿಕವಾಗಿ ಎಲ್ಲ ಹೆಂಗಸರಿಗೆ ಅಡಿಗೆ ತಿಳಿದಿರುವಂತೆ ಸಾಮೂಹಿಕವಾಗಿ ಎಲ್ಲ ಗಂಡಸರಿಗೂ ಅಡಲು ಎಲ್ಲಿ ತಿಳಿದಿದೆ? ಅದನ್ನೇ ಉದ್ಯೋಗವನ್ನಾಗಿ ಮಾಡಿಕೊಂಡ ಕೆಲವರನ್ನು ಬಿಟ್ಟರೆ?" (ಪಾಕಲೋಕದ ಗುನುಗುಗಳು). ಇದು ಸಾಂಸ್ಕೃತಿಕ ಸ್ತ್ರೀವಾದವನ್ನು ಮಂಡಿಸುವ ವೈದೇಹಿಯವರ ಕ್ರಮ. ಆದರೆ ಇದಿಷ್ಟೇ ಇವತ್ತಿನ ಸ್ತ್ರೀವಾದದ ಅಗತ್ಯವೆನ್ನುವಂತಿಲ್ಲ. ಏಕೆಂದರೆ ಹುಟ್ಟಿನಿಂದಲೇ ಹೆಣ್ಣಿಗಾಗಿಯೇ ರೂಪಿತವಾದ ಕೆಲಸವೆಂಬಂತೆ ಹೇರಲ್ಪಡುವ ಅಡಿಗೆಯಂತಹ ಕೆಲಸಗಳೂ ಕೂಡ ಒಂದು ವಿದ್ಯೆಯಾಗುವ, ಉದ್ಯಮವಾಗುವ ಹಂತದಲ್ಲಿ ಹೇಗೆ ಹೆಣ್ಣಿನ ಕೈಯಿಂದ ಜಾರಿ ಹೋಗುತ್ತಿವೆ ಎಂಬ ಸಂಗತಿಯೂ ಮಹತ್ವದ್ದಾಗುತ್ತದೆ. ಜಾತಿಭೇದಕ್ಕಾಗಲಿ, ಲಿಂಗಭೇದಕ್ಕಾಗಲಿ ಕೇವಲ ಸಾಂಸ್ಕೃತಿಕ ಅಸ್ಪೃಶ್ಯತೆ ಅಥವ ಸಾಂಸ್ಕೃತಿಕ ವೈವಿಧ್ಯ ಮಾತ್ರ ಇರುವುದಿಲ್ಲ. ಅದರೊಂದಿಗೆ ಈ ವೈವಿಧ್ಯವನ್ನು ಅವಲಂಬಿಸಿಯೇ ಅದನ್ನು ಮುನ್ನಡೆಸುವ, ನಿಯಂತ್ರಿಸುವ ಹಲವಾರು ರಾಜಕೀಯ, ಆರ್ಥಿಕ ಹುನ್ನಾರುಗಳಿರುತ್ತವೆ. ಇವು ಅತ್ಯಂತ ಸಹಜವೋ ಎಂಬಂತೆಯೇ ಬಿಡುಗಡೆಯ ಹಾದಿಗಳನ್ನು ನಿರ್ಮಿಸುತ್ತಲೇ ಅವರೊಂದಿಗೆ ಪರವಾನಿಗೆಯ ಹಕ್ಕನ್ನು ತಮ್ಮದಾಗಿ ಉಳಿಸಿಕೊಳ್ಳುತ್ತವೆ. ಹಾಗಾದಾಗ ಹೆಣ್ಣಿನ ಹೆಣ್ತನ ಹೆಣ್ಣಿನದೇ ಆಗಿ ಉಳಿಯುವುದಿಲ್ಲ. ಪಾಕಲೋಕವೂ ಅವಳದಾಗಿ ಉಳಿಯುವುದಿಲ್ಲ. ಬದಲಿಗೆ ಅವೆರಡೂ ಉದ್ಯಮವಾಗಿ ಪರಿವರ್ತಗೊಂಡು, ಒಂದು ಗಂಡಿನ ಪೌರುಷವನ್ನು ಬಿತ್ತಿ ಬೆಳೆಸುವ ಕ್ಷೇತ್ರವಾಗಿ ಮಾರ್ಪಾಡುತ್ತದೆ. ಅಲ್ಲಿ ಸಂತಾನವನನ್ನು ಪಡೆಯುವ,

ನಿಯಂತ್ರಿಸುವ ಸಂಗತಿಗಳೆರಡೂ ಅವಳ ಮೇಲೆ ಹೇರಲ್ಪಡುತ್ತವೆ. ಹಾಗೆಯೇ ಪಾಕಲೋಕವು ಅವಳನ್ನು ಉಳಿದೆಲ್ಲ ಉದ್ಯಮಗಳಿಂದ ದೂರವಿರಿಸುವ ತಂತ್ರವಾಗಿ ರೂಪುಗೊಳ್ಳುತ್ತಲೇ, ಆಕೆ ಅದನ್ನು ಕೂಡ ಒಂದು ಉದ್ಯಮವಾಗಿ ರೂಪಿಸಿಕೊಳ್ಳದಂತೆಯೂ ತಡೆಯೊಡ್ಡುತ್ತದೆ. ಆದರೆ ಈ ಎರಡನ್ನೂ ತನ್ನದಾಗಿಸಿಕೊಳ್ಳುವುದಕ್ಕೆ ಸ್ತ್ರೀಗೆ ಕೇವಲ ಸಾಂಸ್ಕೃತಿಕ ಸ್ತ್ರೀವಾದ ಮಾತ್ರ ಸಾಕಾಗುವುದಿಲ್ಲ. ಅದರಾಚೆಗಿನ ಆರ್ಥಿಕ, ರಾಜಕೀಯ ಹೋರಾಟದ ಹುನ್ನಾರುಗಳೂ ಬೇಕಾಗುತ್ತವೆ. ಇಂತಹ ಬಹುಸ್ತರದ ಶಕ್ತಿ ಸಂಚಯದಿಂದ ಮಾತ್ರ ಆಕೆಯ 'ಹೆಣ್ತನವು' ಅವಳದಾಗಿ ಉಳಿಯುವ ಸಾಧ್ಯತೆಗಳಿವೆ.

ಸ್ತ್ರೀವಾದದ ಬಹುಸ್ತರದ ಶಕ್ತಿ ಸಂಚಯ ಕ್ರಿಯೆ ಎಂಬುದು ಭಾರತೀಯ ಸಮಾಜದ ಬಹುತ್ವವನ್ನು ಗ್ರಹಿಸಿ ಅದನ್ನು ಒಳಗೊಳ್ಳುವಂತೆಯೇ, ಪೂರ್ವ ಪಶ್ಚಿಮದ ಭಿನ್ನತೆಯನ್ನು ಗ್ರಹಿಸಿಕೊಳ್ಳುವುದರೊಂದಿಗೇ ಅದನ್ನು ಒಳಗೊಳ್ಳಬೇಕಾಗುತ್ತದೆ. ಏಕೆಂದರೆ ದೇಶಪ್ರೇಮ, ಭಾಷಾಪ್ರೇಮ, ಪ್ರಾದೇಶಿಕ ಪ್ರೇಮ, ಸಂಸ್ಕೃತಿ ಪ್ರೇಮಗಳು ಸ್ತ್ರೀವಾದದ ಕೇಂದ್ರಶಕ್ತಿಗಳಿಗೆ ಪೂರಕವಾಗಿ ಬಳಕೆಗೊಳ್ಳಬೇಕೇ ಹೊರತು ತೊಡಕುಗಳಾಗಬಾರದು. ಆ ಕಾರಣದಿಂದಲೇ ಯಾಜಮಾನ್ಯದ ಪ್ರಚೋದನೆಯಿಂದಲೇ ರೂಪುಗೊಳ್ಳುವ ಪ್ರತಿರೋಧವೂ ಕೂಡ ಸ್ತ್ರೀವಾದಿ ಚಿಂತನೆಯ ಮಹತ್ವದ ಸಂಗತಿಯಾಗುತ್ತದೆ. ಏಕೆಂದರೆ ಇದು ಅಂತರ್ಯದಲ್ಲಿ ಯಾಜಮಾನ್ಯಕ್ಕೆ ಮಂಕುಬೂದಿ ಎರಚುವ ಮೂಲಕ ಅದನ್ನು ಇಕ್ಕಟ್ಟಿಗೆ ಸಿಲುಕಿಸುವ, ದುರ್ಬಲಗೊಳಿಸುವ ಅತ್ಯುತ್ತಮ ತಂತ್ರವಾಗಿ ಕೂಡ ಒಮ್ಮೊಮ್ಮೆ ಕಂಡುಬರುತ್ತದೆ. ಈ ಅರ್ಥದಲ್ಲಿ ಆರಂಭ ಕಾಲದ್ದಾಗಲಿ, ೭೦ರ ದಶಕದ ನಂತರದ್ದಾಗಲಿ, ಮಹಿಳಾ ಸಾಹಿತ್ಯ ಏರುಮುಖದ ಚಲನೆಯೊಂದನ್ನು ಕ್ರಮಿಸುತ್ತಲೇ ಸಾಗಿದೆ. ವೀಣಾ, ಸಾರಾ, ವೈದೇಹಿ ಹಾಗೂ ಸುನಂದ ಅವರುಗಳು ಆ ಪ್ರಯಾಣದ ಚುಕ್ಕಾಣಿಗಳಾಗಿ ನಿಂತು ಅದನ್ನು ಮುನ್ನಡೆಸಲು ಪ್ರಯತ್ನಿಸುತ್ತಿದ್ದಾರೆ.

# ಕನ್ನಡ ಲೇಖಕಿಯರ ಕಥಾಸಾಹಿತ್ಯ

ಎಚ್.ಎಸ್.ಶ್ರೀಮತಿ

ಮಹಿಳೆಯ ಕಥನ ಕಲೆಯ ಇತಿಹಾಸ ಅತ್ಯಂತ ಪ್ರಾಚೀನವಾದುದು. ತಾವು ಕಂಡುಂಡ, ಕಲ್ಪಿಸಿದ, ಕನವರಿಸಿದ ಲೋಕಗ್ರಹಿಕೆಯನ್ನು ವೈವಿಧ್ಯಮಯವಾಗಿ ಅಭಿವ್ಯಕ್ತಿಸಿದ ಅಡುಗೂಲಜ್ಜಿಯರ ಕತೆಗಳು ಅದೆಂದಿನಿಂದ ಪ್ರಾರಂಭವಾದುವೋ ಏನೋ. ಆದರೂ ಲಿಖಿತ ಪರಂಪರೆಯ ಹಲವು ದೃಗ್ಗೋಚರ ಸಾಮರ್ಥ್ಯಗಳು ಮೌಖಿಕ ಪರಂಪರೆಯನ್ನು ಹಿನ್ನೆಲೆಗೆ ಸರಿಸಿದವು. ಅಜ್ಜಿಯರೇನೂ ಕತೆಗಳನ್ನು ಹೇಳುವುದನ್ನು ನಿಲ್ಲಿಸಲಿಲ್ಲ. ಕಿರಿಯರೂ ಕೇಳುವುದನ್ನು ನಿಲ್ಲಿಸಲಿಲ್ಲ. ಆದರೆ ಈ ಸಂಗತಿ ನಮ್ಮ ಚರಿತ್ರೆಯ ದಾಖಲೆಗಳಲ್ಲಿ ಬರದೆ ಹೊರಗೇ ಉಳಿದುಹೋದದ್ದು ಮಾತ್ರ ಲಿಪಿಯ ರಾಜಕಾರಣದಿಂದಾಗಿಯೇ. 'ಬರಹ' ತನ್ನ ಪ್ರವೇಶದೊಂದಿಗೆ ಸಮಾಜ ವ್ಯವಸ್ಥೆಯ ರಾಜಕಾರಣದಲ್ಲಿ ಒಂದು ಪ್ರಬಲ ಅಸ್ತ್ರವಾಗಿಯೂ ರೂಪು ತಳೆಯಿತು. ಸಹಜವಾಗಿಯೇ ಈ ಸಮಾಜದ ಪ್ರಬಲರು ಈ ನವೀನ ಅಸ್ತ್ರವನ್ನು ತಮ್ಮ ನಿಯಂತ್ರಣಕ್ಕೆ ತೆಗೆದುಕೊಂಡರಷ್ಟೇ ಅಲ್ಲದೆ ಯಾವ ಕಾರಣಕ್ಕೂ ಅದು ಇತರ ದುರ್ಬಲ ಸಮುದಾಯಗಳಿಗೆ ದಕ್ಕಬಾರದಂತೆ ಎಚ್ಚರವನ್ನು ವಹಿಸಿದರು. ಮೌಖಿಕ ಪರಂಪರೆಯ ಹಿನ್ನಡೆಯಲ್ಲಿ ಸೇರಿ ಮಹಿಳೆಯ ಕಥನ ಕಲೆಯೂ ಮಸುಳಿಸುತ್ತಾ ಹೋದದ್ದು ಒಂದು ಸಂಗತಿಯಾದರೆ, ಅಭಿವ್ಯಕ್ತಿಯ ಹೊಸ ಸಾಧನವಾದ 'ಬರಹ' ದುರ್ಬಲ ಸಮುದಾಯದವಳಾದ ಅವಳಿಗೆ ಎಟುಕಲಾರದೆ ಹೋದದ್ದು ಇನ್ನೊಂದು ಸಂಗತಿಯಾಯಿತು. ಈ ಮಧ್ಯದ ಕಾಲಾವಧಿಯಲ್ಲಿ ಮಹಿಳೆಯ ಕಥನಕಲೆ ನಲುಗಿರಬಹುದು.

ಲೇಖಕಿಯರ ಕಥಾಸಾಹಿತ್ಯ ಚರಿತ್ರೆಯಲ್ಲಿ ತನ್ನ ಸಹಜ ಸಾಮರ್ಥ್ಯವನ್ನು ಸಮಾಜದ ರಾಜಕಾರಣದ ಆಟದಲ್ಲಿ ಕಳೆದುಕೊಂಡ ಮಹಿಳೆ ಪುನಃ ತನ್ನ ಆ ಸಾಮರ್ಥ್ಯವನ್ನು ಗಳಿಸಿಕೊಂಡ ಕಾಲಹಂತದ ಕತೆ ಹರಿದು ಬಂದಿದೆ. ಸಾಮಾಜಿಕವಾಗಿ ತನ್ನ ಅಸ್ಮಿತೆಯನ್ನು ಗುರುತಿಸಿಕೊಳ್ಳಲು ಸಬಲಳಾಗುತ್ತಿರುವ ಮಹಿಳೆಯ ಕತೆಯೊಂದಿಗೇ ಇದು ತಳುಕು ಹಾಕಿ ಕೊಂಡಿದೆ. ಇಂದಿನ ಜಾಗ್ರತ ಮಹಿಳೆ ಈ ಸಮಾಜ ವ್ಯವಸ್ಥೆಯ ಕಠಿಣ ನಿಯಂತ್ರಣದಿಂದ ಹೊರಬರುವ ಸಾಧ್ಯತೆಗಳನ್ನು ಒಂದೊಂದಾಗಿ ಶೋಧಿಸತೊಡಗಿದ್ದಾಳೆ. 'ಬರಹ'ವು ತನ್ನ ಅಭಿವ್ಯಕ್ತಿಗೆ ಒದಗಿ ಬರುವ ಒಂದು ಸಮರ್ಥಸಾಧನವೂ ಹೌದು, ಈ ಸಮಾಜವ್ಯವಸ್ಥೆಯ ರಾಜಕಾರಣದಲ್ಲಿ ಬಳಸಬಹುದಾದ ಪ್ರಬಲ ಅಸ್ತ್ರವೂ ಹೌದು ಎಂಬ ತಿಳುವಳಿಕೆ ಅವಳಿಗೀಗ ಇದೆ. ಆದರೂ 'ಬರಹ'ದ ಸಾಧ್ಯತೆಗಳೆಲ್ಲವನ್ನೂ ಬಳಸಲು ಅವಳು ಸದ್ಯಕ್ಕೆ ಸಮರ್ಥಳಾಗಿ

ದ್ದಾಳೆಯೇ ಎಂದರೆ ಖಚಿತವಾಗಿ 'ಹೌದು' ಎನ್ನಲಾಗದು. ಅದರ ಶೋಧದಲ್ಲಿ ಅವಳಿನ್ನೂ ಬಹುದೂರ ಸಾಗಬೇಕಾಗಿದೆ. ಆ ಮಾತೇನೇ ಇರಲಿ. ತನ್ನ ಅಭಿಜಾತ ಸಾಮರ್ಥ್ಯವೋ ಎಂಬಂತಿದ್ದ ಕಥನ ಕಲೆಯ ಅಭಿವ್ಯಕ್ತಿಯನ್ನಂತೂ ಅವಳು ಈ ಹೊಸ ಮಾಧ್ಯಮದಲ್ಲೂ ಪುನಃ ಸಾಧಿಸಿಕೊಳ್ಳತೊಡಗಿದ್ದಾಳೆ. ಇಂಥಾ ಕಥಾ ಸಾಹಿತ್ಯಕ್ಕೆ ಈಚಿನ ಏಳೆಂಟು ದಶಕಗಳ ಚರಿತ್ರೆ ಮಾತ್ರವೇ ಇರುವುದು.

ಈ ಹಿನ್ನೆಲೆಯಲ್ಲಿಯೇ ನಮ್ಮ ಕನ್ನಡ ಲೇಖಕಿಯರ ಕಥಾಸಾಹಿತ್ಯದ ಗುಣಲಕ್ಷಣಗಳನ್ನು ಗ್ರಹಿಸಲು, ಅವುಗಳನ್ನು ಮೌಲ್ಯಮಾಪನ ಮಾಡಲು ಯತ್ನಿಸಬೇಕಾಗುತ್ತದೆ. ಒಟ್ಟು ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಮಹಿಳಾ ಸಾಹಿತ್ಯವನ್ನು ಪ್ರತ್ಯೇಕವಾಗಿ ಪರಿಶೀಲಿಸಬೇಕಾದ ಈ ಅಗತ್ಯವನ್ನು ರಿಯಾಯತಿಯ ಕೋರಿಕೆ ಎಂದು ಪರಿಗಣಿಸುವುದು ನ್ಯಾಯವಾಗಲಾರದು. ತನ್ನ ಅಭಿವ್ಯಕ್ತಿಗಾಗಿ ಬಳಸುತ್ತಿರುವ ಸಾಧನವನ್ನು ತನ್ನ ಅಗತ್ಯಕ್ಕೆ ಅನುಗುಣವಾಗಿ ನಮ್ಯವಾಗಿಸುವ ಪ್ರಯೋಗಶೀಲ ಹಂತದಲ್ಲಿ ಮಹಿಳೆ ಇದ್ದಾಳೆ. ಸಾಹಿತ್ಯದ ಇತರ ಪ್ರಕಾರಗಳಿಗಿಂತ ಅವಳಿಗೆ ಕಥಾಪ್ರಕಾರವೇ ಆಪ್ತವಾಗಿ ಒದಗುತ್ತಿರುವಂತಿದೆ. ಆದರೆ ಈ ಪ್ರಕಾರವನ್ನು ಬಳಸುವಲ್ಲಿ ಲಿಖಿತ ಪರಂಪರೆ ಅವಳೆದುರು ಒಂದು ಸಮಸ್ಯೆಯನ್ನು ಸೃಷ್ಟಿಸುತ್ತದೆ. ಲಿಖಿತ ಪರಂಪರೆಯಲ್ಲಿ 'ಕರ್ತೃತ್ವ' (authorship) ನಿಗದಿಗೊಳ್ಳುವ ಕ್ರಿಯೆ ಪ್ರಧಾನ ಲಕ್ಷಣವಾಗುತ್ತದೆ. ಈ ಕ್ರಮ ಮಹಿಳಾ ಅಭಿವ್ಯಕ್ತಿಗೆ ಸವಾಲನ್ನು ಹಾಕುತ್ತದೆ. ಮಹಿಳೆಯ ದಿನಗಳೆಯಬೇಕಾದ ನಮ್ಮ ಸಾಮಾಜಿಕ ಸಂದರ್ಭಗಳು ಅವಳಿಗೆ ತನ್ನನ್ನು ತಾನು ನಿರಾಳವಾಗಿ ಅಭಿವ್ಯಕ್ತಗೊಳಿಸಿಕೊಳ್ಳುವ ಧೈರ್ಯವನ್ನು ಕೊಡುವುದಿಲ್ಲ. ಮೌಖಿಕ ಪರಂಪರೆಯಲ್ಲಿ ಅವಳು ತನ್ನನ್ನು ಮರೆಯಾಗಿಸಿಕೊಳ್ಳುವುದು ಸಾಧ್ಯವಿದ್ದುದರಿಂದ ತನ್ನ ಅನಿಸಿಕೆಗಳನ್ನು ಹಿಂಜರಿಕೆಯಿಲ್ಲದೆ, ಭಯವಿಲ್ಲದೆ, ನಿರಾಳವಾಗಿ ಹೇಳಿಕೊಳ್ಳುವುದೂ ಸಾಧ್ಯವಾಗುತ್ತಿತ್ತು. ಅವಳ ಕತೆಗಳು ಅವಳ ಸಮುದಾಯದ ಕತೆಗಳೇ ಆಗಿರುತ್ತಿದ್ದವೇ ಹೊರತು, ಅವಳ ಕತೆ ಮಾತ್ರವೆಂದೇನೂ ಆಗುತ್ತಿರಲಿಲ್ಲ. ಆದರೆ ನಮ್ಮ ಆಧುನಿಕ ಚಿಂತನಾ ಕ್ರಮ ಬರಬರುತ್ತಾ ವ್ಯಕ್ತಿಕೇಂದ್ರಿತವಾದುದಾಗುತ್ತಾ ಕತೆ ಹೇಳುವುದೆಂದರೆ ಅವರಿವರ ಕತೆಗಳಾಗಿರದೆ ಆತ್ಮಕಥಾನಕಗಳೇ ಆಗಬೇಕಿದೆ. ಕಥಾ ಸಾಹಿತ್ಯವು ಒಗ್ಗೂಡಿಸಿಕೊಳ್ಳುತ್ತಿರುವ ಈ ಆತ್ಮಕಥಾನಕದ ಬಗೆ ಮಹಿಳೆಗೆ ಹಲವು ಮುಜುಗರ, ಹಿಂಜರಿಕೆಗಳನ್ನು ತರುವ ಗುಣದ್ದಾಗಿದೆ. ನಮ್ಮ ಲೇಖಕಿಯರು ಈ ತೊಡಕಿನಿಂದ ಪಾರಾಗಲು ತಮ್ಮ ಸಹಜ ಅಭಿವ್ಯಕ್ತಿ ಸಾಮರ್ಥ್ಯವಾದ 'ಕಥಾಪ್ರಕಾರ'ವನ್ನೇ ಬಿಟ್ಟುಕೊಟ್ಟು, ಹೆಚ್ಚು ಹೆಚ್ಚು ಕವನಗಳನ್ನು ಬರೆಯತೊಡಗಿದ್ದೂ ಇದೆ. ಪರೋಕ್ಷವಾಗಿ ಅಲ್ಲಿಯೂ ಅವರು ಕತೆಗಳನ್ನೇ ಹೇಳಿದ್ದು. ಸಾಹಿತ್ಯದ ಪ್ರಧಾನ ವಾಹಿನಿಯಲ್ಲಿ ಮಹಿಳೆಯರ ಕವನಗಳನ್ನು ಗಂಭೀರವಾಗಿ ಪರಿಗಣಿಸಿದ್ದು ತೀರಾ ಕಡಿಮೆಯೇ. ಈ ಪ್ರಕಾರದಲ್ಲಿ ಮಹತ್ವದ ಸಾಧನೆಗಳನ್ನು ಮಾಡುವಲ್ಲಿ ಮಹಿಳೆಯರು ಇನ್ನೂ ಕಷ್ಟಪಡುತ್ತಿದ್ದಾರೆಂದೇ ತೋರುತ್ತದೆ. ಮತ್ತೆ ಇತ್ತೀಚೆಗೆ ನಮ್ಮ ಲೇಖಕಿಯರು ಕಥಾ ಪ್ರಕಾರವನ್ನೇ ಆಯ್ದುಕೊಳ್ಳುತ್ತಿದ್ದಾರೆ, ಆಪ್ತವಾಗಿ ನಿರ್ವಹಿಸುವುದು ಅವರಿಗೆ

ಸಾಧ್ಯವಾಗುತ್ತಿದೆ. ನಮ್ಮ ಪ್ರಧಾನ ವಾಹಿನಿಯ ಸಾಹಿತ್ಯದಲ್ಲಿ ಎರಡನೆಯ ದರ್ಜೆಯದೆಂದು ಸರಿಸಲು ಸಾಧ್ಯವಿಲ್ಲದ ಗಂಭೀರ ಸಾಧನೆಗಳನ್ನು ಮಾಡುತ್ತಿದ್ದಾರೆ.

ಮಹಿಳೆಯರ ಕಥಾಸಾಹಿತ್ಯದ ಚರಿತ್ರೆಯಲ್ಲಿ ನಡೆಯುತ್ತಾ ಬಂದ ಈ ಪ್ರಯೋಗಗಳ ಸ್ವರೂಪವನ್ನು ಗ್ರಹಿಸುವುದು ಒಂದು ಉಪಯುಕ್ತ ಅಧ್ಯಯನವಾಗಬಲ್ಲದು. ಏಕೆಂದರೆ ಈ ಪ್ರಯೋಗಗಳು ಪರಿಶುದ್ಧವಾಗಿ ಸಾಹಿತ್ಯಕ ಸ್ವರೂಪದವೆಂದೇನಲ್ಲ. ಈ ಪುರುಷಪ್ರಧಾನ ಸಮಾಜವ್ಯವಸ್ಥೆಯ ಹಲವು ಸಂಗತಿಗಳು ಈ ಪ್ರಯೋಗಗಳ್ನು ನಿಯಂತ್ರಿಸಿವೆ. ಮೌಖಿಕ ಪರಂಪರೆಯಲ್ಲಿದ್ದ ಅಭಿವ್ಯಕ್ತಿಸ್ವಾತಂತ್ರ್ಯ ಹಾಗೂ ನಿರಾಳತೆಯ ಸಾಧ್ಯತೆಗಳು ಲಿಖಿತ ಪರಂಪರೆಯಲ್ಲಿ ಕಳೆದುಹೋಗಿ, ಸಾಮಾಜಿಕ ನಿರೀಕ್ಷೆ ಹಾಗೂ ಬದ್ಧತೆಗಳನ್ನು ಘೋಷಣೆಗಳೊಂದಿಗೆ ನಿರ್ವಹಿಸಬೇಕಾದ ಇಕ್ಕಟ್ಟುಗಳಲ್ಲಿ ಅವು ನಲುಗಿದವು.

ಇಂತಹ ಆತಂಕ ತಲ್ಲಣಗಳ ನಡುವೆಯೇ ಮಹಿಳೆ ಅಭಿವ್ಯಕ್ತಿಯ ದಾರಿಗಳನ್ನು ರೂಪಿಸಿಕೊಳ್ಳತೊಡಗಿ, ಪ್ರಧಾನ ಸಾಹಿತ್ಯ ಚರ್ಚೆಗಳು ನಿರಂತರವಾಗಿ ಮುಂದಿಡುತ್ತಲೇ ಬಂದ ಹಲವು ಸವಾಲುಗಳನ್ನು ಎದುರಿಸಬೇಕಾಯಿತು. ಕನ್ನಡ ಲೇಖಕಿಯರ ಕಥಾಸಾಹಿತ್ಯವು ಆಕಾರ ತಳೆದು ಬಂದ ಕತೆಯುದ್ದಕ್ಕೂ ಈ ಪ್ರಶ್ನೆ ತಳುಕು ಹಾಕಿಕೊಂಡಿದೆ. ಪ್ರಸ್ತುತದ ನಮ್ಮ ಲೇಖಕಿಯರ ಕಥಾಸಾಹಿತ್ಯಕ್ಕೆ ಹೆಚ್ಚೆಂದರೆ ಏಳೆಂಟು ದಶಕಗಳಷ್ಟು ಚರಿತ್ರೆಯನ್ನಷ್ಟೆ ಗುರುತಿಸಬಹುದು. ೧೯೦೮ರ ವೇಳೆಗೆ ಶಾಂತಾಬಾಯಿ ನೀಲಗಾರ ಎಂಬಾಕೆ ಬರೆದ ಸದ್ಗುಣಿ ಕೃಷ್ಣಾಬಾಯಿ (ಉತ್ತಮ ಗೃಹಿಣಿ) ಎಂಬ ಕಾದಂಬರಿ ದೊರೆಯುತ್ತದೆಯಾದರೂ ಅಲ್ಲಿಂದಾಚಿನ ಐದುವರ್ಷಗಳಿಗೆ ೧೯೧೩ರಲ್ಲಿ ನಂಜನಗೂಡಿನ ತಿರುಮಲಾಂಬ ಅವರು ಕತೆಕಾದಂಬರಿಗಳನ್ನು ಬರೆದು ಪ್ರಕಟಿಸುವುದನ್ನು ಆರಂಭಿಸಿದ್ದರೊಂದಿಗೆ ಕನ್ನಡ ಮಹಿಳಾ ಸಾಹಿತ್ಯದ ಸ್ಪಷ್ಟ ಆರಂಭವಾಗುತ್ತದೆನ್ನಬಹುದು. ಕನ್ನಡದ ಪ್ರಧಾನ ಸಾಹಿತ್ಯ ಚರಿತ್ರೆ ಮತ್ತು ವಿಮರ್ಶೆಗಳೇನೂ ಇದನ್ನೊಂದು ಗಮನಾರ್ಹ ವಿಷಯವೆಂದು ಪರಿಗಣಿಸಲಿಲ್ಲ. ಮಾಸ್ತಿಯವರಂತಹ ಹಿರಿಯರು ಕೂಡ ತಿರುಮಲಾಂಬ ಅವರ ಸಾಧನೆಯನ್ನು ಗುಮಾನಿಯಿಂದಲೇ ನೋಡಿದ್ದು. ಅವರೇ ಮುಂದೆ ಮಹಿಳೆಯರ ಬರಹಗಳಿಗೆ ಪ್ರೋತ್ಸಾಹವನ್ನು ಕೊಟ್ಟರೆಂಬುದು ಬೇರೆ ಮಾತು. ಆದರೆ ಸ್ವತಃ ತಿರುಮಲಾಂಬ ಅವರ ಆತ್ಮವಿಶ್ವಾಸದಲ್ಲೇನೂ ಕೊರತೆ ಇರಲಿಲ್ಲ. ಅವರು ಇಂಥಾ ಗುಮಾನಿಗಳನ್ನು ಸ್ಪಷ್ಟವಾಗಿ ಉತ್ತರಿಸಿದರು. ಕತೆಕಾದಂಬರಿಗಳಲ್ಲದೆ ವಿಮರ್ಶೆ, ವೈಚಾರಿಕ ಲೇಖನಗಳನ್ನು ಬರೆದರು. ಇಷ್ಟೆಲ್ಲಾ ಆದರೂ ಮಹಿಳೆಯರನ್ನು ಕುರಿತ ಅವರ ಗ್ರಹಿಕೆ, ಚಿಂತನೆಗಳಲ್ಲಿ ವ್ಯಕ್ತವಾದ ಮಹಿಳಾ ಸಂವೇದನೆಗಳನ್ನು ಸಂದೇಹಗಳೊಂದಿಗೇ ಗುರುತಿಸಬೇಕಾಗುತ್ತದೆ. ೧೯೭೩ರಲ್ಲಿ ಮೊದಲ ಬಾರಿಗೆ ಮಹಿಳೆಯರ ಕಥೆಗಳ ಸಂಗ್ರಹ 'ರಂಗವಲ್ಲಿ' ಪ್ರಕಟವಾಯಿತು. ಅದರ ಸಂಪಾದಕರು ತಮ್ಮ ಮುನ್ನುಡಿಯಲ್ಲಿ 'ಸ್ತ್ರೀಯರ ಬಾಳನ್ನು ಕುರಿತು ಸಮಾಜವು ಉತ್ತರ ಕೊಡಬೇಕಾಗಿರುವ ನೂರು ಪ್ರಶ್ನೆಗಳನ್ನು ಸುಲಭವಾಗಿ ಪ್ರತಿಪಾದಿಸಬಹುದು.... ಹೆಣ್ಣಿನ ಬಾಳನ್ನು ಕುರಿತು... ಹೆಣ್ಣಿನ ಅನುಭವದಿಂದ ಹೇಳಬಹುದಾದ ಅಭಿಪ್ರಾಯವಿರುತ್ತದೆ....' ಎಂದು ಹೇಳುತ್ತಾರೆ.

ಆದರೆ ತಿರುಮಲಾಂಬ ಅವರು ಸ್ವತಃ ವಿಧವಾ ಸಮಸ್ಯೆಯಂತಹ ತೀವ್ರ ಮಹಿಳಾ ಪ್ರಶ್ನೆಗಳನ್ನು ಎದುರಿಸಿದ ಅನುಭವವಿದ್ದವರಾದರೂ, ಅವುಗಳನ್ನು ಪುರುಷ ಚಿಂತನೆಗಿಂತ ಭಿನ್ನವಾಗಿ ಉತ್ತರಿಸಲಿಲ್ಲವೇಕೆ ಎಂಬುದನ್ನು ನಾವು ಅಂದಿನ ಅವರ ಸಾಮಾಜಿಕ ಸಂದರ್ಭವನ್ನು ಪರಿಗಣಿಸಿಯೇ ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಮಹಿಳಾ ಸಮಸ್ಯೆಯನ್ನೇ ಕುರಿತು ಚಿಂತಿಸಿದರೂ, ಮಹಿಳಾ ಸಂವೇದನೆಯನ್ನು ಒಳಗೊಳ್ಳದೆ ಹೋಗುತ್ತಿದ್ದ ನಮ್ಮ ಮಹಿಳಾ ಅಭಿವ್ಯಕ್ತಿಗಳನ್ನು ಗಮನಿಸಿಯೇ ನಮ್ಮ ಸಾಹಿತ್ಯ ಚಿಂತಕರು ಮಹಿಳಾ ಸಂವೇದನೆಯ ಅಸ್ತಿತ್ವದ ಬಗೆಗೇ ಸಂದೇಹಗೊಂಡಿರಬಹುದು. ೧೯೬೩ರಷ್ಟು ಈಚೆಗೆ ಪ್ರಕಟವಾದ ತುಳಸಿ ವೇಣುಗೋಪಾಲ ಅವರ 'ಮುಂಜಾವಿಗೆ ಕಾದವಳು' ಕಥಾ ಸಂಗ್ರಹಕ್ಕೆ ಮುನ್ನುಡಿ ಬರೆಯುತ್ತಾ ಶ್ರೀ ಯಶವಂತ ಚಿತ್ತಾಲರು 'ಸ್ತ್ರೀಗೆ ಅವಳದೇ ಆದ ಅನುಭವ ಲೋಕವಿದೆ, ಅವಳಿಗೆ ವಿಶಿಷ್ಟವಾದ ಪ್ರತ್ಯೇಕವಾದ ಸಂವೇದನೆಯಿಲ್ಲ....' ಎಂದಿದ್ದಾರೆ. ಸಾಮಾಜಿಕ ಸಂದರ್ಭಗಳು ಮಹಿಳೆಗೆ ಒಡ್ಡುವ ಸಮಸ್ಯೆಗಳನ್ನು ಅನುಭವಿಸುವುದು ಒಂದು ಮಾತು. ಅದರ ಸ್ವರೂಪವನ್ನು ಸಕಾರಣವಾಗಿ ವಿವರಿಸಿಕೊಳ್ಳುವುದು ಸ್ವಲ್ಪ ಪ್ರಗತಿಯನ್ನು ತೋರುವ ಚಿಂತನೆಯ ಮಾತು. ಆದರೆ ಇಷ್ಟಕ್ಕೆ ಅವಳ ಸಮಸ್ಯೆಗೊಂದು ದಾರಿ ಕಂಡಂತಾಗುವುದಿಲ್ಲ. ಆ ಚಿಂತನೆ ಮುಂದುವರಿದು ಪರಿಹಾರಗಳನ್ನು ಕಂಡರೆ ಮಾತ್ರ ವಾಸ್ತವದಲ್ಲಿ ಉಪಯೋಗವಾದೀತು. ಸಮಸ್ಯೆಯ ಅನುಭವದೊಳಗೇ ಸಿಲುಕಿರುವ ಜೀವಿಗೆ ಆ ಪರಿಸ್ಥಿತಿಯನ್ನು ಕುರಿತ ಸಂವೇದನೆಗಳಿರುವುದಿಲ್ಲ ಎಂದರೇನು? ಅವುಗಳನ್ನು ಅಭಿವ್ಯಕ್ತಿ ಮಾಡುವಲ್ಲಿ ಹಲವು ತೊಡಕುಗಳಿರಬಹುದು. ಅದು ಮಾತಿಗೆ, ಬರಹಕ್ಕೆ ಅತೀತವಾದುದಿರಬಹುದು, ಅಥವಾ ಮಾತಿಗೆ, ಬರಹಕ್ಕೆ ಬಂದ ಮೇಲಿನ ಸಾಮಾಜಿಕ ಪ್ರತಿಕ್ರಿಯೆಗಳಿಗೆ, ಪರಿಣಾಮಗಳಿಗೆ ಹೆದರಿ ಆ ಸಂವೇದನೆ ಮೌನವನ್ನು ತಾಳಬಹುದು. ಅಂದರೆ ಮಹಿಳೆ ತನ್ನ ಸಂವೇದನೆಗಳಿಗೆ ಸೂಕ್ತವಾಗಿ ತನ್ನ ಮಾತು ಬರಹಗಳು ಒದಗಿಬರುವಂತೆ ನಡೆಸಬೇಕಾದ ಬೌದ್ಧಿಕ ಪ್ರಯತ್ನಗಳೂ ಬೇಕು, ಜೊತೆಗೆ ಸಾಮಾಜಿಕ ಪ್ರತಿಕ್ರಿಯೆ, ಪರಿಣಾಮಗಳನ್ನು ಎದುರಿಸುವ ರೀತಿಯಲ್ಲಿ ತನ್ನನ್ನು ಸ್ಥಾಪಿಸಿಕೊಳ್ಳುವ ಧೈರ್ಯ, ಸಾಹಸಗಳನ್ನು ಅವಳು ಕೂಡಿಸಿಕೊಳ್ಳಬೇಕು. ನಮ್ಮ ಲೇಖಕಿಯರು ಕ್ರಮಾಗತವಾಗಿ ಹೀಗೆ ಮಾಡುತ್ತಾ ಬಂದ ಕತೆಯನ್ನೇ ನಾವು ಉದ್ದಕ್ಕೂ ಗಮನಿಸುವುದು. ತಿರುಮಲಾಂಬ ಅವರ ನಂತರ ಬಂದ ಶ್ಯಾಮಲಾ ಬೆಳಗಾಂವಕರ, ಕೊಡಗಿನ ಗೌರಮ್ಮ, ಕಲ್ಯಾಣಮ್ಮ, ಸರಸ್ವತಿಬಾಯಿ ರಾಜವಾಡೆ, ಎಚ್.ವಿ. ಸಾವಿತ್ರಮ್ಮ ಮುಂತಾದವರು ಒಂದು ಹೆಜ್ಜೆ ಮುಂದೆ ಹೋಗಿ ಮಹಿಳಾ ಸಮಸ್ಯೆಗಳನ್ನು ಪ್ರತಿಪಾದಿಸುವುದು ಸಾಧ್ಯವಾದುದಕ್ಕೆ ಅಂದಿನ ಸಾಮಾಜಿಕ ಪರಿಸ್ಥಿತಿಗಳಲ್ಲಿ ಉಂಟಾಗುತ್ತಿದ್ದ ಹಲವು ಬದಲಾವಣೆಗಳೂ ಕಾರಣ. ಶಿಕ್ಷಣ, ಉದ್ಯೋಗ ಮುಂತಾದ ಕ್ಷೇತ್ರಗಳಲ್ಲಿ ಮಹಿಳೆಯರಿಗೆ ಪ್ರವೇಶ ದೊರೆಯುತ್ತಾ, ಮಹಿಳೆಯರಲ್ಲಿ ಜಾಗ್ರತಿ, ಧೈರ್ಯ ಸಾಹಸಗಳು ಕೂಡಿಕೊಳ್ಳ ತೊಡಗಿದ್ದವು. ಯಾವುದೇ ಸಮಸ್ಯೆಯನ್ನು ಗುರುತಿಸಲು ಸೂಕ್ಷ್ಮ ಸಾಮಾಜಿಕ ಅವಲೋಕನ, ಗ್ರಹಿಕೆ ಹಾಗೂ ಸಹಾನುಭೂತಿಗಳು ಬೇಕು. ಸುಧಾರಣಾವಾದಿ, ಮಾನವತಾವಾದಿ

ಮನೋಭಾವದ ಪುರುಷರಾಗಲಿ, ಸ್ತ್ರೀಯರಾಗಲೀ ಇಂಥಾ ಚಿಂತನೆಯನ್ನು ಮಾಡಲು ಸಮರ್ಥರೇ ಆಗಿರುತ್ತಾರೆ. ಆದರೆ ಈ ಚಿಂತನೆಯು ಜಾರಿಗೊಳ್ಳಬೇಕಾದ ಮುಂದಿನ ಹಂತವಾಗಿ ಪರಿಹಾರಗಳನ್ನು ಸೂಚಿಸಬೇಕಾದರೆ ಮಾತ್ರ ಸೂಕ್ಷ್ಮ ಮುಂದಾಲೋಚನೆಯೊಂದಿಗೆ, ಈಗಾಗಲೇ ಸ್ಥಿರೀಕರಣಗೊಂಡಿರುವ ಸಾಮಾಜಿಕ ಚಿಂತನೆ ಹಾಗೂ ಮೌಲ್ಯಗಳನ್ನು ಕೆದಕುವ, ಪ್ರಶ್ನಿಸುವ, ಎದುರು ಹಾಕಿಕೊಳ್ಳುವ ಧೈರ್ಯ ಸಾಹಸಗಳೂ ಬೇಕಾಗುತ್ತವೆ. ಮಹಿಳೆಯರ ಪರವಾಗಿ ನಿಂತು ಇಂಥಾ ಚಿಂತನೆಗಳನ್ನು ಪ್ರತಿಪಾದಿಸುವ ಪುರುಷರಿಗೂ ಅವರ ಈ ಕೆಲಸಕ್ಕೆ ವಿರೋಧ ಹುಟ್ಟುತ್ತದಾದರೂ, ಕೊನೆಗೊಮ್ಮೆ ಅವರ ಉದಾರತೆ ಹಾಗೂ ಸಹೃದಯತೆಗೆ ಮೆಚ್ಚುಗೆಯೇ ದೊರೆಯುತ್ತದೆ. ಅವರು ಮಹಾತ್ಮರೆನಿಸಲೂ ಬಹುದು. ಆದರೆ ಸ್ವತಃ ಮಹಿಳೆಯರು ಪ್ರತಿಪಾದಿಸುವ ಈ ಚಿಂತನೆಗೆ ಎದುರಾಗುವ ಸಾಮಾಜಿಕ ವಿರೋಧ ಆ ಕ್ಷಣದ ಅವರ ಬದುಕನ್ನೇ ಕ್ರೂರವಾಗಿ ನಡುಗಿಸಬಹುದಾದದ್ದು. ಈ ವಿರೋಧದ ಸ್ವರೂಪವನ್ನು ಸ್ವಲ್ಪವೇ ಗ್ರಹಿಸಿಕೊಂಡರೂ ಯಾವ ಮಹಿಳಾ ಸಂವೇದನೆಗೂ ಆಕಾರ ತಳೆಯುವ ಧೈರ್ಯ ಬರಲಾರದು. ಅವು ಮೂಕವಾಗಿ ಉಳಿಯುವುದನ್ನೇ ಆಯ್ದು ಕೊಳ್ಳಬಹುದು. ಅದರಲ್ಲೂ ಈ ಸಂವೇದನೆಯನ್ನು ಸಾರ್ವಜನಿಕವಾಗಿ, ಕರ್ತೃತ್ವದ ಜವಾಬ್ದಾರಿಯನ್ನು ಒಪ್ಪಿ ಅಭಿವ್ಯಕ್ತಿಸುವ ಮಾತು ಇನ್ನೂ ದೂರವೇ ಉಳಿಯುತ್ತದೆ. ನಮ್ಮ ಲೇಖಕಿಯರು ಕೂಡ ಮೊದಲ ಹಂತದಲ್ಲಿ ಸಮಸ್ಯೆಯನ್ನು ಗುರುತಿಸುವಷ್ಟಕ್ಕೆ, ಎರಡನೆಯ ಹಂತದಲ್ಲಿ ಪರ್ಯಾಯವಾಗಿ ನಿರಪಾಯಕರವಾದ ಸುಧಾರಣವಾದಿ ಪರಿಹಾರ ಮಾರ್ಗಗಳನ್ನು ಪ್ರಸ್ತಾಪಿಸುವಷ್ಟಕ್ಕೆ ಮೆಲ್ಲನೆಯ ಹೆಜ್ಜೆಗಳನ್ನೇ ಇಟ್ಟಿದ್ದು. ಸುಮಾರು ೫೦, ೬೦ರ ದಶಕಗಳಲ್ಲಿ ಬರೆದ ನಮ್ಮ ತ್ರಿವೇಣಿ, ಅನುಪಮಾ ನಿರಂಜನ, ಗೀತಾ ಕುಲಕರ್ಣಿ, ರಾಜಲಕ್ಷ್ಮಿ ಎನ್. ರಾವ್. ಮುಂತಾದವರ ಕತೆಕಾದಂಬರಿಗಳಲ್ಲೂ ಈ ಸಮಸ್ಯೆ ಸ್ಥೂಲವಾಗಿ ಹೀಗೆಯೇ ಉಳಿಯಿತು. ಇಂಥಾ ಸಂದರ್ಭಗಳನ್ನು ನಮ್ಮ ಪ್ರಧಾನಸಾಹಿತ್ಯ ವಿಮರ್ಶೆ ವಿಶೇಷವಾಗಿ ಮಹಿಳಾಪರ ದೃಷ್ಟಿಕೋನದಿಂದ ಗ್ರಹಿಸಬೇಕಾದ ಅಗತ್ಯವಿತ್ತು. ಆದರೆ ಅದು ಈ ಅಗತ್ಯವನ್ನು ರಿಯಾಯಿತಿ ಎಂದು ಹೆಸರಿಸಿ ಅವಮಾನಕರವಾಗಿ ಪ್ರಶ್ನಿಸಿತು. ದ್ವಂದ್ವ, ತುಮುಲಗಳಲ್ಲಿ ಸಿಲುಕಿದ್ದ ಲೇಖಕಿಯರೂ ಕೂಡ ಏನೂ ತೋಚದೆ ಈ ಪ್ರಶ್ನೆಯನ್ನು ಮೈಮೇಲೆ ಹಾಕಿಕೊಂಡು ಉತ್ತರ ಹೇಳುವ ಪ್ರಯತ್ನಗಳಲ್ಲಿ ದಣಿದರು. ಡಾ. ಗಿರಡ್ಡಿ ಗೋವಿಂದರಾಜರಂಥ ಪ್ರಗತಿಪರ ವಿಮರ್ಶಕರೂ ಕೂಡ 'ನಮ್ಮ ಲೇಖಕಿಯರು ಗುರುತರವಾದ ಸಮಸ್ಯೆಗಳನ್ನು ವಸ್ತುವಾಗಿ ಆಯ್ಕೆ ಮಾಡಿದರೂ, ಸೂಕ್ತವಾಗಿ ಅವುಗಳನ್ನು ನಿರ್ವಹಿಸುವ ತಂತ್ರವನ್ನು ರೂಪಿಸದೆ ಸೋಲುತ್ತಾರೆ.' ಎಂದು ಆರೋಪ ಮಾಡಿಬಿಡುತ್ತಾರೆ. ಆದರೆ ಲೇಖಕಿಯರನ್ನು ಬೌದ್ಧಿಕತೆ ಅಥವಾ ತಂತ್ರಗಾರಿಕೆಯ ಅಭಾವ ಕಾಡಿತ್ತೆಂಬುದಕ್ಕಿಂತ, ಅವರ ಮೇಲೆ ಸವಾರಿ ಮಾಡುತ್ತಿದ್ದ ಸಾಮಾಜಿಕ ನಿಯಂತ್ರಣದ ಪ್ರಶ್ನೆ ಸರಳವಾದದ್ದಲ್ಲ ಎಂಬುದನ್ನು ಗ್ರಹಿಸಬೇಕು. ಇಂದು ಸಮಾಜದಲ್ಲಿ ಮಹಿಳೆ ತನ್ನ ಪ್ರಶ್ನೆಗಳನ್ನು ಇಷ್ಟಿಷ್ಟೆ ಎದುರಿಸುತ್ತಾ, ದಾರಿಕಾಣುತ್ತಾ ಹೆಜ್ಜೆ ಹಾಕುತ್ತಿರುವುದರ ಪರಿಣಾಮಗಳ ಲಕ್ಷಣಗಳನ್ನು ನಮ್ಮ ಲೇಖಕಿಯರ ಕತೆ ಕಾದಂಬರಿಗಳು ತೋರುತ್ತಿರುವ ಧಾರ್ಷ್ಟ್ಯಗಳಲ್ಲಿ ಕಾಣಬಹುದು.

ಮಹಿಳಾ ಚಿಂತನೆ ಎಂಬುದು ಮಹಿಳಾ ಸಂವೇದನೆಯೊಂದಿಗೆ ಸಮರ್ಥವಾಗಿ ಅಭಿವ್ಯಕ್ತಿಗೊಳ್ಳಲು ಇರುವ ಸಾಮಾಜಿಕ ಸಮಸ್ಯೆಗಳನ್ನು ಪರಿಗಣಿಸದೆ ಮಹಿಳಾ ಸಂವೇದನೆಯ ಅಸ್ತಿತ್ವವನ್ನೇ ಪ್ರಶ್ನಿಸುವುದು ಸರಿಯಲ್ಲ. ವೀಣಾ ಶಾಂತೇಶ್ವರ ಅವರು ಎಲ್ಲ ಸಾಮಾಜಿಕ ಅನಿಸಿಕೆ ಅಭಿಪ್ರಾಯಗಳೂ ಬೆಚ್ಚಿಬೀಳುವಂತೆ ತಮ್ಮ ಮಹಿಳಾ ಸಂವೇದನೆಯನ್ನು ನೇರವಾಗಿ ಅಭಿವ್ಯಕ್ತಿಸಿದ ಕೂಡಲೇ ಸಾಹಿತ್ಯಕ್ಷೇತ್ರದಲ್ಲಿ ದೊರಕಿದ ಪ್ರತಿಕ್ರಿಯೆಗಳ ಸ್ವರೂಪವನ್ನು ಗಮನಿಸಿದರೆ ಮಹಿಳಾ ಸಂವೇದನೆಯ ಅಭಿವ್ಯಕ್ತಿಯು ಕೊಟ್ಟ ಶಾಕ್‌ನ ಸಾಮರ್ಥ್ಯ ತಿಳಿಯುತ್ತದೆ. ಅಲ್ಲಿಂದ ಮುಂದೆ ವೈದೇಹಿ, ಬಾನು ಮುಷ್ತಾಕ್, ನೇಮಿಚಂದ್ರ, ಕಮಲಾ ಹಮ್ಮಿಗೆ, ಎಂ. ಎಸ್. ವೇದಾ, ಸಾರಾ ಮುಂತಾದ ನಮ್ಮ ಈಗಿನ ಲೇಖಕಿಯರು ಬೇರೆ ಬೇರೆ ಹದಗಳಲ್ಲಿ ಈ ಧೈರ್ಯದ ಅಭಿವ್ಯಕ್ತಿಯನ್ನು ಗಟ್ಟಿಗೊಳಿಸುತ್ತಿದ್ದಾರೆ.

ಲೇಖಕಿಯರ ಕತೆಗಳನ್ನು ವಿಮರ್ಶಿಸುವ ಸಂದರ್ಭಗಳನ್ನು ನಮ್ಮ ವಿಮರ್ಶಕರು ಸಾಹಿತ್ಯ ಚರ್ಚೆ ಎಂಬುದಕ್ಕಿಂತ ಸಾಮಾಜಿಕ ಚರ್ಚೆಗಳಾಗಿ ಕಂಡದ್ದೇ ಹೆಚ್ಚು ಎಂಬುದು ಕೂಡ ಮಹಿಳೆಯರ ಅಭಿವ್ಯಕ್ತಿಯ ಬಗೆಗಿರುವ ಸಾಮಾಜಿಕ ನಿರೀಕ್ಷೆ ಹಾಗೂ ಒತ್ತಡಗಳನ್ನು ಸೂಚಿಸುವ ಅಂಶವೇ ಆಗಿದೆ. ಮಹಿಳಾ ಸಾಹಿತ್ಯವನ್ನು ಕುರಿತಂತೆ ಹೀಗೊಂದು ವಿಭಿನ್ನ ಅಳತೆಗೋಲು ಬಳಕೆಯಾಗುವುದರ ಹಿನ್ನೆಲೆಯಲ್ಲಿ ಕೆಲಸ ಮಾಡುವ ಸ್ಥಾಪಿತ ಸಾಮಾಜಿಕ ಚಿಂತನೆಯನ್ನು ಗಮನದಲ್ಲಿರಿಸಿಕೊಳ್ಳುವುದು ಅಗತ್ಯ. ನಮ್ಮ ಲೇಖಕಿಯರಿಗೆ ಒಟ್ಟು ಮಹಿಳಾ ಸಮುದಾಯಕ್ಕೆ ದಕ್ಕುತ್ತಿರುವ ಸಾಮಾಜಿಕ ಮನ್ನಣೆಯ ಬೆನ್ನಲ್ಲೇ ತಮ್ಮ ಅಭಿವ್ಯಕ್ತಿ ಸಾಮರ್ಥ್ಯವನ್ನು ಒಗ್ಗೂಡಿಸಿಕೊಳ್ಳಲು ಸಾಧ್ಯವಾಗುತ್ತಿರುವುದು. ಮೊದಲೇ ಹೇಳಿದಂತೆ ಮಹಿಳೆಗೆ ಕಥನಕಲೆ ಅಭಿಜಾತವಾಗಿ ದೊರಕೊಂಡದ್ದು. ಲಿಖಿತ ಪರಂಪರೆಯ ಹೊಸ ಚೌಕಟ್ಟುಗಳಲ್ಲಿ ಕೂಡ ತನ್ನ ಈ ಸಾಮರ್ಥ್ಯವನ್ನು ದುಡಿಸಿಕೊಳ್ಳಲು ಸರಿಯಾದ ವಾತಾವರಣವನ್ನು ಅವಳೀಗ ರೂಪಿಸಿಕೊಳ್ಳಲು ಶಕ್ತಳಾಗುತ್ತಿದ್ದಾಳೆ.

ನಮ್ಮ ಕನ್ನಡ ಲೇಖಕಿಯರು ಎದುರಿಸುತ್ತಿರುವ ಸವಾಲುಗಳನ್ನು ಎಷ್ಟೆಲ್ಲ ವಿಶದವಾಗಿ ವಿವರಿಸಿದ ಮೇಲೂ ಹಲವರಿಗೆ ಒಂದು ಅನುಮಾನ ಕಾಡುತ್ತದೆ. ಬಂಗಾಲಿ, ಹಿಂದಿ, ಪಂಜಾಬಿ ಭಾಷೆಗಳಲ್ಲಿ ಮಹಾಶ್ವೇತಾದೇವಿ, ಆಶಾಪೂರ್ಣದೇವಿ, ಅಮೃತಾಪ್ರೀತಂರಂತಹ ಲೇಖಕಿಯರು ಪುರುಷರಿಗೆ ಸರಿಸಮಾನ ಸಾಧನೆಗಳನ್ನು ಮಾಡಿ ಜ್ಞಾನಪೀಠ ಪ್ರಶಸ್ತಿಗಳಿಂದ ಪುರಸ್ಕೃತರಾಗುತ್ತಿದ್ದಾರಲ್ಲವೇ? ಅವರಿಗೆ ನಮ್ಮ ಲೇಖಕಿಯರಿಗಿಂತ ಭಿನ್ನವಾದ ಸಾಮಾಜಿಕ ಪರಿಸರವೇನಿದೆ? ಅಂಥಾ ಮಹಿಳೆಯರ ಸಾಹಿತ್ಯಸಾಧನೆ ನಮ್ಮಲ್ಲೇಕೆ ಆಗುತ್ತಿಲ್ಲ? ಇಂಥಾ ಕೆಲವು ಪ್ರಶ್ನೆಗಳಿಗೆ ಈವರೆಗೆ ನಡೆಸಿದ ಸಾಹಿತ್ಯಚರಿತ್ರೆಯ ವಿಶ್ಲೇಷಣೆಯಲ್ಲೇ ಉತ್ತರವಿದೆ. ನಮ್ಮ ಲೇಖಕಿಯರು ನಮ್ಮ ಸಾಮಾಜಿಕ ಸಂದರ್ಭಗಳು ಒಡ್ಡುತ್ತಿರುವ ಸವಾಲುಗಳನ್ನು ಆತ್ಮವಿಶ್ವಾಸದಿಂದ ಎದುರಿಸುವ ಛಾತಿಯನ್ನು ಕ್ರಮೇಣವಾಗಿ ಕೂಡಿಸಿಕೊಳ್ಳಲು ಸಮರ್ಥರಾಗುತ್ತಿದ್ದಾರೆ. ತಮ್ಮ ಅಸ್ಮಿತೆಯನ್ನು ಗುರುತಿಸಿಕೊಳ್ಳುವ, ದೃಢಪಡಿಸಿಕೊಳ್ಳುವ ಅವರ ಈ ಯತ್ನ ಯಶಸ್ಸು ಕಾಣುತ್ತಾ ಹೋದಂತೆಲ್ಲ ಅದರ ಪರಿಣಾಮಗಳು ಅವರ

ಅಭಿವ್ಯಕ್ತಿಗಳಲ್ಲಿ ಖಂಡಿತವಾಗಿಯೂ ಕೂಡಿಕೊಳ್ಳುತ್ತವೆ. ಈ ಪ್ರಕ್ರಿಯೆ ಈಗಾಗಲೇ ಪ್ರಾರಂಭವಾಗಿರುವುದರ ಸ್ಪಷ್ಟ ಸೂಚನೆಗಳು ನಮಗೆ ಸಿಗುತ್ತಿವೆ. ಅನೇಕ ಚಾರಿತ್ರಿಕ ಹಾಗೂ ವೈಯಕ್ತಿಕ ಕಾರಣ ಹಾಗೂ ಸಾಮರ್ಥ್ಯಗಳಿಂದ ಸ್ವಲ್ಪ ಮುಂಚಿತವಾಗಿ ಮಹಾಶ್ವೇತಾದೇವಿ, ಆಶಾಪೂರ್ಣದೇವಿ, ಅಮೃತಾಪ್ರೀತಂರಂಥವರು ಮುನ್ನಡೆದ ಹಾದಿಯಲ್ಲಿ ನಮ್ಮ ಲೇಖಕಿಯರೂ ಹೆಜ್ಜೆಗಳನ್ನಿಡುತ್ತಿದ್ದಾರೆ. ಇಂದಲ್ಲಾ ನಾಳೆ ನಮ್ಮಲ್ಲೂ ಜ್ಞಾನಪೀಠ ಪ್ರಶಸ್ತಿಗಳಿಂದ ಪುರಸ್ಕೃತರಾಗುವ ಲೇಖಕಿಯರು ಬರಲಿದ್ದಾರೆ. ಈ ಆಶಾಭಾವನೆ ಆಧಾರವಿಲ್ಲದ ಹಗಲುಗನಸೆಂದು ಭಾವಿಸಬೇಕಾಗಿಲ್ಲ. ಈ ಒಂದು ಸಕಾರಾತ್ಮಕ ಹಾಗೂ ಸಕಾರಣವಾದ ಆಶಯಕ್ಕೆ, ನಮ್ಮ ಕತೆಗಾರ್ತಿಯರು ನಿದರ್ಶನಗಳಾಗುತ್ತಿದ್ದು, ಈ ಹಿಂದೆ ಮಹಿಳಾ ಸಾಹಿತ್ಯವನ್ನು ರಿಯಾಯತಿಗಳೊಂದಿಗೆ ವಿಮರ್ಶಿಸಬೇಕು ಎಂಬ ಗೇಲಿ, ಅನುಕಂಪ, ಅಪಹಾಸ್ಯದ ಮಾತುಗಳನ್ನಾಡುತ್ತಿದ್ದ ಪ್ರಧಾನಧಾರೆಯವರೆನಿಸಿದ ವಿಮರ್ಶಕರು ಇದೀಗ ನಮ್ಮ ಈ ಕತೆಗಾರ್ತಿಯರನ್ನು ಗಂಭೀರವಾಗಿ ಪರಿಗಣಿಸಲೇಬೇಕಾದ ಅನಿವಾರ್ಯವನ್ನು ಒಪ್ಪಿಕೊಳ್ಳುತ್ತಿದ್ದಾರೆಂಬುದು ಈ ಮಾತಿಗೆ ಸ್ಪಷ್ಟಸಾಕ್ಷಿಯಾಗಿದೆ.

# ನಮ್ಮ ಅಭಿವೃದ್ಧಿ ಯೋಜನೆಗಳು ಮತ್ತು ಮಹಿಳೆ

ಈ ಸಂಚಿಕೆಯಲ್ಲಿ ಮಹಿಳೆಯರನ್ನು ನಮ್ಮ ಅಭಿವೃದ್ಧಿ ಯೋಜನೆಗಳು ಪರಿಭಾವಿಸಿರುವ, ಗ್ರಹಿಸಿರುವ, ಒಳಗೊಂಡಿರುವ ಬಗೆಗಗಳನ್ನು ಕುರಿತು ಚರ್ಚೆಯನ್ನು ಬೆಳೆಸಲಾಗಿದೆ. ದೇಶದ ಪ್ರಗತಿಗಾಗಿ ಹಲವು ಅಭಿವೃದ್ಧಿ ಯೋಜನೆಗಳನ್ನು ರೂಪಿಸಿ ಜಾರಿಗೊಳಿಸಲಾಗುತ್ತಿದೆ. ಆದರೆ ಒಟ್ಟಾರೆಯಲ್ಲಿ ಮಹಿಳೆಯರ ಸ್ಥಿತಿಗತಿಗಳನ್ನು ಅವಲೋಕಿಸಿದರೆ ಈ ಅಭಿವೃದ್ಧಿ ಚಿಂತನೆಗಳು ಮಹಿಳೆಯರನ್ನು ನ್ಯಾಯಯುತವಾಗಿ ಪರಿಗಣಿಸಿವೆಯೇ ಎಂಬ ಸಂದೇಹ, ಪ್ರಶ್ನೆಗಳು ಎದುರಾಗುತ್ತವೆ. ಹೀಗೇಕೆ? ಮೂಲಭೂತವಾಗಿ ಅಭಿವೃದ್ಧಿ ಚಿಂತನೆಗಳಲ್ಲೇ ಈ ದೋಷವಿದೆಯೇ ಅಥವಾ ಅದು ಜಾರಿಗೊಳ್ಳುವ ಹಂತಗಳಲ್ಲಿ ತೊಡಕುಗಳಿರಬಹುದೇ ಎಂಬ ವಿಶ್ಲೇಷಣೆ ಅಗತ್ಯವಾಗಿದೆ.

ಈ ಹಿನ್ನೆಲೆಯಲ್ಲಿ ಒಟ್ಟಾರೆ ಅಭಿವೃದ್ಧಿ ಯೋಜನೆಗಳನ್ನು ಕುರಿತ ತಾತ್ತ್ವಿಕ ಚಿಂತನೆಯನ್ನು ಮಂಡಿಸಲಾಗಿದೆ. ಇದರ ಅನ್ವಯಿಕ ಮಾಹಿತಿಗಾಗಿ ಕೃಷಿ ಹಾಗೂ ಉದ್ಯೋಗ ಉದ್ದಿಮೆಯ ಕ್ಷೇತ್ರಗಳನ್ನು ಕುರಿತ ಅಭಿವೃದ್ಧಿ ಯೋಜನೆಗಳನ್ನು ಪರಿಶೀಲಿಸಲಾಗಿದೆ. ಇದನ್ನು ಮುಂದುವರೆಸಿ ವಿವಿಧ ಕ್ಷೇತ್ರಗಳಿಗೆ ಅನ್ವಯಿಸಿದಂತೆ ಅಧ್ಯಯನಗಳನ್ನು ಮಾಡಬಹುದಾಗಿದೆ.

(ಸಂ)

# ಮಹಿಳೆ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳು

ಟಿ.ಆರ್. ಚಂದ್ರಶೇಖರ

## ಪ್ರಸ್ತಾವನೆ

ಅಭಿವೃದ್ಧಿ ಪ್ರಕ್ರಿಯೆಯ ಲಿಂಗಸಂಬಂಧಿ ಆಯಾಮವನ್ನು ಗುರುತಿಸುವ ಕೆಲಸವನ್ನು ಸಮಾಜ ವಿಜ್ಞಾನಗಳು ೭೦ ಮತ್ತು ೮೦ರ ದಶಕಗಳಲ್ಲಿ ದೊಡ್ಡದಾಗೆ ಪ್ರಾರಂಭಿಸಿದವು. ಅಭಿವೃದ್ಧಿಯ ಲಿಂಗ ಸಂಬಂಧಿ ಆಯಾಮಗಳನ್ನು ಕುರಿತ ಅಧ್ಯಯನಗಳಿಗೆ ಒಂದು ಗಣ್ಯತೆಯನ್ನು, ಸೈದ್ಧಾಂತಿಕ ನೆಲೆಗಟ್ಟನ್ನು ಗಳಿಸಿಕೊಟ್ಟ ಕೀರ್ತಿ ನೊಬೆಲ್ ಪ್ರಶಸ್ತಿ ಪುರಸ್ಕೃತ ಖ್ಯಾತ ಅರ್ಥಶಾಸ್ತ್ರಜ್ಞ ಅಮರ್ತ್ಯಸೇನ್ ಅವರಿಗೆ ಸಲ್ಲಬೇಕು. ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಮಹಿಳೆಯರು ಹೆಚ್ಚು ಹೆಚ್ಚು ತೊಡಗುವಂತೆ ಮಾಡುವ ಕೆಲಸ ಸರ್ಕಾರದ ನೆಲೆಯಲ್ಲಿ ನಡೆಯುತ್ತಿದೆ. ಮಹಿಳೆಯರ ಅಭಿವೃದ್ಧಿಗಾಗಿಯೇ ವಿಶೇಷ ಕಾರ್ಯಕ್ರಮಗಳನ್ನು ರೂಪಿಸಲಾಗುತ್ತಿದೆ. ಪ್ರಥಮ ಬಾರಿಗೆ ಆರನೆಯ ಪಂಚವಾರ್ಷಿಕ ಯೋಜನೆಯ ಕರಡಿನಲ್ಲಿ 'ಮಹಿಳೆ ಮತ್ತು ಅಭಿವೃದ್ಧಿ' ಎಂಬ ಅಧ್ಯಾಯವನ್ನು ಸೇರಿಸಲಾಯಿತು. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರ ಪಾತ್ರ-ಗಾತ್ರಗಳ ಮಹತ್ವ ಎಷ್ಟು, ಗುರುತ್ವ ಎಷ್ಟು ಎಂಬುದನ್ನು ತೋರಿಸಿಕೊಡುವಲ್ಲಿ ಮಹಿಳಾ ಚಳುವಳಿಗಳು ನೀಡಿದ ಕಾಣಿಕೆ ಕಡಿಮೆಯೇನಲ್ಲ. ಅಭಿವೃದ್ಧಿ ಮತ್ತು ಮಹಿಳೆ ನಡುವಿನ ಸಂಬಂಧ ಕುರಿತಂತೆ ಅಧ್ಯಯನಗಳು, ಚರ್ಚೆ ೧೯೭೦ರ ದಶಕದ ಪ್ರಾರಂಭದಲ್ಲಿ ಅಂತಾರಾಷ್ಟ್ರೀಯ ಮಟ್ಟದಲ್ಲೂ ಪ್ರಾರಂಭ ವಾಯಿತು. ಮಹಿಳೆ ಮತ್ತು ಅಭಿವೃದ್ಧಿ ಕುರಿತಂತೆ ಈಗಾಗಲೇ ನಾಲ್ಕು ಅಂತಾರಾಷ್ಟ್ರೀಯ ಸಮಾವೇಶಗಳು ನಡೆದಿವೆ. ಮೊದಲನೆಯದು ೧೯೭೫ರಲ್ಲಿ ಮೆಕ್ಸಿಕೊದಲ್ಲಿ ನಡೆದರೆ, ಎರಡನೆಯದು ೧೯೮೦ರಲ್ಲಿ ಕೂಪನ್‌ಹೇಗನ್‌ನಲ್ಲಿ ನಡೆಯಿತು. ಮೂರನೆಯದು ನೈರೋಬಿಯಲ್ಲಿ ೧೯೮೫ರಲ್ಲಿ ಜರುಗಿತು. ೧೯೯೫ರಲ್ಲಿ ಬೀಜಿಂಗ್‌ನಲ್ಲಿ ನಡೆದ ನಾಲ್ಕನೆಯ ಸಮಾವೇಶ ಹುಟ್ಟುಹಾಕಿದ ಚರ್ಚೆ-ವಿವಾದಗಳು ಇನ್ನೂ ಮನಸ್ಸಿನಲ್ಲಿ ಹಸಿರಾಗಿವೆ (ಶಾಂತಿ ಜಯಸೂರ್ಯ ಮತ್ತು ಡಿ.ಸಿ. ಜಯಸೂರ್ಯ ೧೯೯೯: ೨೭-೨೮)

ಅಭಿವೃದ್ಧಿ ಕಾರ್ಯಕ್ರಮಗಳ ಮೂಲದಲ್ಲಿ ಅಭಿವೃದ್ಧಿಯನ್ನು ಕುರಿತ ಸಿದ್ಧಾಂತಗಳು ಕೆಲಸ ಮಾಡುತ್ತಿರುವುದನ್ನು ಒತ್ತಿ ಹೇಳುವ ಅವಶ್ಯಕತೆ ಇಲ್ಲ. ಲಾಗಾಯ್ತಿನಿಂದಲೂ ಅಭಿವೃದ್ಧಿ ಕುರಿತ ಸಿದ್ಧಾಂತಗಳು ಮಹಿಳೆಯನ್ನು ಕುರಿತಂತೆ, ಲಿಂಗ ಸಂಬಂಧಗಳನ್ನು ಕುರಿತಂತೆ

ಕುರುಡಾಗಿದ್ದವು-ಬರಡಾಗಿದ್ದವು ಎಂಬುದು ಇಂದು ರಹಸ್ಯವಾಗೇನು ಉಳಿದಿಲ್ಲ. ಲಿಂಗ ನಿರಪೇಕ್ಷತೆಯು ಅಭಿವೃದ್ಧಿ ಕುರಿತ ಸಿದ್ಧಾಂತಗಳ ಮೂಲ ಹೇತುವಾಗಿದೆ. ಮಹಿಳಾ ಚಳವಳಿಗಳು ನಡೆಸಿದ ಅವಿರತ ಸಂಘರ್ಷದ ಪರಿಣಾಮವಾಗಿ, ಅವುಗಳ ಒತ್ತಡದ ಪ್ರತಿಫಲವಾಗಿ ಅಭಿವೃದ್ಧಿ ಕುರಿತ ಚರ್ಚೆಯಲ್ಲಿ ಮಹಿಳೆಯು ಗೋಚರಿಸತೊಡಗಿದ್ದಾಳೆ.

ಮಹಿಳೆ ಬಗ್ಗೆ ಉಂಟಾಗಿರುವ ಆಸಕ್ತಿಯ ಆಸ್ಫೋಟದ ಹಿಂದಿನ ರಾಜಕಾರಣವನ್ನು ನಾವು ಅರ್ಥಮಾಡಿಕೊಳ್ಳಬೇಕಾಗಿದೆ. ಅಭಿವೃದ್ಧಿಯನ್ನು ಕುರಿತ ಸಿದ್ಧಾಂತಗಳು ಮತ್ತು ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯನ್ನು ಕುರಿತಂತೆ ಆಸಕ್ತಿ ತಳೆದಿದ್ದರೂ ಅವು ಲಿಂಗ ಸಂಬಂಧಗಳ ಬಗ್ಗೆ ತಮ್ಮ ನಿರಾಸಕ್ತಿಯನ್ನು ಮುಂದುವರಿಸಿವೆ. 'ಮಹಿಳೆ' ಮತ್ತು 'ಲಿಂಗ ಸಂಬಂಧಗಳು' ಇವೆರಡು ಭಿನ್ನನೆಲೆಗಟ್ಟನ್ನು ಹೊಂದಿದ್ದಾವೆ.

ಅಭಿವೃದ್ಧಿಯನ್ನು ಕುರಿತ ಸಿದ್ಧಾಂತಗಳು ಹಾಗೂ ಅವುಗಳನ್ನು ಆಧರಿಸಿ ರೂಪುಗೊಂಡಿರುವ ಅಭಿವೃದ್ಧಿ ಕಾರ್ಯಕ್ರಮಗಳು 'ಜೈವಿಕ ನಿಯತಿ' ಚೌಕಟ್ಟನ್ನು ಹೊಂದಿದ್ದಾವೆ. ಮಹಿಳೆಯರ ದೃಷ್ಟಿಯಿಂದ ಇದೊಂದು ಅತ್ಯಂತ ಅಪಾಯಕಾರಿ ನಿಲುವಾಗಿದೆ. ಅಭಿವೃದ್ಧಿ ಮತ್ತು ಮಹಿಳೆಯರ ನಡುವಿನ ಸಂಬಂಧವು ಸಾಮಾಜಿಕ ನೆಲೆಯನ್ನು ಹೊಂದಿದೆ ಎಂಬುದನ್ನು ತೋರಿಸಿಕೊಡಬೇಕಾಗಿದೆ. ಜೈವಿಕನಿಯತಿಯು ಲಿಂಗ ಸಂಬಂಧೀ ಶ್ರಮ ವಿಭಜನೆಗೂ ಆಧಾರವಾಗಿದೆ ಎಂದು ಹೇಳಲಾಗುತ್ತಿದೆ. ಆದರೆ ಇದು ಸಾಮಾಜಿಕವಾಗಿ ಕಟ್ಟಿಕೊಂಡ ಒಂದು ರಚನೆ ಎಂಬುದನ್ನು ಕಂಡು ಕೊಳ್ಳಬೇಕಾಗಿದೆ. ಮಹಿಳೆ-ಪುರುಷ ಎಂಬ ಸಂಗತಿಯುಗಳು ಜನಸಂಖ್ಯಾವಾಚಿ ನುಡಿಗಳಾಗಿದ್ದಾವೆ. ಆದರೆ ಲಿಂಗ ಸಂಬಂಧಗಳು ಎಂಬುದು ಸಾಮಾಜಿಕ ವಾಸ್ತವವಾಗಿದೆ.

ಮಹಿಳೆಯರು ಇಂದು ಆರ್ಥಿಕ ಚಟುವಟಿಕೆಗಳಲ್ಲಿ ಹೆಚ್ಚು ಹೆಚ್ಚಾಗಿ ಸಹಭಾಗಿ ಗಳಾಗುತ್ತಿದ್ದಾರೆ. ಈ ಆರ್ಥಿಕ ಚಟುವಟಿಕೆಗಳಲ್ಲಿನ ಸಹಭಾಗಿತ್ವವು ಕೇವಲ ಉದ್ಯೋಗ ನೆಲೆಯನ್ನು ಹೊಂದಿದೆಯೇ ವಿನಾ 'ವೃತ್ತಿ' ನೆಲೆಯನ್ನು ಹೊಂದಿಲ್ಲ. ಉದ್ಯೋಗದಲ್ಲಿ ಮಹಿಳೆಯರು ಸಹಭಾಗಿಗಳಾಗುತ್ತಿದ್ದರೂ ಅವರು ತಮ್ಮ ಕೌಟಂಬಿಕ ಜವಾಬ್ದಾರಿಯನ್ನು ಬಿಟ್ಟುಕೊಡುವ ಸ್ಥಿತಿಯಲ್ಲಿಲ್ಲ. ಜೈವಿಕ ನಿಯತಿಯ ನಿರ್ದೇಶನದಲ್ಲಿ ರೂಪುಗೊಂಡಿರುವ ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯರ ಮೇಲೆ 'ಸಂತಾನೋತ್ಪತ್ತಿ ಹಾಗೂ ಆರ್ಥಿಕೋತ್ಪಾದನೆ' ಎಂಬ ಎರಡೂ ಹೊಣೆಗಳನ್ನು ಹೇರುತ್ತಿವೆ. ಜೈವಿಕ ನಿಯತಿಯು ಸಂತಾನೋತ್ಪತ್ತಿ ಜವಾಬ್ದಾರಿಯನ್ನು, ಕೌಟಂಬಿಕ ಜವಾಬ್ದಾರಿಯನ್ನು ಮಹಿಳೆಯರಿಗೆ ಕಟ್ಟಿ ಹಾಕಿ ಬಿಟ್ಟಿದೆ. ಆಧುನೀಕರಣ, ಮಹಿಳಾ ಚಳುವಳಿಗಳು ಮುಂತಾದವು ಅವಳು ಆರ್ಥಿಕೋ ತ್ಪಾದನೆಯಲ್ಲಿ, ಉದ್ಯೋಗದಲ್ಲಿ, ಆರ್ಥಿಕ ಅಭಿವೃದ್ಧಿ ಕಾರ್ಯ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಒತ್ತಾಯಿಸುತ್ತಿವೆ. ಈ ಇಮ್ಮಡಿ ಒತ್ತಡಗಳನ್ನು ಮಹಿಳೆ ಹೇಗೆ ನಿಭಾಯಿಸುತ್ತಿದ್ದಾಳೆ?

ಮಹಿಳೆಯರನ್ನು ಅಭಿವೃದ್ಧಿ ಚಟುವಟಿಕೆಗಳಲ್ಲಿ ಹೆಚ್ಚಾಗಿ ತೊಡಗುವಂತೆ ಮಾಡಲು ಪ್ರಯತ್ನ ನಡೆಯುತ್ತಿದೆ. ಉದ್ಯೋಗ ಕೈಗೊಳ್ಳಲು ಅವರನ್ನು ಪ್ರೇರೇಪಿಸಲಾಗುತ್ತಿದೆ. ಇದರ ಒಳ ಅರ್ಥವೇನು? ಇದುವರೆವಿಗೂ ಮಹಿಳೆಯರು ಕೆಲಸಮಾಡುತ್ತಿಲ್ಲ ಎಂದು ಅರ್ಥವೇನು? ಇವರು ಐಡ್ಲಾಗಿದ್ದಾರೆ ಎಂದು ಇದರ ಅರ್ಥವೇನು?. ಈ ಬಗೆಯ ಸೂಕ್ಷ್ಮ ಸಂಗತಿಗಳನ್ನು ಪರಿಶೀಲಿಸಬೇಕಾಗಿದೆ.

ನಮ್ಮ ದೇಶದ ಅಭಿವೃದ್ಧಿಗೆ ಕಂಟಕವಾಗಿರುವ ಬಹು ಮುಖ್ಯ ಸಂಗತಿಯೆಂದರೆ ಜನಸಂಖ್ಯೆಯ ಬೆಳವಣಿಗೆ ಎಂದು ಹೇಳಲಾಗುತ್ತಿದೆ. ಅದಕ್ಕಾಗಿ ೧೯೫೨ರಲ್ಲಿ ನಾವು ಕುಟುಂಬ ಯೋಜನಾ ಕಾರ್ಯಕ್ರಮ ಜಾರಿಗೆ ತಂದಿದ್ದೇವೆ. ಈ ಕುಟುಂಬ ಯೋಜನಾ ಕಾರ್ಯಕ್ರಮವು ಇಂದು ಸಂಪೂರ್ಣವಾಗಿ ಮಹಿಳೆಯರನ್ನು ಒಳಗೊಂಡು ಕೇವಲ ಸಂತಾನಹರಣ ಶಸ್ತ್ರಕ್ರಿಯೆಯ ಕಾರ್ಯಕ್ರಮವಾಗಿಬಿಟ್ಟಿದೆ. ಇಲ್ಲಿ ಮಹಿಳೆಯರ ಆರೋಗ್ಯ ಮುಖ್ಯ ವಾಗುವುದಿಲ್ಲ. ಜನಸಂಖ್ಯೆಯ ಬೆಳವಣಿಗೆಯೆಂಬುದನ್ನು ಕೇವಲ ಜೈವಿಕ ಸಂಗತಿಯನ್ನಾಗಿ ನೋಡುತ್ತಿರುವುದರಿಂದ ಅದರ ಸಾಮಾಜಿಕ ನೆಲೆಗಟ್ಟು ಮುಖ್ಯವಾಗುತ್ತಿಲ್ಲ. ಜನಸಂಖ್ಯೆಯ ಬೆಳವಣಿಗೆಯನ್ನು ತಡೆಯುವ ಜವಾಬ್ದಾರಿಯನ್ನು ಮಹಿಳೆಯರ ಮೇಲೆ ಹೇರಲಾಗಿದೆ.

### 'ಮಹಿಳೆ' ಮತ್ತು 'ಲಿಂಗಸಂಬಂಧಗಳು'

ಈ ಮೊದಲು ತಿಳಿಸಿರುವಂತೆ ಅಭಿವೃದ್ಧಿಯನ್ನು ಕುರಿತ ಸಿದ್ಧಾಂತಗಳು ಹಾಗೂ ಅವುಗಳಿಂದ ನಿಷ್ಪನ್ನವಾದ ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯನ್ನು ಜೈವಿಕ ನಿಯತಿಯ ನೆಲೆಯಲ್ಲಿ ಪರಿಭಾವಿಸಿಕೊಳ್ಳಲು ಪ್ರಯತ್ನಿಸುತ್ತಿವೆ. ಇಲ್ಲಿ ಮಹಿಳೆಯು ತಾಯಿಯಾಗಿ, ಹೆಂಡತಿಯಾಗಿ, ಮಗಳಾಗಿ ಮುಖ್ಯವಾಗುತ್ತಾಳೆ ವಿನಾ ಒಬ್ಬ ವ್ಯಕ್ತಿಯಾಗಿಯಲ್ಲ. ಮಹಿಳೆಯನ್ನು ಒಂದು ಸಾಮಾಜಿಕ ಘಟಕವಾಗಿ ಪರಿಭಾವಿಸಿಕೊಳ್ಳಲು ಸಮಾಜ ವಿಜ್ಞಾನಗಳು ಸಿದ್ಧವಿಲ್ಲ. 'ಜೈವಿಕ ನಿಯತಿ'ಯು ಮುಖ್ಯವಾಗಿ ಬಿಟ್ಟು, 'ಸಾಮಾಜಿಕ ಚೌಕಟ್ಟು' ಅಮುಖ್ಯ ವಾಗಿರುವುದರಿಂದ ಅಭಿವೃದ್ಧಿಯನ್ನು ಕುರಿತ ಸಿದ್ಧಾಂತಗಳು 'ಮಹಿಳೆ' ಬಗ್ಗೆ ಅಸಕ್ತಿ ಬೆಳಸಿಕೊಂಡು ಲಿಂಗ ಸಂಬಂಧಗಳ ಬಗ್ಗೆ ನಿರಾಸಕ್ತಿ ಬೆಳೆಸಿಕೊಂಡಿವೆ. ಗೃಹವಾರ್ತೆ ಜವಾಬ್ದಾರಿಯೆಲ್ಲ ಮಹಿಳೆಯರದ್ದು ಎಂಬುದು ಜೈವಿಕ ನಿಯತಿಯಾಗಿ ಬಿಟ್ಟಿದೆ. ಅಭಿವೃದ್ಧಿಯನ್ನು ಕುರಿತ ಸಿದ್ಧಾಂತಗಳು ಸಂತಾನೋತ್ಪತ್ತಿ ಸಂಬಂಧಿ ಜವಾಬ್ದಾರಿಗಳು ಮಹಿಳೆಯರಿಗೆ ಮೀಸಲು ಎಂಬುದನ್ನು ಒಪ್ಪಿಕೊಂಡು ಬಿಟ್ಟಿವೆ. ಈ ಜವಾಬ್ದಾರಿಗಳಿಂದ ಪುರುಷರನ್ನು ಮುಕ್ತಗೊಳಿಸಿವೆ. ಈ ಬಗೆಯ ವರ್ಗೀಕರಣವು ಜೈವಿಕ ನಿಯತಿ ಎಂದು ಹೇಳಲಾಗುತ್ತಿದೆ.

ಆದರೆ ಸಂತಾನೋತ್ಪತ್ತಿ ದುಡಿಮೆಯನ್ನು ಮಹಿಳೆಯರಿಗೆ ನಿಗದಿ ಪಡಿಸಿರುವುದರ ಹಿಂದೆ ಸಾಮಾಜಿಕ ಸಂಗತಿಗಳಿದ್ದಾವೆ. ಸಂತಾನೋತ್ಪತ್ತಿ ಮತ್ತು ಆರ್ಥಿಕೋತ್ಪಾದನೆ ನಡುವಿನ ಶ್ರಮ ವಿಭಜನೆಯು ಸಾಮಾಜಿಕವಾಗಿ ಕಟ್ಟಿಕೊಂಡ ಒಂದು ವ್ಯವಸ್ಥೆಯೇ ವಿನಾ ಜೈವಿಕ

ನಿಯತಿಯಲ್ಲ. ಸಾಮಾಜಿಕವಾಗಿ ಕಟ್ಟಿಕೊಂಡ ಲಿಂಗ ಸಂಬಂಧಿ ಶ್ರಮ ವಿಭಜನೆಗೆ ಜೈವಿಕ ನಿಯತಿಯ ಬಣ್ಣವನ್ನು ಬಳಿಯಲು ಪ್ರಯತ್ನಿಸಲಾಗಿದೆ.

ಅಭಿವೃದ್ಧಿಯನ್ನು ಕುರಿತ ಸಿದ್ಧಾಂತಗಳ ಮೂಲದಲ್ಲಿ ಪುರುಷಶಾಹಿಯು ಕೆಲಸ ಮಾಡುತ್ತಿದೆ. ಜೈವಿಕ ನಿಯತಿಯ ಚೌಕಟ್ಟಿನಲ್ಲೇ ಅಭಿವೃದ್ಧಿಯನ್ನು ಕುರಿತ ಸಿದ್ಧಾಂತಗಳು ರೂಪುಗೊಂಡಿದ್ದಾವೆ. ಸಂತಾನೋತ್ಪತ್ತಿ ಜವಾಬ್ದಾರಿ ಜೈವಿಕವಾದುದು ಮತ್ತು ಅದು ಮಹಿಳೆಯರಿಗೆ ಮೀಸಲಾದದ್ದು ಎಂಬುದನ್ನು ಒಪ್ಪಿಕೊಂಡೇ ಅಭಿವೃದ್ಧಿಯನ್ನು ಕುರಿತ ಸಿದ್ಧಾಂತಗಳು ರೂಪುಗೊಂಡಿದ್ದಾವೆ.

### ದುಡಿಮೆಯ ನಿರ್ವಚನ

ಸಂತಾನೋತ್ಪತ್ತಿ ಚಟುವಟಿಕೆಗಳಿಗೆ ಮಹಿಳೆಯರನ್ನು ಕಟ್ಟಿಹಾಕಿರುವುದಕ್ಕೂ, ಜೈವಿಕ ನಿಯತಿಯನ್ನು ಇದಕ್ಕೆ ಆಧಾರವನ್ನಾಗಿ ಮಾಡಿರುವುದಕ್ಕೂ ಮತ್ತು ಸಮಾಜ ವಿಜ್ಞಾನಗಳು ದುಡಿಮೆಯನ್ನು ನಿರ್ವಚಿಸಿ ಕೊಂಡಿರುವ ಬಗೆಗೂ ಪರಸ್ಪರ ಸಂಬಂಧವಿದೆ. ದುಡಿಮೆಯನ್ನು ಕುರಿತ ನಿರ್ವಚನಕ್ಕೂ ಮತ್ತು ಅಭಿವೃದ್ಧಿಗೆ ಸಂಬಂಧಿಸಿದಂತೆ ಮಹಿಳೆಯರ ಅಧೀನ ಸ್ಥಿತಿಗೂ ಸಂಬಂಧವಿದೆ. ದುಡಿಮೆಯನ್ನು ಜೈವಿಕ ನಿಯತಿಯ ಚೌಕಟ್ಟಿನಲ್ಲೆ ನಿರ್ವಚಿಸಲಾಗಿದೆ. ದುಡಿಮೆಯ ನಿರ್ವಚನದಲ್ಲಿ ಮಾರುಕಟ್ಟೆ ಮತ್ತು ವಿನಿಮಯಗಳು ಮಹತ್ವ ಪಡೆದುಕೊಂಡಿವೆ. ಮಾರುಕಟ್ಟೆಯನ್ನು ಪ್ರವೇಶಿಸುವ ಮತ್ತು ವಿನಿಮಯ ಮಹತ್ವವುಳ್ಳ ಚಟುವಟಿಕೆಗಳು ಮಾತ್ರ ದುಡಿಮೆ-ಆರ್ಥಿಕೋತ್ಪಾದನೆ ಎನಿಸಿಕೊಳ್ಳುತ್ತವೆ. ಅತ್ಯಂತ ವಿಚಿತ್ರ ಸಂಗತಿಯೆಂದರೆ ಇಲ್ಲಿ ವಸ್ತುವಿನಲ್ಲಿ ಅಡಕವಾಗಿರುವ ಗುಣಕ್ಕಿಂತ ಅದಕ್ಕೆ ಆರೋಪಿಸುವ ಗುಣವು ಹೆಚ್ಚಿನ ಮಹತ್ವ ಪಡೆದುಕೊಂಡು ಬಿಡುತ್ತದೆ. ಒಂದು ವಸ್ತುವಿಗೆ ವಿನಿಮಯ ಮಹತ್ವವು ಮಾರುಕಟ್ಟೆ ಪ್ರವೇಶಿಸಿದಾಗ ಪ್ರಾಪ್ತವಾಗುತ್ತದೆ. ಮಾರುಕಟ್ಟೆ ಪ್ರವೇಶಿಸದ ವಸ್ತು ಎಷ್ಟೇ ಮಹತ್ವ ವಾಗಿದ್ದರು ಅದಕ್ಕೆ ವಿನಿಮಯ ಮಹತ್ವ ದತ್ತವಾಗುವುದಿಲ್ಲ. ಅಭಿವೃದ್ಧಿ ಕುರಿತ ಸಿದ್ಧಾಂತಗಳು ಮತ್ತು ಅಭಿವೃದ್ಧಿ ಕಾರ್ಯಕ್ರಮಗಳು ಮಾರುಕಟ್ಟೆ ಪ್ರವೇಶಿಸುವ ಮತ್ತು ವಿನಿಮಯ ಮಹತ್ವವುಳ್ಳ ಚಟುವಟಿಕೆಗಳನ್ನು ಮಾತ್ರ ಆರ್ಥಿಕೋತ್ಪಾದನೆಯೆಂದು ಪರಿಗಣಿಸುತ್ತವೆ. ಇಂತಹ ಚಟುವಟಿಕೆಗಳಲ್ಲಿ ತೊಡಗುವ ಶ್ರಮವೇ ದುಡಿಮೆ. ಇಲ್ಲಿ ವಸ್ತುವಿನ ಉಪಯುಕ್ತತೆ ಮುಖ್ಯವಾಗುವುದಿಲ್ಲ. ಮಾರುಕಟ್ಟೆ ಪ್ರವೇಶಿಸುವ, ವಿನಿಮಯಗುಣವುಳ್ಳ ಚಟುವಟಿಕೆಗಳಿಗೆ ಆರ್ಥಿಕ ಮನ್ನಣೆ ಮತ್ತು ಮಾಪನದ ಗುಣವಿರುತ್ತದೆ. ಈ ಬಗೆಯಲ್ಲಿ ದುಡಿಮೆಯನ್ನು ನಿರ್ವಚಿಸಿಕೊಂಡಿರುವುದರಿಂದ ಕುಟುಂಬದೊಳಗೆ ಮಹಿಳೆಯರು ಕೈಗೊಳ್ಳುವ ಚಟುವಟಿಕೆಗಳು ಅರ್ಥಶಾಸ್ತ್ರದಲ್ಲಿ ಮತ್ತು ಅಭಿವೃದ್ಧಿ ಕುರಿತ ಚರ್ಚೆಯಲ್ಲಿ ದುಡಿಮೆ ಎನಿಸಿಕೊಳ್ಳುವುದಿಲ್ಲ. ಉಪಯೋಗಿ ಮಹತ್ವವುಳ್ಳ ಚಟುವಟಿಕೆಗಳು ಇಲ್ಲಿ ಆರ್ಥಿಕೋತ್ಪಾದನೆ ಎನಿಸಿಕೊಳ್ಳುವುದಿಲ್ಲ. ಉಪಯೋಗಿ ಮಹತ್ವವುಳ್ಳ ಚಟುವಟಿಕೆಗಳಲ್ಲಿ ಉತ್ಪಾದಿಸಿದ ಉತ್ಪನ್ನ ಮತ್ತು ಉತ್ಪಾದಿಸಿದ ಉತ್ಪಾದಕ ಇವುಗಳನ್ನು ಪರಸ್ಪರ ಬೇರ್ಪಡಿಸಲು ಸಾಧ್ಯವಿಲ್ಲ.

ಉದಾಹರಣೆಗೆ ಮಕ್ಕಳನ್ನು ಹಡೆಯುವುದು, ಮಗುವಿಗೆ ಹಾಲುಣಿಸುವುದು, ಮಕ್ಕಳಲಾಲನೆ ಮುಂತಾದವು. ಈ ಚಟುವಟಿಕೆಗಳಿಗೆ ವಿನಿಮಯ ಮಹತ್ವವಿಲ್ಲದಿರುವುದರಿಂದ ಅವುಗಳ ಮಾಪನ ಸಾಧ್ಯವಿಲ್ಲ. ಈ ಬಗೆಯ ದುಡಿಮೆಗೆ 'ಕ್ರಯ'ವೆಂಬುದಿರುವುದಿಲ್ಲ. ಅಂದಮೇಲೆ ಇವು ಅರ್ಥಶಾಸ್ತ್ರದಲ್ಲಿ ದುಡಿಮೆಯೆನಿಸಿಕೊಳ್ಳುವುದಿಲ್ಲ. (ನೈಲಾಕಬೀರ್.೧೯೯೫:೭೮-೭೯). ಈ ಬಗೆಯ ಸೈದ್ಧಾಂತಿಕ ನಿಲುವಿನಿಂದಾಗಿ ಮಹಿಳೆಯರ ದುಡಿಮೆ-ಕೌಟುಂಬಕ ದುಡಿಮೆಯು ಅಭಿವೃದ್ಧಿಯ ಗಡಿಯಿಂದ ಹೊರಗುಳಿದುಬಿಡುತ್ತದೆ.

ಮಹಿಳೆ ಮತ್ತು ಅಭಿವೃದ್ಧಿಗಳ ನಡುವಿನ ಸಂಬಂಧ ಕುರಿತಂತೆ ಪ್ರಥಮದಲ್ಲಿ ಚಿಂತಿಸಿದ ಬೋಸ್‌ರಪ್ ಪ್ರಕಾರ ಅಭಿವೃದ್ಧಿ ಯೋಜನೆಗಳು ಮಹಿಳೆಯರನ್ನು 'ದುಡಿಮೆಗಾರರು' ಎಂದು ಪರಿಗಣಿಸಲು ಸಿದ್ಧವಿಲ್ಲ. ಈ ಯೋಜನೆಗಳು ಮಹಿಳೆಯರು ನಿರ್ವಹಿಸುತ್ತಿರುವ ಎರಡು ಪಾತ್ರಗಳನ್ನು ಸೂಕ್ಷ್ಮವಾಗಿ ಗ್ರಹಿಸಿಲ್ಲ. ದುಡಿಮೆಯ ನಿರ್ವಚನವನ್ನು ಇಂದು ವಿಸ್ತರಿಸುವ ಅಗತ್ಯವಿದೆ. ಸಂತಾನೋತ್ಪತ್ತಿ ದುಡಿಮೆ ಹಾಗೂ ಅನೌಪಚಾರಿಕ-ಅಸಂಘಟಿತ ವಲಯದಲ್ಲಿನ ದುಡಿಮೆಯನ್ನು ಆರ್ಥಿಕೋತ್ಪಾದನೆಯ ಚೌಕಟ್ಟಿಗೆ ತರಬೇಕಾಗಿದೆ. ಮಹಿಳೆಯನ್ನು ಸಾಮಾಜಿಕ ಘಟಕವಾಗಿ ಎಲ್ಲಿಯವರೆಗೆ ಪರಿಗಣಿಸುವುದಿಲ್ಲವೊ, ಅಲ್ಲಿಯವರೆಗೆ ಅವಳು ಅಭಿವೃದ್ಧಿ ಯೋಜನೆಗಳಲ್ಲಿ ಪುರುಷರಿಗೆ ಸಮಾನವಾದ ಸ್ಥಾನಮಾನ ಪಡೆಯುವುದು ಸಾಧ್ಯವಿಲ್ಲ.

ಜೈವಿಕ ನಿಯತಿಯು ಹೆಣ್ಣಿಗೆ ಕೆಲವು 'ಎಸೆನ್ಸಿಯಲ್' ಗುಣಗಳನ್ನು ಆರೋಪಿಸಿಬಿಡುತ್ತದೆ. ಕುಟುಂಬದ ಹಿತಾಸಕ್ತಿಗಳನ್ನು ಸಾಧಿಸುವುದು ಮಹಿಳೆಯ ಜವಾಬ್ದಾರಿ. ಮಕ್ಕಳ ಲಾಲನೆ-ಪಾಲನೆ ಹೆಣ್ಣಿನ ಜವಾಬ್ದಾರಿ. ಗೃಹವಾರ್ತೆ ಹೆಣ್ಣಿನ ಕರ್ತವ್ಯ. ಮಹಿಳೆಯ ಕಾರ್ಯಕ್ಷೇತ್ರ 'ಕುಟುಂಬ'. ಈ 'ಎಸೆನ್ಸಿಯಲಿಸಮ್' ಅನ್ನು ಅಂತರ್ಗತ ಮಾಡಿಕೊಂಡೇ ಅಭಿವೃದ್ಧಿ ಕಾರ್ಯಕ್ರಮಗಳು ರೂಪುಗೊಳ್ಳುತ್ತಿವೆ.

ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯರನ್ನು ಹೀಗೆ ಜೈವಿಕ ನಿಯತಿಯ ಚೌಕಟ್ಟಿನಲ್ಲಿ ತೊಡಗಿಸಿಕೊಳ್ಳುತ್ತಿವೆ. ಆದರೆ ಮಹಿಳೆಯರನ್ನು ಅವು ಸಾಮಾಜಿಕ ಸಂಗತಿಯಾಗಿ ಒಪ್ಪಿಕೊಳ್ಳಲು ಸಿದ್ಧವಿಲ್ಲ. ಕೌಟುಂಬಿಕ ಜವಾಬ್ದಾರಿ-ಸಂತಾನೊತ್ಪತ್ತಿ ಒತ್ತಡಗಳಿಂದ ಜರ್ಜರಿತವಾದ ಮಹಿಳೆಯರ ಮೇಲೆ ಆರ್ಥಿಕೋತ್ಪಾದನೆ ಹೊರೆ-ಹೊಣೆಯನ್ನೂ ಹೇರಿ ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯರ ಬದುಕನ್ನು ನುಗ್ಗಿನುಸಿ ಮಾಡುತ್ತಿವೆ.

## ಉದ್ಯೋಗ-ವಿಮೋಚನೆ

ಮನೆಯ ಹೊರಗಿನ ದುಡಿಮೆಯು ಮಹಿಳೆಯರಿಗೆ ವಿಮೋಚನೆಯೊದಗಿಸುತ್ತದೆ ಎಂದು ಹೇಳಲಾಗುತ್ತಿದೆ. ಉದ್ಯೋಗವು ಮಹಿಳೆಯರಿಗೆ ಉನ್ನತ ಸ್ಥಾನಮಾನ, ಸಾಮಾಜಿಕ ಮನ್ನಣೆ-ಮಹತ್ವ-ಗುರುತ್ವವನ್ನು ಒದಗಿಸುತ್ತವೆ ಎಂದು ನಂಬಲಾಗಿದೆ. ಶಿಕ್ಷಣವು ಮಹಿಳೆಯರಿಗೆ ಬಿಡುಗಡೆಯನ್ನು ಒದಗಿಸುವುದರ ಜೊತೆಗೆ ಅದು ಅವರನ್ನು ಬದಲಾವಣೆಯ

ನಿಯೋಗಿಗಳನ್ನಾಗಿ ಮಾಡಬಲ್ಲದು ಎಂದು ಹೇಳಲಾಗುತ್ತಿದೆ.

ಆದರೆ ಉದ್ಯೋಗಿ-ಶಿಕ್ಷಿತ ಮಹಿಳೆಯರ ಸಾಮಾಜಿಕ ಸ್ಥಾನಮಾನ ಕುರಿತಂತೆ ನಡೆದ ಅಧ್ಯಯನಗಳು ಉದ್ಯೋಗ ಮತ್ತು ಉನ್ನತ-ಸ್ಥಾನಮಾನಗಳ ನಡುವೆ ನೇರ ಸಂಬಂಧವಿದೆ ಎಂಬುದನ್ನು ದೃಢಪಡಿಸುವುದಿಲ್ಲ. (ನೀರಾದೇಸಾಯಿ.೧೯೬೬:೯೯).

## ಎರಡು ದುಡಿಮೆ ದಿನಗಳ ಬದುಕು

ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯರನ್ನು ಹೆಚ್ಚು ಹೆಚ್ಚು ತೊಡಗಿಸಿಕೊಳ್ಳುತ್ತಿರುವುದರಿಂದ ಅವರು ಪ್ರತಿ ದಿನ ಎರಡು ದುಡಿಮೆ ದಿನಗಳನ್ನು ಬದುಕುವಂತಾಗಿದೆ. ಮಹಿಳೆಯರು ಉದ್ಯೋಗದಲ್ಲಿ ಹೆಚ್ಚು ತೊಡಗುವಂತೆ ಮಾಡಲು ಮಹಿಳೆಯರಿಗೆ ಮೀಸಲಾತಿ ಸೌಲಭ್ಯವನ್ನು ಒದಗಿಸಲಾಗುತ್ತಿದೆ. ಈ ಬಗೆಯ ಕ್ರಮಗಳ ಹಿಂದಿನ ಇಂಪ್ಲಿಕೇಶನ್‌ಗಳೇನು? ಮಹಿಳೆಯರ ಬಗ್ಗೆ ಉಂಟಾಗಿರುವ ಆಸಕ್ತಿಯ ಆಸ್ಫೋಟದ ಹಿಂದಿನ ರಾಜಕಾರಣದ ಒಳಮರ್ಮವೇನು?

ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಮಹಿಳೆಯರು ಹೆಚ್ಚು ಹೆಚ್ಚಾಗಿ ತೊಡಗಿಕೊಳ್ಳಬೇಕು, ಸಹಭಾಗಿಗಳಾಗಬೇಕು ಎಂದರೆ, ಇದುವರೆವಿಗೂ ಮಹಿಳೆಯರು ದುಡಿಯುತ್ತಿರಲಿಲ್ಲ ಎಂದು ಅರ್ಥವೆ? ಐಡ್ಲಾಗಿದ್ದ ಮಹಿಳೆಯರನ್ನು ಕ್ರಿಯಾಶೀಲರನ್ನಾಗಿ ಮಾಡಬೇಕು ಎಂಬುದು ಇವುಗಳ ಮರ್ಮವೆ?

ವಾಸ್ತವವಾಗಿ ಮಹಿಳೆಯರು ಯಾವ ಕಾಲದಲ್ಲೂ ಐಡ್ಲಾಗಿ ಇರಲಿಲ್ಲ. ಆದರೆ ಆ• ದುಡಿಮೆಯನ್ನು ವ್ಯಾಖ್ಯಾನಿಸುವ ಬಗೆಯಲ್ಲಿ ಅರ್ಥಶಾಸ್ತ್ರ ಹಾಗೂ ಅಭಿವೃದ್ಧಿ ಸಿದ್ಧಾಂತಗಳು ನ್ಯಾಯ ಸಮ್ಮತವಾಗಿ ಚಿಂತಿಸುತ್ತಿಲ್ಲ ಅಷ್ಟೆ.

ಮಹಿಳೆಯರು ಸಂತಾನೋತ್ಪತ್ತಿ ದುಡಿಮೆ ಹಾಗೂ ಆರ್ಥಿಕೋತ್ಪಾದನಾ ದುಡಿಮೆಗಳೆರಡನ್ನೂ ನಿರ್ವಹಿಸಬೇಕಾಗಿರುವುದರಿಂದ ನಿಭಾಯಿಸಬೇಕಾಗಿರುವುದರಿಂದ ಅವರು ಪ್ರತಿದಿನವು 'ಎರಡು ದುಡಿಮೆ ದಿನ'ಗಳನ್ನು ಬದುಕುವ ಪ್ರಮೇಯ ಬಂದಿದೆ.*

ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯರನ್ನು ಹೆಚ್ಚು ಹೆಚ್ಚಾಗಿ ತೊಡಗಿಸಿಕೊಳ್ಳುವುದರ ಮೂಲಕ ಅವಳ ಮೇಲೆ ಹೆಚ್ಚಿನ ದುಡಿಮೆ ಭಾರವನ್ನು ಹೇರುತ್ತಿವೆ. ಸಂತಾನೋತ್ಪತ್ತಿ ಹಾಗೂ ಕೌಟುಂಬಿಕ ದುಡಿಮೆಯನ್ನು ಕೈಬಿಡದೆ ಮಹಿಳೆಯರು ಆರ್ಥಿಕೊತ್ಪಾದನೆಯಲ್ಲಿ ತೊಡಗಬೇಕಾಗಿದೆ. ಸಂತಾನೋತ್ಪತ್ತಿ ಮತ್ತು ಕೌಟುಂಬಿಕ ದುಡಿಮೆಯನ್ನು ಜೈವಿಕ ನಿಯತಿ ಎಂದು

* ಕಾರ್ಮಿಕ ಸಂಬಂಧಿಕಾಯಿದೆ ಪ್ರಕಾರ ಎಂಟುಗಂಟೆಗಳ ದುಡಿಮೆಯು ಒಂದು ದುಡಿಮೆ ದಿನಕ್ಕೆ ಸಮ. ಆದರೆ ನಮ್ಮ ಮಹಿಳೆಯರು ಪ್ರತಿ ದಿನ ೧೫ ರಿಂದ ೧೬ ಗಂಟೆ ದುಡಿಯುತ್ತಿರುವುದರಿಂದ ಅವರು ಪ್ರತಿದಿನ ಎರಡು ದುಡಿಮೆ ದಿನಗಳನ್ನು ಬದುಕುತ್ತಿದ್ದಾರೆ.

ಪರಿಗಣಿಸಿರುವುದರಿಂದ ಅವುಗಳನ್ನು ಮಹಿಳೆಯರು ಕಡ್ಡಾಯವಾಗಿ ನಿರ್ವಹಿಸಬೇಕಾಗಿದೆ.

ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಲಿಂಗ ಸಂಬಂಧಗಳನ್ನು ಅಭಿವೃದ್ಧಿ ಕಾರ್ಯಕ್ರಮಗಳು ಮುಂದುವರಿಸುವ ಗಟ್ಟಿ ಗೊಳಿಸುವ ಕೆಲಸ ಮಾಡುತ್ತಿವೆ. ಈ ಕಾರಣದಿಂದಾಗಿ ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯರಿಗೆ ವರವಾಗುವುದಕ್ಕೆ ಪ್ರತಿಯಾಗಿ ಶಾಪವಾಗಿಬಿಟ್ಟಿವೆ. ಮಹಿಳೆಯರ 'ಪರಹಿತವಾದಿ'(altruistic) ಮತ್ತು 'ಸಹಕಾರವಾದಿ' (co-operative) ಮನೋಭಾವವನ್ನು ಅಭಿವೃದ್ಧಿ ಕಾರ್ಯಕ್ರಮಗಳು ದುರುಪಯೋಗ ಪಡಿಸಿಕೊಳ್ಳುತ್ತಿವೆ. ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯರ 'ಬಾರ್‌ಗೈನಿಂಗ್ ಪವರ್' ಅನ್ನು ಪುಷ್ಟಿ ಗೊಳಿಸುವ ಕೆಲಸ ಮಾಡುತ್ತಿಲ್ಲ. ಈ ರೀತಿಯಲ್ಲಿ ಈಗಾಗಲೆ ಅಸ್ತಿತ್ವದಲ್ಲಿರುವ ಲಿಂಗ ಸಂಬಂಧಗಳ ನೆಲೆಯಲ್ಲೆ ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯರನ್ನು ತೊಡಗಿಸಿಕೊಳ್ಳಲು ಪ್ರಯತ್ನಿಸುತ್ತಿವೆ. ಆದರೆ ಈಗಿರುವ ಲಿಂಗ ಸಂಬಂಧಗಳು ಅಸಮಾನತೆಯಿಂದ ಕೂಡಿವೆ. ಅವು ಮಹಿಳೆಯರಿಗೆ ಮಾರಕವಾಗಿವೆ. ಅವುಗಳನ್ನು ಬದಲಾಯಿಸಬೇಕು. ಲಿಂಗಸಂಬಂಧಿ ಸಮಾನತೆ ಪ್ರಣಾಳಿಕೆ ಮೇಲೆ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಬೇಕು ಎಂಬ ಸಂಗತಿಗಳು ಇಲ್ಲಿ ಮುಖ್ಯವಾಗಿಲ್ಲ.

**ಸ್ಥಿತಿಗತಿಗಳು ಮತ್ತು ಸ್ಥಾನಮಾನಗಳು**

ಮಹಿಳೆಯರ ಹಿತಾಸಕ್ತಿಗಳನ್ನು ಕುರಿತಂತೆ ಸೈದ್ಧಾಂತಿಕವಾಗಿ ಚಿಂತಿಸುತ್ತಿರುವ ಮೊಲಿನಿಕ್ಸ್ (Molyneux) ಅವುಗಳನ್ನು ಎರಡು ಗುಂಪುಗಳಾಗಿ ವರ್ಗೀಕರಿಸುತ್ತಾಳೆ. ಮೊದಲನೆಯದು ದೈನಂದಿನ ವ್ಯಾವಹಾರಿಕ ಅಗತ್ಯಗಳು ಮತ್ತು ಎರಡನೆಯದು ಸಂಘರ್ಷಾತ್ಮಕ ಅಗತ್ಯಗಳು. ನೈಲಾಕಬೀರ್ ಹೇಳುವಂತೆ (೧೯೯೫:೯೦-೯೧) ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯರ ದೈನಂದಿನ ವ್ಯಾವಹಾರಿಕ ಅಗತ್ಯಗಳನ್ನು ಪೂರೈಸುತ್ತಾ ಅವಳ ಸ್ಥಿತಿಗತಿಗಳ ಸುಧಾರಣೆಗೆ ಪ್ರಯತ್ನಿಸುತ್ತಿರುತ್ತವೆ. ಇವು ಅಸ್ತಿತ್ವದಲ್ಲಿರುವ ಲಿಂಗಸಂಬಂಧಿ ಅಸಮಾನತೆಗಳನ್ನು ಪ್ರಶ್ನಿಸುವುದಿಲ್ಲ. ಈ ಬಗೆಯ ಅಭಿವೃದ್ಧಿ ಕಾರ್ಯಕ್ರಮಗಳು 'ಮಹಿಳಾ ಕಲ್ಯಾಣ'ವನ್ನು ಗುರಿಯನ್ನಾಗಿ ಹೊಂದಿರುತ್ತವೆ. ಶ್ರೀಲತಾ ಬಾಟ್ಲಿವಾಲಾ ಹೇಳುವಂತೆ ಮಹಿಳೆಯರ ದೈನಂದಿನ-ವ್ಯಾವಹಾರಿಕ ಅಗತ್ಯಗಳು ಆಹಾರ, ಆರೋಗ್ಯ, ಕುಡಿಯುವ ನೀರು, ಉರುವಲು, ಮಕ್ಕಳ ಪೋಷಣೆ, ಶಿಕ್ಷಣ, ಸುಧಾರಿಸಿದ ತಂತ್ರಜ್ಞಾನ ಮುಂತಾದವುಗಳನ್ನು ಒಳಗೊಂಡಿವೆ (೧೯೯೪:೧೨೮). ಹೀಗೆ ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯ ಬದುಕನ್ನು, ಬದುಕಿನ ಸ್ಥಿತಿಗಳನ್ನು ಉತ್ತಮ ಪಡಿಸುವಲ್ಲಿ ಸಾಧನಗಳಾಗಿರುವ ಸಂಗತಿಗಳಲ್ಲಿ ಹೆಚ್ಚು ಆಸಕ್ತಿವಹಿಸಿವೆ. ಇಲ್ಲಿ ಮಹಿಳೆಯರ ವಿಮೋಚನೆಯಾಗಲಿ ಅಥವಾ ಲಿಂಗಸಂಬಂಧಿ ಅಸಮಾನತೆಗಳ ನಿವಾರಣೆಯಾಗಲಿ ಮುಖ್ಯವಾಗುವುದಿಲ್ಲ. ಮಹಿಳೆಯರಿಗೆ ಸಮಾಜವು ಯಾವುದು ಸೂಕ್ತವೆಂದು ಪರಿಗಣಿಸುತ್ತದೊ, ನಿರ್ಧರಿಸುತ್ತದೋ, ನಿರ್ದೇಶಿಸುತ್ತದೊ ಅವುಗಳನ್ನು ಮಾತ್ರ ಅಭಿವೃದ್ಧಿ ಕಾರ್ಯಕ್ರಮಗಳು ಗುರಿಯನ್ನಾಗಿ ಮಾಡಿಕೊಂಡಿರುತ್ತವೆ.

ಈ ಬಗೆಯ ಅಗತ್ಯಗಳನ್ನು ಪೂರೈಸುವುದೂ ಬಹಳ ಮುಖ್ಯ. ಆದರೆ ಇವುಗಳಿಗಿಂತ ಮುಖ್ಯವಾದದ್ದು, ಮಹಿಳೆಯರ ಅಧೀನತೆಯನ್ನು ಪರಿಹರಿಸುವ ದಿಶೆಯಲ್ಲಿ ಪರಿಣಾಮಕಾರಿಯಾದದ್ದು, ಮಹಿಳೆಯರ ಸಂಘರ್ಷಾತ್ಮಕ ಅಗತ್ಯಗಳು. ಮೊಲಿನಿಕ್ಸ್ ಗುರುತಿಸುವಂತೆ ಮಹಿಳೆಯರ ಸಂಘರ್ಷಣಾತ್ಮಕ ಅಗತ್ಯಗಳು ಹೀಗಿವೆ.

೧. ಲಿಂಗ ಸಂಬಂಧಿ ಶ್ರಮವಿಭಜನೆಯನ್ನು ತೊಡೆದು ಹಾಕುವುದು.
೨. ಮಹಿಳೆಯರು ನಿರ್ವಹಿಸುತ್ತಿರುವ ಮಕ್ಕಳ ಪೋಷಣೆ ಮತ್ತು ಕೌಟುಂಬಿಕ ಶ್ರಮದ ಒತ್ತಡವನ್ನು ತಗ್ಗಿಸುವುದು.
೩. ಸಾಂಸ್ಥೀಕರಣಗೊಂಡಿರುವ ತಾರತಮ್ಯಗಳನ್ನು ತೊಡೆದು ಹಾಕುವುದು.
೪. ಪುರುಷರು ನೀಡುವ ಹಿಂಸೆಯ ವಿರುದ್ಧ ರಕ್ಷಣೆ.
೫. ಮಹಿಳೆಯರ ಲೈಂಗಿಕ ಶೋಷಣೆ ಹಾಗೂ ಬಲವಂತ ವಿವಾಹದ ವಿರುದ್ಧ ರಕ್ಷಣೆ.

ಮೊಲಿನಿಕ್ಸ್ ಸರಿಯಾಗೆ ಗುರುತಿಸಿರುವಂತೆ ಅಭಿವೃದ್ಧಿಯ ಕಾರ್ಯಕ್ಷಮತೆಯನ್ನು ಉತ್ತಮ ಪಡಿಸಬೇಕೆಂಬ ಉದ್ದೇಶದಿಂದ ಅಭಿವೃದ್ಧಿಯಲ್ಲಿ ಮಹಿಳೆಯರನ್ನು ತೊಡಗಿಸಿಕೊಳ್ಳುತ್ತಿರುವ ಕೆಲವು ಕಾರ್ಯಕ್ರಮಗಳಿವೆ. ಜೈವಿಕವಾದಿ ಶ್ರಮವಿಭಜನೆ ಹಾಗೂ ತಾರತಮ್ಯವಾದಿ ಸಂಪನ್ಮೂಲ ಹಂಚಿಕೆಗಳ ಚೌಕಟ್ಟಿನಲ್ಲಿ ಸಮಾನತೆಯನ್ನು ಗುರಿಯಾಗಿಟ್ಟುಕೊಂಡು ಮಹಿಳೆಯರ ದೈನಂದಿನ ವ್ಯಾವಹಾರಿಕ ಅಗತ್ಯಗಳನ್ನು ಪೂರೈಸುತ್ತಿರುವ ಕೆಲವು ಕಾರ್ಯಕ್ರಮಗಳಿವೆ. ಲಿಂಗಸಂಬಂಧಗಳಲ್ಲಿ ಮತ್ತು ಜೈವಿಕವಾದಿ ಶ್ರಮವಿಭಜನೆಯಲ್ಲಿ ಅಂತರ್ಗತವಾಗಿರುವ ಅಸಮಾನತೆಗಳನ್ನು ಸರಿಪಡಿಸುವ-ಪರಿವರ್ತಿಸುವ ಉದ್ದೇಶವನ್ನು ಹೊಂದಿರುವ ಅಭಿವೃದ್ಧಿ ಕಾರ್ಯಕ್ರಮಗಳು ಮಾತ್ರ ಇಲ್ಲವೇ ಇಲ್ಲ ಎನ್ನುವಷ್ಟು ಕಡಿಮೆ ಇವೆ. ಅಭಿವೃದ್ಧಿ ಕಾರ್ಯಕ್ರಮಗಳ ಮೂಲದಲ್ಲಿರುವ ಲಿಂಗವಾದಿ ಪೂರ್ವಗ್ರಹಗಳನ್ನು ಅರ್ಥ ಮಾಡಿಕೊಳ್ಳಲು ಮೊಲಿನಿಕ್ಸ್‌ಳ ಸಿದ್ಧಾಂತವು ನೆರವಾಗುತ್ತದೆ. ಯಾವ ಕಾರ್ಯಕ್ರಮಗಳು ಲಿಂಗ ಸಂಬಂಧಗಳಲ್ಲಿರುವ ಅಸಮಾನತೆಯನ್ನು ದೃಢೀಕರಿಸುವ ಗಟ್ಟಿಗೊಳಿಸುವ, ಅದಕ್ಕೆ ಅನುಗುಣವಾಗಿ ಸಂಪನ್ಮೂಲಗಳನ್ನು ವಿತರಣೆ ಮಾಡುತ್ತಿವೆ ಮತ್ತು ಯಾವ ಕಾರ್ಯಕ್ರಮಗಳು ಲಿಂಗಸಂಬಂಧಗಳನ್ನು ವಿಶ್ಲೇಷಣೆಗೆ ಒಳಪಡಿಸಿ, ಮಹಿಳೆಯರ ಅಧೀನತೆಯ ಕಾರಣವನ್ನು ಗುರುತಿಸುವ, ಆ ಮೂಲಕ ಲಿಂಗಸಂಬಂಧಗಳಲ್ಲಿ ಪರಿವರ್ತನೆ ತರುವಂತಹ ಉದ್ದೇಶ ಹೊಂದಿದ್ದಾವೊ ಅವುಗಳ ನಡುವಿನ ವ್ಯತ್ಯಾಸಗಳನ್ನು ಅರ್ಥ ಮಾಡಿಕೊಳ್ಳಲು ಮೊಲಿನಿಕ್ಸ್‌ಳ ಸಿದ್ಧಾಂತ ನೆರವಾಗುತ್ತದೆ.

ನಮ್ಮ ಸಮಾಜದ ಸಂದರ್ಭದಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯರ ದೈನಂದಿನ ವ್ಯಾವಹಾರಿಕ ಅಗತ್ಯಗಳನ್ನು, ಹಿತಾಸಕ್ತಿಗಳನ್ನು ಪೂರೈಸುವಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುವಂತೆ ಕಾಣುತ್ತವೆ.ಯಾವ ಕಾರ್ಯಕ್ರಮಗಳು ಅನುಷ್ಠಾನಕ್ಕೆ ಸರಳವಾಗಿದ್ದಾವೊ, ಸಾಧಿಸಲು ಸುಲಭವಾಗಿದ್ದಾವೊ ಅಂತಹ ಉದ್ದೇಶಗಳನ್ನು ಅಭಿವೃದ್ಧಿ ಕಾರ್ಯಕ್ರಮಗಳು ತಮ್ಮದಾಗಿಸಿಕೊಂಡಿವೆ. ಹಿಂದಿನ ಅನುಭವಗಳಿಂದ ಸ್ತ್ರೀವಾದಿಗಳು

ಏನನ್ನಾದರೂ ಕಲಿಯುವುದಿದ್ದರೆ ಅದು ಮಹಿಳೆಯರ ಅಧೀನ ಸ್ಥಾನಮಾನವನ್ನು ನಿವಾರಿಸಬಲ್ಲ, ಲಿಂಗಸಂಬಂಧಗಳನ್ನು ತಿರುವು-ಮುರುವು ಮಾಡಬಲ್ಲ ಉಗ್ರ ಕಾರ್ಯಕ್ರಮಗಳನ್ನು ರೂಪಿಸುವ ಜವಾಬ್ದಾರಿಯನ್ನು ಮಹಿಳೆಯರೇ ಹೊರಬೇಕಾಗಿದೆ. ಈ ಬಗೆಯ ಕಾರ್ಯಕ್ರಮಗಳನ್ನು ಮಹಿಳೆಯರು ಒತ್ತಾಯಿಸಬೇಕಾಗುತ್ತದೆ. ಇಲ್ಲಿ ಮಹಿಳಾ ಸಂಘಟನೆಗಳ ಪಾತ್ರ ನಿರ್ಣಾಯಕವಾದುದಾಗಿದೆ. ಲಿಂಗಸಂಬಂಧಿ ಅಧಿಕಾರಗಳ ಅಸಮಾನತೆ ಮತ್ತು ಲಿಂಗವಾದಿ ವಿಚಾರ ಪ್ರಣಾಳಿಕೆಗಳನ್ನು ಆಧರಿಸಿಕೊಂಡಿರುವ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಪ್ರತಿಯಾಗಿ ಲಿಂಗ ಸಂಬಂಧಗಳಲ್ಲಿ ಸಮಾನತೆ-ಮಹಿಳಾವಾದಿ ವಿಚಾರ ಪ್ರಣಾಳಿಕೆಗಳನ್ನು ಆಧಾರವನ್ನಾಗಿ ಮಾಡಿಕೊಂಡಿರುವ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸುವ ಕೆಲಸವನ್ನು ಮಹಿಳಾ ಸಂಘಟನೆಗಳು ನಿರ್ವಹಿಸಬೇಕಾಗಿದೆ.ಮಹಿಳೆಯರ ಸಂಘರ್ಷಾತ್ಮಕ ಹಿತಾಸಕ್ತಿಗಳನ್ನು ಪೂರೈಸುವುದು ಸುಲಭದ ಕಾರ್ಯವಲ್ಲ. ಏಕೆಂದರೆ ಇದು ಸೈದ್ಧಾಂತಿಕ ಸಂಗತಿಗಳನ್ನು ಒಳಗೊಂಡಿದೆ. ಮಹಿಳೆಯ ಅಧೀನತೆಯು ಜೈವಿಕ ನಿಯತಿ, ವಿಧಿಲಿಖಿತ, ಅವರು ಪಡೆದು ಬಂದದ್ದು, ಅದು ಅನಿವಾರ್ಯ ಎನ್ನುವ ನಂಬಿಕೆ-ಗ್ರಹಿಕೆಗಳು ಇಲ್ಲಿ ಕೆಲಸಮಾಡುತ್ತಿವೆ. ಇಂತಹ ಪೂರ್ವಗ್ರಹಗಳು ಪುರುಷರಲ್ಲೂ ಮತ್ತು ಮಹಿಳೆ ಯರಲ್ಲೂ ಅಂತರ್ಗತಗೊಂಡಿವೆ. ಕಲ್ಯಾಣವಾದಿ-ಸುಧಾರಣಾವಾದಿ- ಸೌಹಾರ್ದತಾವಾದಿ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಪ್ರತಿಯಾಗಿ ಪರಿವರ್ತನ ಶೀಲ, ಲಿಂಗ ಸಂಬಂಧ ಅಸಮಾನತೆ ತೊಡೆದು ಹಾಕಬಲ್ಲ. ಸಂಘರ್ಷಾತ್ಮಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸುವ ಅವಶ್ಯಕತೆ ಇದೆ.

ಸಮಸ್ಯೆಯಿರುವುದು ಅಭಿವೃದ್ಧಿ ಕುರಿತ ಚಿಂತನೆ-ಸಿದ್ಧಾಂತಗಳು ಮಹಿಳೆಯರನ್ನು ಹೇಗೆ ಪರಿಭಾವಿಸಿ ಕೊಳ್ಳುತ್ತವೆ ಎಂಬುದರಲ್ಲಿ ವಿನಾ ಅಭಿವೃದ್ಧಿ ಕಾರ್ಯಕ್ರಮಗಳು ಅವಳನ್ನು ಹೇಗೆ ತೊಡಗಿಸಿಕೊಳ್ಳುತ್ತವೆ ಎಂಬುದರಲ್ಲಿ ಅಲ್ಲ.

## ಸಂದರ್ಭಸೂಚಿ


Helen I,safa 1996 'Gender Inequality and womens' wage labour:'A Theoritical and Empirical analysis' in valentive Moghadom (Ed) *Patriorchy and Development*. clarendon press. Oxford pp 18-219.

Naila kabeer.1995. *Reversed Realities:Gender Hierorchies in Development thought.* Kali for women, New Delhi.

Shanti Jayasuriya and D.C.Jayasuriya 1999. *Women and Development The Road from Beijing* Har-Anand New Delhi.

Srilatha Batliwala. 1994 'The meaning of women's Empowerment: New concepts from Action' in Gita sen et al (Ed) *Population Policies Re considered: Health Empowerment and Rights.* Harvard University press. pp 127-138.

Srinivas.M.N.1996 'The changing position of Indian women in Srinivas. M.N. *Village, Caste, Gender and Method*. oup Delhi pp 136-157.

Sonol de Desai 1994 'women's Burdens: Easing the structural Constraints' in Gita sen et al (Ed) *Population policies Reconsidered: Health Empowerment and Rights*. Harvard university press. pp 139-150.

Uma Ramaswamy 1996.'Women and Development' in A. M. Shah etal (Ed) *Social structure and change vol 2. women in Indian Society.* Sage pulalications. New Delhi pp 56-76.

Vijaya lakshmi.V. 1998 'Gender Hegemony and cooperative conflict'. *Journal of Social and Economic Development* vol.1. No.1.pp 161-180.

ಕರ್ನಾಟಕ ಅಭಿವೃದ್ಧಿ ಮಾಹಿತಿಕೋಶ ೧೯೯೯ ಸಂ. ಚಂದ್ರಶೇಖರ ಟಿ.ಆರ್. ಮತ್ತು ಇತರರು. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಂದ್ರಶೇಖರ. ಟಿ. ಆರ್. ೧೯೯೯. 'ಅಮರ್ತ್ಯ ಸೇನ್‌ರ ಲಿಂಗ ಸಂಬಂಧಿ ಅಧ್ಯಯನಗಳು' ಪ್ರಜಾವಾಣಿ.

ಶೇಷಾದ್ರಿ. ಬಿ. ೧೯೯೯. 'ಕುಟುಂಬ ಯೋಜನೆ ಮತ್ತು ಮಹಿಳೆ' ಮಹಿಳಾ ಅಧ್ಯಯನ, ದಕ್ಷಿಣಾಯನ ಸಂಚಿಕೆ. ಸಂ.೧.ಸಂ.೨. ಪುಟಗಳು ೪೫-೫೭

# ಕೃಷಿ ಮತ್ತು ಮಹಿಳೆ

ಸಿದ್ದಗಂಗಮ್ಮ

ಅಭಿವೃದ್ಧಿಗೆ ಸಂಬಂಧಿಸಿದ ಯೋಜನೆಗಳು ಲಿಂಗಭೇದರಹಿತವಾಗಿದ್ದು ಆರ್ಥಿಕ ಸುಧಾರಣೆಗಳು ಸಂಸಾರದಲ್ಲಿನ ಸ್ತ್ರೀ ಪುರುಷರ ಜೀವನ ಮಟ್ಟವನ್ನು ಸಮಪ್ರಮಾಣದಲ್ಲಿ ಸುಧಾರಿಸುತ್ತವೆ ಎಂಬ ನಂಬಿಕೆಗಳಿಂದ ನೀತಿಗಳನ್ನು ರೂಪಿಸಲಾಗುತ್ತಿದೆ. ಆದರೆ ಇಂತಹ ನೀತಿ ರೂಪಕಗಳಲ್ಲಿ ಒಟ್ಟು ಜನಸಂಖ್ಯೆಯಲ್ಲಿನ ಅರ್ಧದಷ್ಟಿರುವ ಮಹಿಳೆಯರನ್ನು, ಈ ನಂಬಿಕೆಗಳನ್ನು ಮೀರಿ, ಕಡೆಗಣಿಸಲಾಗಿದೆ. ಏಕೆಂದರೆ ಅಭಿವೃದ್ಧಿಯ ಫಲಗಳು ಅವರಿಗೆ ತಲುಪುವ ನಿರ್ದಿಷ್ಟ ವಿಧಾನಗಳನ್ನು ಈ ಯೋಜನೆಗಳು ಗುರುತಿಸದೆ ಹೋದವು. ಕೃಷಿ ಕ್ಷೇತ್ರದಲ್ಲಿನ ಮಹಿಳೆಯರ ಕೊಡುಗೆಗಳನ್ನು ನಿರ್ಲಕ್ಷಿಸಲಾಗಿದೆ. ಈ ವಲಯದಲ್ಲಿ ಉತ್ಪಾದನೆ ಮತ್ತು ದಕ್ಷತೆಯನ್ನು ಸುಧಾರಿಸುವ ಅತ್ಯುತ್ತಮ ಕಾರ್ಯ ವಿಧಾನಗಳನ್ನು ರೂಪಿಸಲಿಲ್ಲ ವಾದ್ದರಿಂದ ಆರ್ಥಿಕ ಮತ್ತು ಸಾಮಾಜಿಕ ಸಂಬಂಧಗಳು ಅನಿರೀಕ್ಷಿತ ಪಲಿತಾಂಶಗಳಿಂದ ಪೀಡಿಸಲ್ಪಟ್ಟವು. ಮಹಿಳೆಯರು ಆರ್ಥಿಕ ಕಾರ್ಯಕ್ರಮಗಳಲ್ಲಿ ಅವರ ಆರ್ಥಿಕ ಅಭಿವೃದ್ಧಿಯ ಫಲದಿಂದ ವಂಚಿತರಾಗುವುದರ ಜೊತೆಗೆ ಸರಕಾರದ ಕಾರ್ಯಕ್ರಮಗಳಲ್ಲಿ ಅವರ ಆರ್ಥಿಕ ಪಾತ್ರವನ್ನು ಸರಿಯಾಗಿ ಪರಿಗಣಿಸಲಿಲ್ಲವಾದ್ದರಿಂದ ವ್ಯವಸಾಯ ಕ್ಷೇತ್ರದಲ್ಲಿ ಮಹಿಳೆಯರ ಸ್ಥಿತಿ ಮತ್ತಷ್ಟು ಹದಗೆಟ್ಟಿತ್ತು.

ಇತ್ತೀಚೆಗೆ ಮಹಿಳೆಯರ ಸ್ಥಿತಿಗತಿಗಳನ್ನು ಕುರಿತು ನಡೆದ ಹಲವು ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ಸಂಘ ಸಂಸ್ಥೆಗಳ ಶೃಂಗ ಸಭೆಗಳಲ್ಲಿನ ಚರ್ಚೆಗಳು, ಮತ್ತು ಮಾನವ ಅಭಿವೃದ್ಧಿ ವರದಿಗಳು ಪುರುಷಶಾಹಿತ್ವದ ಆಭಿವೃದ್ಧಿ ಪ್ರಕ್ರಿಯೆಯಲ್ಲಿ ಲಿಂಗ ತಾರತಮ್ಯಗಳಿಂದ ಅಂತರ್ಗತವಾಗಿರುವ ಮಹಿಳೆಯರ ನಿಕೃಷ್ಟ ಬದುಕಿನ ಮಡಿಕೆಗಳನ್ನು ಬಿಚ್ಚಿ ಒಂದೊಂದಾಗಿ ಬಯಲಿಗೆಳೆದು ಸೂಕ್ಷ್ಮ ಹಾಗು ಸಂಕೀರ್ಣ ಸತ್ಯ ಸಂಗತಿಗಳನ್ನು ಬೆಳಕಿಗೆ ತಂದ ಪರಿಣಾಮ ದಿಂದಾಗಿ ಲಿಂಗತಾರತಮ್ಯಗಳ ಆಯಾಮ ಕುರಿತ ಅಧ್ಯಯನಗಳು ಚರ್ಚೆಯ ಮುಂಚೂಣಿಗೆ ಬಂದವು.

೧೯೭೦ರಲ್ಲಿ ಹೊರಬಂದ ಮಹಿಳೆಯರ ಸ್ಥಾನಮಾನ ಕುರಿತ ರಾಷ್ಟ್ರೀಯ ಆಯೋಗದ ವರದಿಯಂತೆ ಭಾರತೀಯ ಸಂವಿಧಾನದಲ್ಲಿ ಸ್ತ್ರೀಯರಿಗೆ ಸಮಾನತೆ ನೀಡಲಾಯಿತು.

ಕೃಷಿ ಸುಧಾರಣೆ ಹಾಗು ಗ್ರಾಮೀಣ ಅಭಿವೃದ್ಧಿ ಕುರಿತ ವಿಶ್ವ ಸಮ್ಮೇಳನದಲ್ಲಿ ಕೃಷಿರಂಗ ದಲ್ಲಿನ ಮಹಿಳೆಯರ ದುಡಿಮೆಗೆ ಮಾನ್ಯತೆ ನೀಡಿ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಅವರನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳಲು ನಿರ್ಧರಿಸಲಾಯಿತು.

ಅಭಿವೃದ್ಧಿ ಪರಿಸರದಿಂದ ಮಹಿಳೆಯರನ್ನು ಹೊರಗಿಟ್ಟಿದ್ದರಿಂದ ಉಂಟಾದ ನಷ್ಟದ ಸಂಪೂರ್ಣ ಅರಿವು ನೀತಿ ನಿರೂಪಕರ ಗಮನಕ್ಕೆ ಬಂದಿದ್ದು ಮಹಿಳೆಯರಿಗೆ ಆರ್ಥಿಕ ಶಕ್ತಿ ಒದಗಿಸಿ ಸ್ವಾವಲಂಬಿಗಳಾಗುವಂತೆ ಮಾಡುವಲ್ಲಿ ಹಾಗು ಅವರು ಅಭಿವೃದ್ಧಿಯ ಫಲದಿಂದ ನುಸುಳಿ ಹೋಗದಂತೆ ಮಾಡುವಲ್ಲಿ ಮಹಿಳೆಯರಿಗಾಗಿಯೇ ಪ್ರತ್ಯೇಕ ಅಭಿವೃದ್ಧಿ ಯೋಜನೆಗಳನ್ನು ರೂಪಿಸಲಾಯಿತು.

ಐದನೆ ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳೆಯರನ್ನು ಉತ್ಪಾದನಾ ಅಂಗವೆಂದು ಪರಿಗಣಿಸಿದರೆ ಹಲವು ಆಯಾಮಗಳಿಂದ ಕೂಡಿದ ಆರನೆ ಯೋಜನೆ ಮಹಿಳೆಯರ ಉದ್ಯೋಗಕ್ಕೆ ಹೆಚ್ಚು ಒತ್ತು ನೀಡಿತು. ಏಳನೆಯದರಲ್ಲಿ ಸಶಕ್ತೀಕರಣಕ್ಕೆ ಸವಲತ್ತು ಗಳನ್ನೊದಗಿಸಿ, ಎಂಟನೆ ಯೋಜನೆ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಮಹಿಳೆಯರನ್ನು ಸಮಾನ ಭಾಗಿದಾರರನ್ನಾಗಿ ಪರಿಗಣಿಸಲಾಯಿತು.

ಪಂಚವಾರ್ಷಿಕ ಯೋಜನೆಗಳ ಸತತ ಕಳಕಳಿಯು ಸಾಮಾಜಿಕ ನ್ಯಾಯದೊಡನೆ ಆರ್ಥಿಕ ಬೆಳವಣಿಗೆ ಸಾಧಿಸಲು, ಕೃಷಿ ಮತ್ತು ಅದರ ಆಧಾರಿತ ವಲಯಗಳಲ್ಲಿ ಮಹಿಳೆಯರನ್ನು ತೊಡಗಿಸಿಕೊಂಡು ಅಭಿವೃದ್ಧಿಯ ಜೊತೆ ಜೊತೆಗೆ ದೇಶದ ಆಹಾರ ಬೇಡಿಕೆಯನ್ನು ಪೂರೈಸಿಕೊಳ್ಳಲು ಕೃಷಿ ಉತ್ಪಾದನೆಗೆ ಹೆಚ್ಚು ಒತ್ತು ನೀಡಲಾಯಿತು.

ಗ್ರಾಮೀಣ ಅರ್ಥವ್ಯವಸ್ಥೆಯ ಬೆನ್ನೆಲುಬಾದ ಕೃಷಿ ಮತ್ತು ಪಕ್ಕೆಲುಬುಗಳಾದ ಪಶುಪಾಲನೆ, ರೇಷ್ಮೆ ಕೃಷಿ, ಮೀನುಗಾರಿಕೆ, ಕೋಳಿ ಸಾಕಣೆ, ಅರಣ್ಯೀಕರಣ ಕಾಮಗಾರಿಕೆ ಮುಂತಾದ ವಲಯಗಳಲ್ಲಿ ಉದ್ಯೋಗವಕಾಶಗಳನ್ನು ಹೆಚ್ಚಿಸಿ ಮಹಿಳೆಯರು ಸಾಂಪ್ರದಾಯಕವಾಗಿ ತೊಡಗಿಸಿಕೊಳ್ಳುವ ವಲಯಗಳನ್ನು ಗುರುತಿಸಿ ಕೃಷಿ ಉತ್ಪಾದನೆ ಹೆಚ್ಚಿಸುವ ದಿಕ್ಕಿನಲ್ಲಿ ಅಗತ್ಯವಾದ ಜಮೀನು, ಸಾಲಸೌಲಭ್ಯ, ತಾಂತ್ರಿಕ ತರಬೇತಿ, ಮುಂತಾದ ಸಂಪನ್ಮೂಲ ಸೇವಾ ಸವಲತ್ತುಗಳನ್ನು ಒದಗಿಸಲಾಗಿದೆ.

೧೯೩೭ರಲ್ಲಿ ಮಹಿಳೆಯರಿಗೆ ಆಸ್ತಿಯಲ್ಲಿ ಸಮಪಾಲು ಸಿಗುವಂತಾಯಿತಲ್ಲದೆ ಹಿಂದೂ ಉತ್ತರಾಧಿಕಾರ ಅಧಿನಿಯಮ ೧೯೫೬ರ ತಿದ್ದುಪಡಿಯಾಗಿ, ಪೂರ್ವಿಕರ ಆಸ್ತಿಯಲ್ಲೂ ಪಾಲು ದೊರೆಯುವಂತಾಯಿತು. ಜೊತೆಗೆ ಸರಕಾರದ ಇತ್ತೀಚಿನ ನಿರ್ದೇಶನದಂತೆ ಕುಟುಂಬದ ಎಲ್ಲಾ ಆಸ್ತಿಯನ್ನು ದಂಪತಿಗಳು ಸಂಯುಕ್ತವಾಗಿ ಅನುಭವಿಸಬೇಕೆಂಬುದು ವಿದಿತವಾಗಿದೆ.

ಕೃಷಿ ಉತ್ಪಾದನೆಯನ್ನು ವರ್ಧಿಸಲು, ಮಹಿಳೆಯರಿಗೆ ಅಗತ್ಯವಾದ ಸಾಲ ಸೌಲಭ್ಯಗಳನ್ನೊದಗಿಸಲು ಬ್ಯಾಂಕುಗಳು ಮತ್ತು ಹಣಕಾಸು ಸಂಸ್ಥೆಗಳಲ್ಲಿ ಅವಕಾಶ ಕಲ್ಪಿಸಲಾಗಿದೆ. ಮಾರುಕಟ್ಟೆಗಳಲ್ಲಿ ಮಹಿಳೆಯರಿಗೆ ಸೂಕ್ತ ಸೌಲಭ್ಯಗಳನ್ನು ಒದಗಿಸುವುದರ

ಜೊತೆಗೆ ಕೃಷಿ ಉತ್ಪನ್ನಗಳ ಮಾರಾಟಕ್ಕೆ ನಿರಂತರ ಮಾರುಕಟ್ಟೆ ಒದಗಿಸಲು ೯ನೇ ಯೋಜನೆಯಲ್ಲಿ ವಿಶೇಷ ಗಮನ ನೀಡಲಾಗಿದೆ. ಕೃಷಿ ಮತ್ತು ಇತರ ಉಪ ಚಟುವಟಿಕೆಗಳಲ್ಲಿನ ಕೌಶಲ್ಯ ರೂಢಿಸಿಕೊಳ್ಳುವಂತೆ ಮಾಡಲು ಅಧುನಿಕ ತಾಂತ್ರಿಕ ತರಬೇತಿ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ಜೊತೆಗೆ ಡ್ಯಾನಿಡಾ ಸ್ವಯಂ ಸೇವಾ ಸಂಸ್ಥೆಯ ಸಹಯೋಗದೊಂದಿಗೆ ರೈತ ಮಹಿಳೆಯರಿಗೆ ಅಧುನಿಕ ಕೃಷಿ ತಾಂತ್ರಿಕ ತರಬೇತಿ ನೀಡಿ ಅವರ ಕೌಶಲ್ಯ ಹೆಚ್ಚಿಸುವ ಕಾರ್ಯಕ್ರಮ ರೂಪಿಸಲಾಗಿದೆ.

ಕೃಷಿ ಮತ್ತು ಮಹಿಳೆಯ ನಂಟು ಇಂದು ನಿನ್ನೆಯದಲ್ಲ. ಕೃಷಿ ಅವಿಷ್ಕಾರದ ಸಂಶೋಧಕಿ ಮಹಿಳೆಯೇ ಎಂಬುದಕ್ಕೆ ಅನೇಕ ಪುರಾವೆಗಳು, ದಾಖಲೆಗಳು ಭಿತ್ತಿಚಿತ್ರಗಳು ಗೋಚರಿಸುತ್ತವೆ. ಮಾನವ ತನ್ನ ಅಲೆಮಾರಿ ಜೀವನಕ್ಕೆ ತಿಲಾಂಜಲಿಯಿತ್ತು ಒಂದು ಕಡೆ ನೆಲೆಯೂರಿ ಬದುಕಲು ಪ್ರಾರಂಬಿಸಿದ ಹಂತದಲ್ಲಿ ಪುರುಷ ಆಹಾರಕೋಸ್ಕರ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಲು ಹೋದಾಗ, ಮಹಿಳೆ ತನ್ನ ಸುತ್ತ ಮುತ್ತಲಿನ ಭೂಮಿಯನ್ನು ಸಮತಟ್ಟುಮಾಡಿ ಬೆಳೆ ಬೆಳೆದು ರಕ್ಷಿಸುವುದರ ಜೊತೆಗೆ ಪ್ರಕೃತಿಯ ಗಿಡ, ಮರ, ಕಲ್ಲು, ಬಂಡೆಗಳು, ನೀರು ಎಲ್ಲವೂ ಆಕೆಗೆ ಆರಾಧ್ಯ ದೈವಗಳಾದವು. ತದನಂತರದಲ್ಲಿ ನೀರಿನ ಉಪಯೋಗ ತಿಳಿದು ಬಂದಿದ್ದರಿಂದ ಸಮುದಾಯಗಳು ನದಿ, ಕಣಿವೆ, ಸರೋವರ ತಗ್ಗು ಪ್ರದೇಶಗಳ ಕಡೆಗೆ ಸ್ಥಳಾಂತರಗೊಂಡಾಗ ಗಟ್ಟಿಯಾದ ಕಡ್ಡಿ ನೇಗಿಲಾಗಿ ರೂಪಾಂತರ ಗೊಂಡು, ಎತ್ತುಗಳನ್ನು ಉಪಯೋಗಿಸಿಕೊಂಡು ಪುರುಷ ವ್ಯವಸಾಯ ಮಾಡಲು ತೊಡಗಿದಾಗ ಅವನು 'ನೇಗಿಲ ಯೋಗಿ' ಎಂಬ ಬಿಟ್ಟಿ ಪಟ್ಟವನ್ನು ಪಡೆದುಕೊಂಡನು.

ಅಂದಿನ ಕೃಷಿ ಪ್ರಧಾನ ಕುಟುಂಬಗಳಲ್ಲಿ ಸ್ತ್ರೀಯರೇ ಮನೆಯೊಡತಿಯರಾಗಿದ್ದು. ಅವರ ಶ್ರಮಶಕ್ತಿಗೆ ಅಪಾರವಾದ ಮಹತ್ವವಿತ್ತು. ಇಂತಹ ಶ್ರಮಶಕ್ತಿಯನ್ನು ಅಧಿಕ ಭೂಮಿಯೊಂದಿಗೆ ತುಲನೆ ಮಾಡಲಾಗುತ್ತಿತ್ತು. (ಇಂದಿಗೂ ಸ್ತ್ರೀಯರನ್ನು ಭೂಮಿ ತೂಕದ ಹೆಣ್ಣು ಎಂದು ಕರೆಯುವುದು ರೂಢಿಯಲ್ಲಿದೆ) ಮದುವೆಗಳಲ್ಲಿ ವರನ ಕಡೆಯವರೇ ಮಹತ್ವವಾದ ಒಂದು ಮಹಿಳಾ ಶ್ರಮಶಕ್ತಿಯನ್ನು ಕಳೆದುಕೊಳ್ಳಬೇಕಾದರೆ ಹೆಣ್ಣಿನ ಕುಟುಂಬಕ್ಕೆ ವಧುದಕ್ಷಿಣೆ ರೂಪದಲ್ಲಿ ಪರಿಹಾರ ನೀಡಬೇಕಿತ್ತು. ಆ ಮಹಿಳೆ ಕುಟುಂಬದ ಯಜಮಾನಿಯಾಗಿ ಸಂಸಾರದ ನಿರ್ವಹಣೆಯನ್ನು ಸುಗಮವಾಗಿ ನಡೆಸಿಕೊಂಡು ಹೋಗುತ್ತಿದ್ದರು.

ಜನಸಂಖ್ಯೆ ಹೆಚ್ಚಾದಂತೆ, ಸಾಗುವಳಿಗೆಂದು ಭೂಮಿಯನ್ನು ಹೆಚ್ಚು ಹೆಚ್ಚು ಉಪಯೋಗಿಸ ತೊಡಗಿದಂತೆ, ಭೂ ಒಡೆತನ ಪುರುಷನದಾಗುತ್ತಾ ಬಂದು ಕುಟುಂಬದಲ್ಲಿ ಅವನ ಸ್ಥಾನಮಾನಗಳು ಹೆಚ್ಚತೊಡಗಿದಾಗ ಸ್ತ್ರೀಯರ ಸ್ಥಾನಮಾನಗಳು ಎರಡನೆಯ ದರ್ಜೆಗೆ ಹಿಂಬಡ್ತಿ ಹೊಂದಿದವು. ಪುರುಷರು ಮನೆಯೊಡೆಯರಾಗಿ ಆದಾಯವನ್ನೆಲ್ಲಾ ತಾವೇ ನಿರ್ವಹಿಸತೊಡಗಿದಾಗ, ಮಹಿಳೆಯರು ತಮ್ಮ ಆರ್ಥಿಕ ವಿಪರ್ಯಾಸಗಳ ನಡುವೆಯೂ ಸಂಸಾರವನ್ನು ಸರಾಗವಾಗಿ ನಡೆಸಿಕೊಂಡು ಹೋಗಲು, ಪುರುಷರ ಮೇಲೆ ಆಧಾರ ಪಡದ,

ಅವರ ವಾಣಿಜ್ಯ ಮಟ್ಟಕ್ಕೆ ಏರದೆ ಇರುವಂತಹ, ಅಂದರೆ ಕೃಷಿಗೆ ಹೊಂದಿಕೊಂಡಂತೆ ಉಪಕಸುಬುಗಳಾದ ಪಶುಪಾಲನೆ, ಕೋಳಿ ಸಾಕಣೆ, ಮೀನುಗಾರಿಕೆ ಮುಂತಾದ ಪರ್ಯಾಯ ಮಾರ್ಗಗಳನ್ನು ಪೂರೈಸಿಕೊಳ್ಳಲು ತಮ್ಮದೆ ಆದ ಆರ್ಥಿಕ ಮೂಲ ಹಾಗೂ ವಹಿವಾಟುಗಳನ್ನು ರೂಢಿಸಿಕೊಂಡರು.

ಪಶುಪಾಲನೆ ಕೃಷಿ ಕುಟುಂಬದ ಮಹಿಳೆಯರ ಬದುಕಿನ ಅವಿಭಾಜ್ಯ ಅಂಗ. ವ್ಯವಸಾಯವನ್ನು ಮೂಲಭೂತ ಉದ್ಯೋಗವನ್ನಾಗಿಸಿ ಕೊಂಡಿರುವವರಿಗೆ ಪಶುಪಾಲನೆ ಆರ್ಥಿಕ ನೆರವಿಗೆ ಅಗತ್ಯ ಸಾಧನವಾಗಿದೆ. ಮನೆಯಲ್ಲಿ ಆಗುತ್ತಿದ್ದ ಹಾಲಿನ ಉತ್ಪಾದನೆಯನ್ನು ಪುರುಷರು ಗಣನೆಗೆ ತೆಗೆದುಕೊಳ್ಳುತ್ತಿರಲಿಲ್ಲ. ಮಹಿಳೆಯರು ಮನೆಯಲ್ಲಿಯೇ ಹಾಲು ಮಾರಾಟ ಮಾಡುತ್ತಿದ್ದು ಮಿಗತೆಯಾದ ಹಾಲನ್ನು ಮೊಸರು ಮಜ್ಜಿಗೆ ಮಾಡಿ, ಬೆಣ್ಣೆ ತುಪ್ಪ ತಯಾರಿಸುತ್ತಿದ್ದರು. ಹಾಲು ಮಕ್ಕಳಿಗೆ ಪೌಷ್ಟಿಕ ಆಹಾರವಾದರೆ. ಅಂತರ್‌ರಾಷ್ಟ್ರೀಯ ತಂಪು ಪಾನೀಯಗಳಿಗಿಂತ ತಂಪಾದ ಮಜ್ಜಿಗೆ ಮನೆ ಮಂದಿಗಲ್ಲದೆ ಅಕ್ಕ ಪಕ್ಕದವರಿಗೂ ಉಚಿತವಾಗಿ ದೊರೆಯುತ್ತಿತ್ತು. ಹಾಲು, ಬೆಣ್ಣೆ, ತುಪ್ಪ ಮಾರಿಕೊಂಡು ಮಹಿಳೆಯರು ತಮ್ಮ ಸ್ವಂತದ ಅಗತ್ಯ ಬೇಡಿಕೆಗಳನ್ನು ಈಡೇರಿಸಿಕೊಳ್ಳುತ್ತಿದ್ದರು.

ಕೋಳಿ ಸಾಕಣೆ ಗ್ರಾಮೀಣ ಮಹಿಳೆಯರ ಮತ್ತೊಂದು ಉಪವೃತ್ತಿ. ಮನೆಯಂಗಳದಲ್ಲಿನ ಪುಟ್ಟ ಗೂಡಿನಲ್ಲಿ ಕುಕ್ಕುಟಗಳ ಸಾಕಣೆಗೆ ಯಾವುದೇ ರೀತಿಯ ಖರ್ಚಿಲ್ಲ. ಉಪಯೋಗಿಸಲಾಗದ ದವಸ-ಧಾನ್ಯ ಹುಳು ಹುಪ್ಪಟಗಳನ್ನು ತಿಂದು ಬದುಕುವ ಕೋಳಿಗಳು ರೋಗ ರುಜಿನಗಳಿಂದ ಅಳಿದುಳಿದು, ಬರುವ ಅತಿಥಿಗಳಿಂದ ಅಪರೂಪಕ್ಕೆ ಪಾರಾದರೆ, ಕೋಳಿ ಮತ್ತು ಮೊಟ್ಟೆಗಳಿಂದ ಬರುವ ಹಣವು ಮಹಿಳೆಯರ ಸಣ್ಣ ಪುಟ್ಟ ತುರ್ತು ಅಗತ್ಯಗಳನ್ನು ಪೂರೈಸುತ್ತಿದ್ದವು.

ನದಿ, ಕಡಲು ಸಂಪನ್ಮೂಲಗಳನ್ನು ಅವಲಂಬಿಸಿ ಬದುಕುತ್ತಿರುವ ಮೀನುಗಾರ ಕುಟುಂಬಗಳಲ್ಲಿನ ಮಹಿಳೆಯರು ಮೀನು ಕಾರ್ಯಾಗಾರದಲ್ಲಿ ಎಲ್ಲ ಹಂತದಲ್ಲೂ ದುಡಿಯುತ್ತಿದ್ದಾರೆ. ಬಲೆ ಹೆಣೆಯುವುದು, ನೀರಿನಲ್ಲಿ ಮುಳುಗಿ ಮುತ್ತು ಹೆಕ್ಕುವುದರಲ್ಲಿ ಮಹಿಳೆಯರು ನಿಪುಣರು. ಮೀನು ಹಿಡಿದ ನಂತರದ ಸಂಸ್ಕರಣೆ, ಮಾರಾಟ ಮತ್ತು ಆಹಾರವಾಗಿ ಪರಿವರ್ತಿಸುವುದು ಮುಂತಾದ ಕೆಲಸಗಳಲ್ಲಿ ಮಹಿಳೆಯರ ಪಾತ್ರವೇ ಹೆಚ್ಚು.

ತಕ್ಷಣವೇ ಮಾರಾಟವಾಗದೆ ಇರುವ ಮೀನುಗಳಿಗೆ ಉಪ್ಪು ಹಚ್ಚುವುದು, ಮೀನು ಒಣಗಿಸುವುದು ಅವರ ಇನ್ನೊಂದು ಮುಖ್ಯ ಕೆಲಸ. ಯಾವ ಮೀನು ತೊಳೆಯಬೇಕು ಹೇಗೆ ಸಂರಕ್ಷಿಸಬೇಕು ಹೇಗೆ ಕಟ್ಟಬೇಕು. ಮೀನಿನ ಎಣ್ಣೆ ತೆಗೆಯುವುದರಲ್ಲಿ ಮಹಿಳೆಯರ ದೇಶಿಯ ಕೌಶಲ್ಯ ಅಡಗಿದೆ. ಈ ಕೌಶಲ್ಯದಿಂದಲೇ ದೇಶದ ವಿವಿಧ ಮೂಲೆಗಳಿಗೆ ಮೀನುಗಳು ತಲುಪುತ್ತಿದ್ದವು. ಮೀನುಗಾರ ಕುಟುಂಬದ ಮಹಿಳೆಯರು ಮೀನು ಕಾರ್ಯಗಾರದಲ್ಲಿ ವಿವಿಧ ಹಂತಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು, ಬರುವ ಆದಾಯದಿಂದ ಕುಟುಂಬದ ನಿರ್ವಹಣೆ

ಮಾಡುತ್ತಿದ್ದರು.

ಗ್ರಾಮೀಣ ಪ್ರದೇಶದ ಮಹಿಳೆಯರು ಪುರುಷರನ್ನು ಕೇಳಿ ಪಡೆದುಕೊಳ್ಳಲಾಗದ ಹಾಗೂ ಹೆಣ್ಣುಮಕ್ಕಳ ಕೆಲವು ಸಣ್ಣ ಪುಟ್ಟ ಬೇಡಿಕೆ ವಸ್ತುಗಳನ್ನು ಕೊಡಿಸಲು ದವಸಧಾನ್ಯಗಳನ್ನು ಗುಪ್ತವಾಗಿ ಮಾರಿ ತಮ್ಮ ಅಗತ್ಯಗಳನ್ನು ನೀಗಿಸಿಕೊಳ್ಳುತ್ತಾರೆ. ಹೀಗೆ ಗುಪ್ತವಾಗಿ ಮಾರಾಟ ಮಾಡುವ ದವಸಗಳ ಬೆಲೆ ತುಂಬಾ ಕಡಿಮೆ ಇದ್ದು ಇಂತಹ ದವಸ ಧಾನ್ಯಗಳನ್ನು ಕೊಳ್ಳುವ ಗ್ರಾಹಕರೆಂದರೆ ಕೃಷಿ ಕಾರ್ಮಿಕ ಮಹಿಳೆಯರು. ಪ್ರತಿಯೊಂದು ಹಳ್ಳಿಯಲ್ಲೂ ಗುಪ್ತವಾಗಿ ದವಸ ದಾನ್ಯಗಳನ್ನು ಮಾರಾಟ ಮಾಡುವ ರಹಸ್ಯ ಮಾಯಾಜಾಲಗಳಿವೆ.

ಪಾರಂಪರಿಕ ವ್ಯವಸಾಯ ವ್ಯವಸ್ಥೆಯಲ್ಲಿ ಕೃಷಿಯೇ ಜನರ ಜೀವನೋಪಾಯದ ಮುಖ್ಯ ಉದ್ಯೋಗವಾಗಿತ್ತು. ಜನಸಂಖ್ಯೆ ಕಡಿಮೆ ಇದ್ದು ಆಹಾರ ಉತ್ಪಾದನೆಗೆ ಅಗತ್ಯಕ್ಕಿಂತ ಹೆಚ್ಚಿನ ವ್ಯವಸಾಯದ ಭೂಮಿ ಇತ್ತು. ಬೇಸಾಯಕ್ಕೆ ಅಗತ್ಯ ಸಲಕರಣೆಗಳಾದ ನೇಗಿಲಿಗೆ ಬೇಕಾದ ಮರದ ತುಂಡುಗಳು ಕಾಡಿನಲ್ಲಿ ಸಿಗುತ್ತಿತ್ತು. ಪಶುಪಾಲನೆಯಿಂದಾಗಿ ಎತ್ತುಗಳನ್ನು ಕೊಳ್ಳುವ ಅಗತ್ಯವಿರಲಿಲ್ಲ. ಹೇರಳವಾಗಿ ಸಿಗುತ್ತಿದ್ದ ಹಸುರೆಲೆ, ಸಗಣಿಗೊಬ್ಬರ ಹಾಕಿ ಬೆಳೆ ಬೆಳೆಯಲಾಗುತ್ತಿತ್ತು. ನೀರಾವರಿ ಪದ್ಧತಿ ಅನುಸರಿಸುತ್ತಿದ್ದವರು ಕಪಿಲೆ ಬಾವಿ, ಏತ ನೀರಾವರಿಯ ಮೂಲಕ ಬೆಳೆ ಬೆಳೆಯುತ್ತಿದ್ದರು. ಶ್ರೀಮಂತರು ಆಳುಗಳಿಗೆ ದವಸಧಾನ್ಯಗಳನ್ನು ಕೊಟ್ಟು ವ್ಯವಸಾಯದ ಕೆಲಸ ಮಾಡಿಸಿಕೊಳ್ಳುತ್ತಿದ್ದರು. ಮಧ್ಯಮ ಹಾಗು ಸಣ್ಣ ರೈತರು ತಮ್ಮ ಜಮೀನಿನಲ್ಲಿ ಕೆಲಸ ಮಾಡಿದ ರೈತರ ಹೊಲದಲ್ಲಿ ಪ್ರತಿಯಾಗಿ ಕೆಲಸ ಮಾಡುತ್ತಿದ್ದರು (ಮುಯ್ಯಾಳು) ಹೀಗೆ ಜಮೀನು, ಗೊಬ್ಬರ, ಬಿತ್ತನೆ ಬೀಜ ಮುಂತಾದವುಗಳನ್ನು ಕೊಳ್ಳಲು ಸಾಲಸೌಲಭ್ಯಗಳ ಅಗತ್ಯ ಅಷ್ಟಾಗಿರಲಿಲ್ಲ. ಪಾರಂಪರಿಕ ಕೃಷಿ ಪರಿಸರ ಪೂರಕ ವ್ಯವಸಾಯ ಪದ್ಧತಿಯಾಗಿತ್ತು. ಮಹಿಳೆಯರು ಈ ಸಾಂಪ್ರದಾಯಿಕ ಕೃಷಿ ಪದ್ಧತಿಯಲ್ಲಿ ಅಬ್ಬರವಿಲ್ಲದ ಉತ್ತಮ ಜೀವನ ನಡೆಸುತ್ತಿದ್ದರು. ಮುಂದೆ ಹೆಚ್ಚುತ್ತಿರುವ ಜನಸಂಖ್ಯೆಗನುಗುಣವಾಗಿ ಆಹಾರ ಒದಗಿಸಲು ಅಧುನಿಕ ಸುಧಾರಿತ ತಂತ್ರಜ್ಞಾನವನ್ನು ಕೃಷಿ ಕ್ಷೇತ್ರದಲ್ಲಿ ಬಳಕೆಗೆ ತಂದು ಆಹಾರ ಉತ್ಪಾದನೆಯ ಹೆಚ್ಚಳಕ್ಕೆ ಹೆಚ್ಚಿನ ಗಮನ ಕೊಡಲಾಯಿತು.

ಮಾನವನ ಮೂಲಭೂತ ಅಗತ್ಯಗಳಲ್ಲಿ ಆಹಾರವು ಮಹತ್ವವಾದದ್ದು. ಆಹಾರವು ದೈಹಿಕ ಶ್ರಮದ ದೈನಂದಿನ ಚಟುವಟಿಕೆಗಳಿಗೆ ಶಕ್ತಿ ಒದಗಿಸುವ ಇಂಧನವಾಗಿದೆ. ಎಲ್ಲರೂ ದುಡಿಯುವುದು 'ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ'. ಯಾವುದೇ ದೇಶ ಅಭಿವೃದ್ಧಿ ಸಾಧಿಸಬೇಕಾದರೆ ಮೊದಲು ಆಹಾರದ ಉತ್ಪಾದನೆಯಲ್ಲಿ ಸ್ವಾವಲಂಬಿಯಾಗಿರಬೇಕು. ಅಧುನಿಕ ಪ್ರಕ್ರಿಯೆಗಳಲ್ಲಿ ವ್ಯವಸಾಯವು ಒಂದು ಜೀವನೋಪಾಯ ವ್ಯವಸ್ಥೆ ಎಂಬುದನ್ನು ಮರೆತು ಆಹಾರೇತರ ಬೆಳೆಗಳನ್ನು ಬೆಳೆಯಲು ಪ್ರಾರಂಭಿಸಿದ್ದರಿಂದ ಭಾರತವು ಕೃಷಿ ಪ್ರಧಾನ ದೇಶವಾಗಿದ್ದರೂ ದ್ವಿಗುಣಗೊಳ್ಳುತ್ತಿರುವ ಜನಸಂಖ್ಯೆಗೆ ಆಹಾರ ಒದಗಿಸುವುದು ದುಸ್ಸಾಧ್ಯವಾಯಿತು.

ವಿಶ್ವ ಆಹಾರ ಮತ್ತು ಕೃಷಿ ಸಂಘಟನೆಯ ಅಂದಾಜಿನಂತೆ ಇಪ್ಪತ್ತೊಂದನೆಯ ಶತಮಾನಕ್ಕೆ ಪ್ರಪಂಚದ ಜನಸಂಖ್ಯೆ ಸುಮಾರು ೭೦೦ ಕೋಟಿಯಾಗಲಿದ್ದು ಎಲ್ಲರಿಗೂ ಆಹಾರ ಒದಗಿಸಬೇಕಾದರೆ ಸಾಗುವಳಿ ಭೂಮಿಯ ಶೇ ೪೨ ರಷ್ಟು ಪ್ರದೇಶದಲ್ಲಿ ಆಹಾರ ಧಾನ್ಯಗಳನ್ನು ಬೆಳೆಯ ಬೇಕಾಗುತ್ತದೆ. ಆದರೆ ಈಗ ಶೇ. ೨೫ರಷ್ಟು ಭೂ ಪ್ರದೇಶದಲ್ಲಿ ಆಹಾರ ಧಾನ್ಯಗಳನ್ನು ಬೆಳೆಯಲಾಗುತ್ತಿದ್ದು ಉಳಿದ ಶೇ ೭೦ರಷ್ಟು ಪ್ರದೇಶದಲ್ಲಿ ಆಹಾರೇತರ ಬೆಳೆಗಳನ್ನು ಬೆಳೆಯಲಾಗುತ್ತಿದೆ. ಕೃಷಿ ಪ್ರಧಾನ ರಾಷ್ಟ್ರಗಳು ಆಹಾರ ಉತ್ಪಾದನೆಗೆ ಹೆಚ್ಚು ಮಹತ್ವ ನೀಡದಿದ್ದರೆ ಮನುಕುಲಕ್ಕೆ ಘೋರ ದುರಂತ ಕಾದಿದೆಯೆಂದು ವಿಜ್ಞಾನಿಗಳು ಎಚ್ಚರಿಕೆ ನೀಡಿದ್ದಾರೆ.

ಯಾವುದೇ ಕ್ಷೇತ್ರದಲ್ಲಿ ಅಭಿವೃದ್ಧಿ ಸಾಧಿಸಬೇಕಾದರೆ ಅಲ್ಲಿನ ಮಾನವ ಸಂಪನ್ಮೂಲ ಅತಿ ಮುಖ್ಯವಾಗಿರುತ್ತದೆ. ಆರೋಗ್ಯವಂತ ವ್ಯಕ್ತಿಗಳು ದೇಶದ ನಿಜವಾದ ಸಂಪತ್ತು. ಕೃಷಿ ಕ್ಷೇತ್ರದಲ್ಲಿ ಅಂತಹ, ಯಥೇಚ್ಛವಾಗಿ ದೊರೆಯುವ ಸಂಪನ್ಮೂಲವೆಂದರೆ ಕೃಷಿ ಕ್ಷೇತ್ರದಲ್ಲಿನ ಮಹಿಳೆಯರು. ಗ್ರಾಮೀಣ ಪ್ರದೇಶದಲ್ಲಿನ ಮಹಿಳೆಯರಲ್ಲಿ ಶೇ. ೭೪ರಷ್ಟು ಮಹಿಳೆಯರು ಕೃಷಿ ಚಟುವಟಿಕೆಗಳಲ್ಲಿ ನಿರತರಾಗಿದ್ದಾರೆ. ಶೇ.೨೮ರಷ್ಟು ಮಹಿಳೆಯರು ಸಾಗುವಳಿದಾರರಿದ್ದಾರೆ. ಶೇ ೪೬ರಷ್ಟು ಕೃಷಿಕಾರ್ಮಿಕ ಮಹಿಳೆಯರಿದ್ದಾರೆ. ಕರ್ನಾಟಕದ ಅರ್ಥವ್ಯವಸ್ಥೆಯ ಕೃಷಿಕ್ಷೇತ್ರದಲ್ಲಿ ಮಹಿಳೆಯರದೇ ಸಿಂಹ ಪಾಲು. ವ್ಯವಸಾಯದ ಕೆಲಸಗಳಲ್ಲಿ ನಿರತರಾಗಿರುವ ಒಟ್ಟು ಜನರಲ್ಲಿ ಶೇ. ೫೧.೨ರಷ್ಟು ಮಹಿಳೆಯರಿದ್ದಾರೆ. ಪುರುಷರ ಸಂಖ್ಯೆ ಶೇ. ೪೮.೮ರಷ್ಟು. ಅಂದರೆ ಪುರುಷರಿಗಿಂತ ಆರು ಲಕ್ಷ ಮಹಿಳೆಯರು ಅಧಿಕ ಸಂಖ್ಯೆಯಲ್ಲಿದ್ದಾರೆ. ಸಾಗುವಳಿದಾರರಲ್ಲಿ ಮಹಿಳೆಯರು ಶೇ ೧೬.೪ ರಷ್ಟಿದ್ದಾರೆ. ಕೃಷಿ ಕಾರ್ಮಿಕ ಮಹಿಳೆಯರು ಶೇ. ೪೬.೯ರಷ್ಟಿದ್ದಾರೆ. ಇಲ್ಲಿ ಮಹಿಳಾ ಸಾಗುವಳಿದಾರರು ಕಡಿಮೆಯಿದ್ದು ಕೃಷಿ ಕಾರ್ಮಿಕ ಮಹಿಳೆಯರು ಅಧಿಕ ಸಂಖ್ಯೆಯಲ್ಲಿದ್ದಾರೆ. ಪುರುಷರು ಹೆಚ್ಚಿನ ಕೂಲಿಗಾಗಿ ದೂರದ ಊರುಗಳಿಗೆ ಹೋಗುತ್ತಿರುವುದರಿಂದ ಗ್ರಾಮೀಣ ಪ್ರದೇಶಗಳಲ್ಲಿ ಮಹಿಳಾ ಪ್ರಧಾನ ಕುಟುಂಬಗಳ ಸಂಖ್ಯೆ ಹೆಚ್ಚುತ್ತಲಿದೆ. ೧೯೮೧ ರಲ್ಲಿ ಶೇ. ೧೧.೫ ರಷ್ಟಿದ್ದ ಮಹಿಳಾ ಪ್ರಧಾನ ಕುಟುಂಬಗಳು ೧೯೯೧ ರಲ್ಲಿ ೧೨.೨ ರಷ್ಟಕ್ಕೆ ಏರಿಕೆಯಾಗಿದೆ.

ಕೃಷಿರಂಗದಲ್ಲಿ ಅಧಿಕ ಸಂಖ್ಯೆಯಲ್ಲಿರುವ ಮಹಿಳೆಯರನ್ನು ಬಳಸಿಕೊಂಡು ಆಹಾರೋತ್ಪಾದನೆಯನ್ನು ಹೆಚ್ಚಿಸಲು ಸರಕಾರವು ಅಭಿವೃದ್ಧಿಯ ಹಲವಾರು ಮಹತ್ವದ ಕಾರ್ಯಕ್ರಮಗಳನ್ನು ರೂಪಿಸಿತು. ೬೦-೭೦ರ ದಶಕದಲ್ಲಿಯೇ ಹಸಿರು ಕ್ರಾಂತಿಯ ಹೆಸರಿನಲ್ಲಿ ಆಹಾರೋತ್ಪಾದನೆಯನ್ನು ಹೆಚ್ಚಿಸುವ ಪ್ರಯತ್ನಗಳು ನಡೆದವಾದರೂ ಆಹಾರೇತರ ಬೆಳೆಗಳನ್ನು ಬೆಳೆಯ ತೊಡಗಿದ್ದರಿಂದ ಹೆಚ್ಚುತ್ತಿರುವ ಜನಸಂಖ್ಯೆಗೆ ತಕ್ಕಂತೆ ಆಹಾರದ ಉತ್ಪಾದನೆ ಸಾಧ್ಯವಾಗಲಿಲ್ಲ ಆಗ ಕೃಷಿಯ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಮಹಿಳೆಯರನ್ನು ಒಂದು ಸಮಗ್ರ ಭಾಗವನ್ನಾಗಿಸಿ ಬಳಸಿಕೊಳ್ಳುವುದಕ್ಕೆ ಹೆಚ್ಚು ಒತ್ತು ಕೊಟ್ಟು ಕೃಷಿ ಅಭಿವೃದ್ಧಿಯ ಎಲ್ಲಾ ಕಾರ್ಯಕ್ರಮಗಳಲ್ಲೂ ಮಹಿಳೆಯರಿಗೆ ಶೇ. ೩೩ ರಷ್ಟು

ಸವಲತ್ತುಗಳನ್ನು ಮೀಸಲಿಡಲಾಯಿತು. ಜಮೀನು, ಸಾಲಸೌಲಭ್ಯಗಳು, ತಂತ್ರಜ್ಞಾನ ತರಬೇತಿ ಆವುಗಳನ್ನು ನೀಡುವುದರ ಜೊತೆಗೆ ಅಧುನಿಕ ಸುಧಾರಿತ ಕೃಷಿಯಂತ್ರೋಪಕರಣಗಳು, ಬಿತ್ತನೆ ಬೀಜ, ರಸಾಯನಿಕ ಗೊಬ್ಬರ ಕೀಟನಾಶಕ, ನೀರಾವರಿಯ ಸಲಕರಣೆಗಳು ಮುಂತಾದವುಗಳನ್ನು ರಿಯಾಯಿತಿ ದರದಲ್ಲಿ ನೀಡಲು ಕ್ರಮ ವಹಿಸಲಾಗಿದೆ. ಕೃಷಿಯಲ್ಲಿ ಅಧಿಕ ಇಳುವರಿ ಪಡೆಯಲು ಪೂರಕವಾದ ನೈಸರ್ಗಿಕ ಸಂಪನ್ಮೂಲಗಳಾದ ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸಲು ಭೂಸವಕಳಿಯನ್ನು ತಡೆಗಟ್ಟುವುದು, ಮಳೆಯಾಶ್ರಿತ ಜಲಾಯನ ಅಭಿವೃದ್ಧಿ ಯೋಜನೆ, ಅಭಾವ ಪೀಡಿತ ಪ್ರದೇಶಗಳ ಅಭಿವೃದ್ಧಿ ಯೋಜನೆ, ದಶಲಕ್ಷ ಬಾವಿ ಯೋಜನೆ. ಮುಂತಾದ ಹಲವಾರು ಯೋಜನೆಗಳ ಕಾರ್ಯಕ್ರಮಗಳ ಮೂಲಕ ಕೃಷಿ ಕಾರ್ಮಿಕರಿಗೆ ಉದ್ಯೋಗಾವಕಾಶಗಳನ್ನು ಒದಗಿಸಿಕೊಡಲಾಗಿದೆ. ರೈತರನ್ನು ಪ್ರೋತ್ಸಾಹಿಸಲು ಬೆಳೆವಿಮೆ, ಕೃಷಿವಾರ್ತಾ ಸೇವೆಗಳು, ಹೊಸ ಹೊಸ ಅವಿಷ್ಕಾರಗಳನ್ನು ಪರಿಚಯಿಸಲು, ರೈತರಿಗೆ ಅಧ್ಯಯನ ಪ್ರವಾಸಗಳನ್ನು ಕೈಗೊಳ್ಳುವುದು. ಮಹಿಳೆಯರಿಗಾಗಿಯೇ ಪ್ರತಿ ವರ್ಷ ರೈತ ಮಹಿಳೆಯರು ಕೃಷಿ ಮೇಳ ಏರ್ಪಡಿಸುವುದು, ಮುಂತಾದ ಪ್ರೋತ್ಸಾಹ ಮತ್ತು ಅವಕಾಶಗಳನ್ನು ಒದಗಿಸಲಾಗುತ್ತಿದೆ.

ಸರಕಾರ ಒದಗಿಸುತ್ತಿರುವ ಆಸ್ತಿಯ ಹಕ್ಕು, ಸಾಲ ಸೌಲಭ್ಯಗಳು, ತಾಂತ್ರಿಕ ತರಬೇತಿ, ಮುಂತಾದವುಗಳನ್ನು ಪಡೆದುಕೊಳ್ಳುವಲ್ಲಿರುವ ಅಡೆತಡೆಗಳಿಂದಾಗಿ, ಹಾಗು ಕೃಷಿ ಕ್ಷೇತ್ರದಲ್ಲಿನ ತಂತ್ರಜ್ಞಾನ ತರಬೇತಿಗಳನ್ನು ಪಡೆಯಲಾಗದ ಅತಂತ್ರ ಸ್ಥಿತಿಯಲ್ಲಿ ರುವುದರಿಂದಾಗಿ ಮಹಿಳೆಯರು ಈ ಕಾರ್ಯಕ್ರಮಗಳ ಸಂಪೂರ್ಣ ಲಾಭವನ್ನು ಪಡೆಯುವುದು ಸಾಧ್ಯವಾಗುತ್ತಿಲ್ಲ. ಅಸಂಘಟಿತ ವಲಯವಾದ ಕೃಷಿ ಕ್ಷೇತ್ರದಲ್ಲಿನ ಮಹಿಳೆಯರನ್ನು ಸಾಮಾನ್ಯವಾಗಿ ಮಹಿಳಾ ಸಾಗುವಳಿದಾರರು ಮತ್ತು ಕೃಷಿ ಕಾರ್ಮಿಕರು ಎಂದು ವಿಂಗಡಿಸಬಹುದಾಗಿದೆ. ಮಹಿಳಾ ಸಾಗುವಳಿದಾರರ ಆರ್ಥಿಕ ಸ್ಥಿತಿ ಉತ್ತಮಗೊಂಡು ಸಾಮಾಜಿಕ ಸ್ಥಾನಮಾನಗಳು ಹೆಚ್ಚಾದಂತೆ ಅವರು ಹೊಲಗದ್ದೆಗಳಲ್ಲಿ ಕೆಲಸ ಮಾಡುವುದಿಲ್ಲ. ಕೂಲಿ ಆಳುಗಳಿಂದ ಕೃಷಿ ಕೆಲಸಗಳನ್ನು ಮಾಡಿಸಿಕೊಳ್ಳುತ್ತಾರೆ. ಮಳೆ ಬಂದು ಭೂಮಿ ಉಳುಮೆ ಮಾಡಲು ಪಕ್ವವಾದಾಗ ಕೂಲಿ ಕೆಲಸಕ್ಕೆ ಬರುತ್ತಿದ್ದವರು ತಮ್ಮ ಹೊಲಗದ್ದೆಗಳಲ್ಲಿ ಉಳುಮೆ ಮಾಡಿಕೊಳ್ಳುತ್ತಾರೆ. ವ್ಯವಸಾಯಕ್ಕೆ ಮಳೆಯಾಶ್ರಯವನ್ನೇ ನಂಬಿರುವ ಮಹಿಳಾ ಸಾಗುವಳಿದಾರರು ವ್ಯವಸಾಯದ ಕೆಲಸಗಳಿಗೆ ಕೂಲಿ ಆಳುಗಳನ್ನು ಅವಲಂಬಿಸಿರುವುದರಿಂದ ಮಳೆ ಬಂದು ಸರಿಯಾದ ಸಮಯದಲ್ಲಿ ಉಳುಮೆಮಾಡಿ ಬೀಜ ಬಿತ್ತದಿದ್ದರೆ ಉತ್ಪಾದನೆ ಕುಂಠಿತಗೊಳ್ಳುತ್ತದೆ.ಅಧುನಿಕ ಸುಧಾರಿತ ಕೃಷಿ ಉಪಕರಣಗಳನ್ನು ಬಳಸಿ ಉತ್ಪಾದನೆಯಲ್ಲಿ ತೊಡಗುವುದಕ್ಕೆ ತಾಂತ್ರಿಕ ಕೌಶಲ್ಯದ ಪರಿಣತೆಯ ಕೊರತೆಯಿಂದಾಗಿ ಶ್ರೀಮಂತ ಮಹಿಳಾ ಸಾಗುವಳಿದಾರರು ಸಹ ಕೃಷಿ ಕ್ಷೇತ್ರದಲ್ಲಿ ತಮ್ಮನ್ನು ಸರಿಯಾಗಿ ತೊಡಿಗಿಸಿಕೊಳ್ಳಲಾಗುತ್ತಿಲ್ಲ.

ಅಲ್ಪ ಜಮೀನಿರುವ ಮಧ್ಯಮ ವರ್ಗದ ಮಹಿಳಾ ಸಾಗುವಳಿದಾರರು ತಮ್ಮ ಜಮೀನು ಗಳಲ್ಲಿಯೂ ಕೆಲಸ ಮಾಡುತ್ತಾರೆ. ಮತ್ತು ಬೇರೆಯವರ ಜಮೀನುಗಳಲ್ಲೂ ದುಡಿಯುತ್ತಾರೆ.

ತಮ್ಮ ಜಮೀನುಗಳಿಂದ ಬರುವ ಆದಾಯ ಕುಟುಂಬದ ನಿರ್ವಹಣೆಗೆ ಸಾಕಾಗುವುದಿಲ್ಲ ವಾದ್ದರಿಂದ ಬೇರೆಯುವರ ಜಮೀನುಗಳಲ್ಲಿ ಕೂಲಿ ಕೆಲಸವನ್ನು ಮಾಡುತ್ತಾರೆ. ಈ ವರ್ಗದ ಮಹಿಳೆಯರಿಗೆ ಎತ್ತುಗಾಡಿಗಳನ್ನು ಕೊಳ್ಳಲು, ಬಾವಿ ತೋಡಿಸಲು, ಜಮೀನುಗಳಲ್ಲಿ ಸುಧಾರಣೆ ಮಾಡಲು, ಬಿತ್ತನೆ ಬೀಜ, ರಾಸಾಯನಿಕ ಗೊಬ್ಬರ ಮತ್ತು ಕೃಷಿ ಉಪಕರಣಗಳನ್ನು ಕೊಳ್ಳಲು ಮುಂತಾವುಗಳಿಗೆ ಸಾಲಸೌಲಭ್ಯದ ಜೊತೆಗೆ ಅಧುನಿಕ ಕೃಷಿ ಪದ್ಧತಿಯ ತಾಂತ್ರಿಕ ತರಬೇತಿಯ ಅಗತ್ಯವೂ ಇರುತ್ತದೆ. ಸರಕಾರವು ಒದಗಿಸುತ್ತಿರುವ ಜಮೀನು ಸಾಲಸೌಲಭ್ಯಗಳು, ಮತ್ತು ತರಬೇತಿಗಳನ್ನು ಪಡೆದುಕೊಳ್ಳುವಲ್ಲಿ ಮಹಿಳೆಯರಿಗೆ ಅನೇಕ ಅಡೆತಡೆಗಳಿವೆ.

ಜನರು ಹೊಂದಿರುವ ಸ್ಥಿರ-ಚರಾಸ್ತಿಗಳು ಅವರ ಆರ್ಥಿಕ ಸ್ಥಾನ ಮಾನಗಳನ್ನು ನಿರ್ಧರಿಸುತ್ತವೆ. ಅಲ್ಲದೆ ಅದು ಅವರ ಪ್ರತಿಷ್ಠೆಯ ಸಂಕೇತವೂ ಆಗಿದೆ. ಪಿತೃ ಪ್ರಧಾನ ಕುಟುಂಬಗಳಲ್ಲಿ ಆಸ್ತಿಯ ಒಡೆತನವು ಪುರುಷರದಾಗಿದ್ದು ಒಡೆತನದ ಅಧಿಕಾರವು ವಂಶಪರಂಪರೆಯಾಗಿ ಗಂಡು ಪೀಳಿಗೆಯಿಂದ ಗಂಡು ಪೀಳಿಗೆಗೆ ವರ್ಗಾಯಿಸಲ್ಪಡುತ್ತಿದೆ. ಆಸ್ತಿ ಒಡೆತನದ ಹಕ್ಕನ್ನು ಮಹಿಳೆಯರು ಪಡೆದಾಗ ಮಾತ್ರ ಅವರ ಸ್ಥಾನ ಮಾನ ಸುಧಾರಣೆ ಸಾಧ್ಯವಾಗುತ್ತದೆ. ಅವರ ಜೀವನ ಮಟ್ಟವನ್ನು ಸುಧಾರಿಸುವಲ್ಲಿ ಸಹಕಾರಿಯಾಗುತ್ತದೆ. ಅದರೆ ಸಮಾಜದ ಕಟ್ಟುಪಾಡುಗಳನ್ನು ಮೀರಿ ಮಹಿಳೆಯರಿಗೆ ಆಸ್ತಿಯ ಹಕ್ಕು ದೊರಕುವುದು ಕಾನೂನು ಬಂದಿದ್ದರೂ ಅಷ್ಟೊಂದು ಸುಲಭವಲ್ಲ. ಭೂ ಒಡೆತನದ ಹಕ್ಕು ಪತ್ರಗಳು ತಾತ ಮುತ್ತಾತರ ಹೆಸರಿನಲ್ಲಿದ್ದು ಮಕ್ಕಳು ಅಥವಾ ಮೊಮ್ಮಕ್ಕಳು ಒಕ್ಕಲುತನ ಮಾಡಿಕೊಂಡು ಆಸ್ತಿಯನ್ನು ಅನುಭವಿಸುತ್ತಿದ್ದಾರೆ. ತಮ್ಮ ಹೆಸರುಗಳಿಗೆ ಖಾತೆ ಪಾಣಿ ಮಾಡಿಸಿಕೊಳ್ಳಬೇಕಾದರೆ ಹೆಚ್ಚು ಹಣ ಖರ್ಚಾಗುತ್ತದೆ. ಆದ್ದರಿಂದ ಸಾಲಸೂಲ ಪಡೆಯುವಲ್ಲಿ ಅಗತ್ಯವಾದ ದಾಖಲು ಪತ್ರಗಳನ್ನು ಮಾತ್ರ ಪಡೆದಿರುತ್ತಾರೆ.ಇಂತಹ ಸಂದರ್ಭ ದಲ್ಲಿ ಹೆಚ್ಚು ಹಣ ಖರ್ಚು ಮಾಡಿ ಹೆಂಗಸರ ಹೆಸರಿಗೆ ಆಸ್ತಿ ಒಡೆತನ ವರ್ಗಾಯಿಸುವುದರಿಂದ ಲಾಭವೇನಿದೆ ಎಂದು ಕೇಳುತ್ತಾರೆ. ಸಾಂಪ್ರದಾಯಿಕ ಕುಟುಂಬಗಳಲ್ಲಿ ಆಸ್ತಿಯ ಒಡೆತನವು ಪುರುಷರ ಪ್ರತಿಷ್ಠೆಯಾಗಿದ್ದು ಸ್ತ್ರೀಯರಿಗೆ ಆಸ್ತಿ ಒಡೆತನ ನೀಡುವುದು ಅಸಹಾಯಕರ ಲಕ್ಷಣವೆಂದು, ಇಂತಹ ಕಾನೂನುಗಳು ಕುಟುಂಬದಲ್ಲಿ ಪತಿ ಪತ್ನಿಯ ಮಧ್ಯೆ ಕಲಹಕ್ಕೆ ಕಾರಣವಾಗುತ್ತವೆ ಎಂದೂ ದೂರುತ್ತಾರೆ. ಸರಕಾರದಿಂದ ಪುಕ್ಕಟೆ ಸವಲತ್ತುಗಳು ಬರುವುದಾದರೆ ಆಸ್ತಿಯ ಜಂಟಿ ಖಾತೆಯ ಒಡೆತನ ನೀಡಲು ಕೆಲವರು ಒಪ್ಪುತ್ತಾರೆ. ಮಹಿಳೆಯರಿಗೆ ಆಸ್ತಿಯ ಒಡೆತನ ಪಡೆಯುವ ಮನಸ್ಸಿದ್ದರೂ, ಕಾನೂನು ಅವಕಾಶಗಳನ್ನು ಕಲ್ಪಿಸಿದ್ದರೂ ಇಂತಹ ತೊಂದರೆಗಳಿಂದಾಗಿ ತೆಪ್ಪಗಿರುತ್ತಾರೆ. ಬಹುತೇಕ ಮಹಿಳೆಯರಿಗೆ ಆಸ್ತಿಯ ಕಾನೂನು ತಿದ್ದುಪಡಿಗಳ ಬಗ್ಗೆ ತಿಳಿದಿಲ್ಲ. ತಿಳಿದಿರುವವರು ಕೆಲವೇ ಮಂದಿ ತಮ್ಮ ಹಕ್ಕೊತ್ತಾಯಕ್ಕೆ ಹೋರಾಡಿದರೂ ನ್ಯಾಯ ದೊರೆಯದೆ ನಿರಾಶರಾಗಿದ್ದಾರೆ. ಬಡ ಮಹಿಳೆಯರಿಗೆ ಸರಕಾರ ನೀಡಿದ ಜಮೀನು, ಹೆಣ್ಣು ಮಕ್ಕಳಿಗೆ ಬಳುವಳಿಯಾಗಿ ನೀಡಿದ

ಆಸ್ತಿ ಹಾಗು ವಿಧವೆಯರಿಗೆ ಗಂಡನ ಮನೆಯ ಆಸ್ತಿ ಇಂತಹ ಆಸ್ತಿಗಳ ಒಡೆತನದ ಹಕ್ಕು ಮಾತ್ರ ಸ್ತ್ರೀಯರಿಗೆ ದಕ್ಕಿವೆ. ಹಣ ಅಥವಾ ಬಂಡವಾಳ ಪ್ರತಿಯೊಂದು ವ್ಯವಹಾರದ ಜೀವಾಳವಾದ್ದರಿಂದ ಹಣವಿಲ್ಲದೆ ಯಾವ ವ್ಯವಹಾರವು ನಡೆಯುವುದಿಲ್ಲ. ವ್ಯವಸಾಯ ಕ್ಷೇತ್ರ ಇದಕ್ಕೆ ಹೊರತಾಗಿಲ್ಲ. ರೈತರಿಗೆ ಅನೇಕ ಅಗತ್ಯಗಳಿಗೆ ಸಾಲಸೌಲಭ್ಯಗಳ ಅಗತ್ಯವಿರುತ್ತದೆ. ವಿದ್ಯುಕ್ತ ಹಣಕಾಸು ಸಂಸ್ಥೆಗಳು, ಬ್ಯಾಂಕುಗಳು ರೈತರಿಗೆ ಅಲ್ಪಾವಧಿ, ಮಧ್ಯಮಾವಧಿ ಹಾಗೂ ದೀರ್ಘಾವಧಿ ಸಾಲ ಸೌಲಭ್ಯಗಳನ್ನು ಒದಗಿಸುತ್ತವೆ. ಅದರೆ ಮಹಿಳೆಯರಿಗೆ ಸಾಲ ನೀಡುವಲ್ಲಿ ಬ್ಯಾಂಕುಗಳು ಸತತ ತಡೆಯೊಡ್ಡುತ್ತವೆ. ಕೃಷಿಗೆ ಸಂಬಂಧಿಸಿದಂತೆ ಸಾಲಸೌಲಭ್ಯ ಪಡೆಯಬೇಕಾದರೆ ಆಸ್ತಿಯ ಒಡೆತನ ಪತ್ರ, ಆಸ್ತಿಯ ಸ್ವಾಧೀನ ಹಕ್ಕುಪತ್ರ ಮತ್ತು ಆಸ್ತಿಗೆ ಸಂಬಂಧಿಸಿದಂತೆ ಬೇರೆಯವರ ಅಡ್ಡಿ ಆತಂಕಗಳಿಂದ ಮುಕ್ತವಾದ ಪ್ರಮಾಣ ಪತ್ರಗಳನ್ನು ನೀಡಬೇಕಾಗುತ್ತದೆ. ಮಹಿಳೆಯರು ಆಸ್ತಿಯ ಜಂಟಿ ಖಾತೆಯ ಒಡೆತನ ಪಡೆದಿದ್ದರೂ ಸಾಲ ಪಡೆಯುವಾಗ ಗಂಡನ ಸಹಿ ಬೇಕಿರುತ್ತದೆ. ಸಾಂಪ್ರದಾಯಿಕ ಒಡೆತನ ಬಿಟ್ಟು ಕೊಡದ ಪುರುಷರು ಸಾಲ ಪಡೆಯುವಾಗ ಸಹಿಮಾಡಲು ಒಪ್ಪುವುದಿಲ್ಲ. ಸೀಮಿತ ಶಿಕ್ಷಣದಿಂದಾಗಿ ಮಹಿಳೆಯರು ಇಂತಹ ಜಟಿಲ ಸಾಲಕ್ರಮ ವಿಧಾನ ನಿರ್ವಹಿಸಲಾಗುತ್ತಿಲ್ಲ. ಸರಕಾರೇತರ ಸಂಸ್ಥೆಗಳು ಉತ್ಪಾದನೆಯ ಉದ್ದೇಶಗಳಿಗೆ ಸಾಲ ಸೌಲಭ್ಯಗಳನ್ನು ಪಡೆಯುವಲ್ಲಿ ಅನುವು ಮಾಡಿ ಕೊಟ್ಟಿದ್ದರೂ ಅವಿವಾಹಿತ ಮಹಿಳೆಯರು, ಮದುವೆಯಾದ ನಂತರ ಗಂಡನ ಮನೆಯಲ್ಲಿ ಬೇರೆ ಊರುಗಳಲ್ಲಿ ನೆಲೆಸುತ್ತಾರಾದ್ದರಿಂದ ಇಂತಹ ಮಹಿಳೆಯರು ಸಾಲ ಪಡೆಯುವಾಗ ಪುರುಷರ ಜಾಮೀನು ಪಡೆಯಬೇಕಾಗುತ್ತದೆ. ಹೀಗಾಗಿ ಮಹಿಳೆಯರು ಸಾಲ ಸೌಲಭ್ಯಗಳನ್ನು ಪಡೆಯಬೇಕೆಂದರೆ ಕಷ್ಟ ಕೋಟಲೆಗಳು ಸಾಲುಗಟ್ಟಿ ನಿಲ್ಲುತ್ತವೆ.

ತರಬೇತಿಯು ಮಾನವ ಸಂಪನ್ಮೂಲಗಳು ತೊಡಗಿಸಿಕೊಳ್ಳಲಿರುವ ಒಂದು ಭೌತಿಕ ಬಂಡವಾಳವಾಗಿದೆ. ಕೃಷಿ ಅಭಿವೃದ್ಧಿ ಪ್ರಕ್ರಿಯೆಯು ಬಹು ಸಂಕೀರ್ಣವಾದದ್ದು. ಅಧುನಿಕ ಕೃಷಿ ಪದ್ಧತಿಯಲ್ಲಿ ತಾಂತ್ರಿಕ ತರಬೇತಿ ಅಗತ್ಯವಾಗಿದೆ. ಒಂದು ಕಡೆ ಸಾಮಾಜಿಕ, ಆರ್ಥಿಕ ಕಟ್ಟುಪಾಡುಗಳು, ಕುಟುಂಬದ ಜವಾಬ್ದಾರಿ, ಸಮಯದ ಆಭಾವ, ಹೊಸದನ್ನು ಕಲಿಯುವಲ್ಲಿ ಸಂಕೋಚ, ಮಾಹಿತಿಗಳ ಕೊರತೆ ಮುಂತಾದ ತೊಂದರೆಗಳಿಂದಾಗಿ ತರಬೇತಿಗಳಲ್ಲಿ ಮಹಿಳೆಯರು ತಮ್ಮನ್ನು ತೊಡಗಿಸಿಕೊಳ್ಳಲಾಗುತ್ತಿಲ್ಲವಾದರೆ. ಮತ್ತೊಂದು ಕಡೆ ಕೃಷಿ ವಲಯದಲ್ಲಿ ಯಾವುದೇ ತರಬೇತಿ ಸೇವಾಸೌಲಭ್ಯಗಳು ಬಂದರೂ ಅದರ ಗರಿಷ್ಟ ಅನುಕೂಲಗಳನ್ನು ಪುರುಷರೇ ಪಡೆದು ಕೊಳ್ಳುತ್ತಿದ್ದಾರೆ. ೧೯೬೦ ರಲ್ಲಿ ರೈತ ಕಾರ್ಯೋಪಕಾರಿ ಯೋಜನೆಗಳು ರೂಪಗೊಂಡಿದ್ದು ಇವುಗಳಡಿ ಅಕ್ಷರ ಜ್ಞಾನದೊಂದಿಗೆ ರೈತರಿಗೆ ಹೊಸ ಕೃಷಿ ಪದ್ಧತಿಗಳ ಬಗ್ಗೆ ಶಿಕ್ಷಣ ಹಾಗು ಸುಧಾರಿತ ಕೃಷಿ ಪದ್ಧತಿಗಳ ಜ್ಞಾನಾಭಿವೃದ್ಧಿ ಕಾರ್ಯಗಳನ್ನು ರೂಪಿಸಿತಾದರೂ ಶ್ರೀಮಂತ ರೈತರು ಮಾತ್ರ ಇದರ ಪೂರ್ಣ ಪ್ರಯೋಜನ ಪಡೆದುಕೊಂಡರು. ಮೇಲೆ ಹೇಳಿದ ಹಲವಾರು ತೊಂದರೆಗಳು ಮತ್ತು ಕಾರಣಗಳಿಂದಾಗಿ

ಮಹಿಳೆಯರು ಈ ಯೋಜನೆಯ ವ್ಯಾಪ್ತಿಯಿಂದ ದೂರವೇ ಉಳಿದರು. ಹೀಗೆ ಮಹಿಳೆಯರು ಆಧುನಿಕ ಸುಧಾರಿತ ಕೃಷಿ ಪದ್ಧತಿಯಲ್ಲಿ ತಮ್ಮನ್ನು ಒಗ್ಗಿಸಿಕೊಳ್ಳಲಾಗದೆ ಹೋದರು. ಈ ಬಗೆಯ ಹಲವಾರು ತೊಂದರೆಗಳಿಂದಾಗಿ ಮಹಿಳೆಯರು ಕೃಷಿಕ್ಷೇತ್ರದಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲಾಗುತ್ತಿಲ್ಲ.

ಆಧುನೀಕರಣ ಪ್ರಕ್ರಿಯೆಯಲ್ಲಿ ತಂತ್ರಜ್ಞಾನದಿಂದ ಉಂಟಾದ ಹಸಿರು, ನೀಲಿ, ಬಿಳಿ, ಹಳದಿ ಕ್ರಾಂತಿಗಳು ಬೀರಿದ ಪರಿಣಾಮದಿಂದ ಹಾಗು ಅಧುನಿಕ ತಂತ್ರಜ್ಞಾನವನ್ನು ಹೆಚ್ಚು ಬಳಕೆಗೆ ತಂದಂತೆಲ್ಲಾ ಗ್ರಾಮೀಣ ಮಹಿಳೆಯರಿಗೆ ಆಧಾರವಾಗಿದ್ದ ಉಪಕಸುಬುಗಳು ನಿಧಾನವಾಗಿ ನಶಿಸಿ ಹೋಗುತ್ತಿವೆ. ಅಧುನಿಕ ಮತ್ತು ಪಾರಂಪರಿಕ ಕೃಷಿಯ ತಿಕ್ಕಾಟದಲ್ಲಿ ಮಹಿಳೆಯರಿಗಿದ್ದ ಮೊದಲಿನ ಅವಕಾಶಗಳೂ ಕಳೆದು ಹೋಗುತ್ತಿವೆ.

ಶ್ವೇತಕ್ರಾಂತಿಯ ಪರಿಣಾಮದಿಂದಾಗಿ ರಿಯಾಯಿತಿ ದರದಲ್ಲಿ ದೊರೆಯುವ ಹೆಚ್ಚು ಹಾಲು ಕೊಡುವ ಮಿಶ್ರತಳಿ ಹಸುಗಳು ಬರತೊಡಗಿದವು. ಅವುಗಳ ನಿರ್ವಹಣೆಯ ಕೆಲಸ ಮಹಿಳೆಯರಿಗೆ ಹೆಚ್ಚಾಯಿತು. ಆದರೆ ಡೈರಿಗೆ ಹಾಲು ಕೊಂಡೊಯ್ಯುವ ಕೆಲಸ ಮಾತ್ರ ಗಂಡಸರದಾಗ ತೊಡಗಿದಾಗ ಹಾಲು ಮಾರಾಟದಿಂದ ಬಂದ ಹಣ ಪುರುಷರ ಕೈ ಸೇರತೊಡಗಿತು. ಇದರಿಂದಾಗಿ ಮನೆಯ ಸಣ್ಣ ಪುಟ್ಟ ಖರ್ಚುಗಳನ್ನು ನಿಭಾಯಿಸುವುದು ಮಹಿಳೆಯರಿಗೆ ಕಷ್ಟವಾಗ ತೊಡಗಿತು. ಹೆಚ್ಚು ಹಾಲು ಕೊಡುವ ಮಿಶ್ರ ತಳಿ ಹಸುಗಳು ಕಡಿಮೆ ಹಾಲು ಕರೆಯುವ ಜವಾರಿ ಹಸುಗಳ ಮೇಲೆ ಸವಾರಿ ಮಾಡತೊಡಗಿದವು. ಕಾಡು ಮೇಡುಗಳಿಂದ ಮೇಯ್ದು ಬರುತ್ತಿದ್ದ ನಾಟಿ ಹಸುಗಳ ನಿರ್ವಹಣೆಯ ಕೆಲಸದ ಹೊರೆ ಮಹಿಳೆಯರಿಗೆ ಕಡಿಮೆ ಇತ್ತು. ಅಲ್ಲದೆ ಈ ಹಸುಗಳು ಕೊಡುವ ಹಾಲಿನ ಪ್ರಮಾಣವನ್ನು ತುಂಬಾ ಕಡಿಮೆ ಎಂಬುದರಿಂದ ಪುರುಷರು ಗಮನಿಸುತ್ತಿರಲಿಲ್ಲವಾದ್ದರಿಂದ ಆ ಹಾಲಿನ ಮಾರಾಟದಿಂದ ಬಂದ ಹಣದಿಂದ ಮಹಿಳೆಯರು ಮನೆಯ ಖರ್ಚು ನೀಗಿಸಿಕೊಳ್ಳುತ್ತಿದ್ದರು. ಮಿಶ್ರತಳಿ ಹಸುಗಳು ಕೊಡುವ ಎತ್ತುಗಳು ನಗರದ ಜನರಂತೆ ದಷ್ಟ ಪುಷ್ಟವಾಗಿ ಬೆಳೆದಿದ್ದರೂ ಹೆಚ್ಚು ಭಾರ ಎಳೆಯುವ ಸಾಮರ್ಥ್ಯ ಇಲ್ಲವಾದ್ದರಿಂದ ಮಿಶ್ರ ತಳಿ ಎತ್ತುಗಳು ವ್ಯವಸಾಯ ದಲ್ಲಿ ಉಪಯುಕ್ತವಾಗಿಲ್ಲ. ಜವಾರಿ ಹಸುಗಳು ಕೊಡುವ ಕರುಗಳು ಚೂಟಿಯಾಗಿದ್ದು ವ್ಯವಸಾಯಕ್ಕೆ ಅನುಕೂಲವಾಗಿವೆ.

ಬ್ರಾಯಲರ್ ಕೋಳಿಗಳು ಬಂದ ಮೇಲೆ ಗ್ರಾಮೀಣ ಪ್ರದೇಶಗಳಲ್ಲಿ ನಾಟಿ ಕೋಳಿಗಳ ಸಂಖ್ಯೆ ಕಡಿಮೆಯಾಗುತ್ತಿದೆ. ಕಡಿಮೆ ಬೆಲೆಗೆ ಹೆಚ್ಚು ಮಾಂಸ ಒದಗಿಸುವ ಬ್ರಾಯಿಲರ್ ಕೋಳಿಗಳ ಮುಂದೆ ನಾಟಿ ಕೋಳಿಗಳು ಸಾಟಿಯಿಲ್ಲದಂತಾದವು. ಗುಣ ಮಟ್ಟದಲ್ಲಿ ನಾಟಿ ಕೋಳಿ ಮತ್ತು ಮೊಟ್ಟೆಗಳು ತಮ್ಮ ಶ್ರೇಷ್ಠತೆಯನ್ನು ಉಳಿಸಿಕೊಂಡು ಬಂದಿವೆಯಾದರೂ ಅಧಿಕ ಬೆಲೆಯಿಂದಾಗಿ ಅವುಗಳ ಬೇಡಿಕೆ ಕಡಿಮೆಯಾದ್ದರಿಂದ ಮಹಿಳೆಯರು ಕೋಳಿ ಸಾಕುವ ತಮ್ಮ ಉಪಕಸುಬಿನಲ್ಲೂ ನಷ್ಟವನ್ನೆದುರಿಸುತ್ತಿದ್ದಾರೆ.

ಮೀನುಗಾರ ಕುಟುಂಬಗಳಲ್ಲಿನ ಮಹಿಳೆಯರು ಮೀನು ಕಾರ್ಯಗಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ನೈಲಾನ್ ಬಲೆಗಳು ಬರತೊಡಗಿದಾಗ ಬಲೆ ಹೆಣೆಯುವ ಮಹಿಳೆಯರ ವೃತ್ತಿ ಮೂಲೆಗುಂಪಾಯಿತು. ಮೀನಿನ ಸಂಸ್ಕರಣ ಆಹಾರ ಪರಿವರ್ತಿಸುವ ಕೆಲಸ ಐಸ್ ಬರುವುದಕ್ಕೆ ಮುಂಚೆ ಮಹಿಳೆಯರದಾಗಿತ್ತು. ಮೀನುಗಾರಿಕೆಯೂ ಯಾಂತ್ರಿಕರಣಗೊಂಡಾಗ ಹಾಗು ಸರಕಾರದ ಪಾತ್ರ ಮೀನುಗಾರಿಕೆಯಲ್ಲಿ ಹೆಚ್ಚಾದಂತೆ ಮಹಿಳೆಯರ ಕೌಶಲ್ಯ ಮೂಲೆ ಗುಂಪಾಗ ತೊಡಗಿತು. ಸಾಲಸೌಲಭ್ಯಗಳು ಪುರುಷರಿಗೆ ದೊರೆಯುತ್ತಿದ್ದವು. ಅಲ್ಲಿನ ಪ್ರಭು ಶಕ್ತಿಯ ಕೆಲವೇ ಮಂದಿ ಮಹಿಳೆಯರು ಆ ಉದ್ಯಮದಲ್ಲಿ ಉಳಿಯವಂತಾಯಿತು. ಕೆಳವರ್ಗದ ಮಹಿಳೆಯರು ಇಲ್ಲಿ ಸ್ಪರ್ದಿಸಲಾಗದೆ ಹೊರ ಬಂದು ಇಂದು ಕಾರ್ಖಾನೆಗಳಲ್ಲಿ ಸೀಗಡಿ ಸುಲಿಯುವ ದಿನಗೂಲಿ ನೌಕರರಾಗಿ ದುಡಿಯುತ್ತಿದ್ದಾರೆ.

ಕೃಷಿ ಮತ್ತು ಕೈಗಾರಿಕೆಯನ್ನೊಳಗೊಂಡ ಸಂಕೀರ್ಣ ಉದ್ಯಮವಾದ ರೇಷ್ಮೆಕೃಷಿ ಒಕ್ಕಲುತನದ ಮತ್ತೊಂದು ಅಂಗ. ಹೆಚ್ಚು ಬಂಡವಾಳವಿಲ್ಲದೆಯೇ ಸ್ಥಳೀಯವಾಗಿ ದೊರೆಯುವ ಸಲಕರಣೆಗಳನ್ನು ಬಳಸಿಕೊಂಡು ಕೈಗೊಳ್ಳಬಹುದಾದ ಉಧ್ಯಮವಾದ್ದರಿಂದ ಮಹಿಳೆಯರು, ಅದರಲ್ಲಿಯೂ ತಮ್ಮ ಬದುಕನ್ನು ನಾಲ್ಕು ಗೋಡೆಗಳ ಮಧ್ಯೆ ಸೀಮಿತಗೊಳಿಸಿಕೊಂಡಿರುವ ಮಹಿಳೆಯರು ಸಹ, ಇದನ್ನು ಕೈಗೊಳ್ಳಬಹುದಾಗಿದೆ. ಮಹಿಳೆಯರನ್ನು ತೊಡಗಿಸಿಕೊಂಡು ಉತ್ತಮ ಗುಣಮಟ್ಟದ ರೇಷ್ಮೆ ಉತ್ಪಾದಿಸಲು ಕರ್ನಾಟಕ ಸರಕಾರ ೧೯೯೪ರ ವರ್ಷವನ್ನು ರೇಷ್ಮೆಕೃಷಿ ಮಹಿಳೆಯರ ವರ್ಷವನ್ನಾಗಿ ಆಚರಿಸಿತು. ಮಹಿಳೆಯರು ಹಿಪ್ಪುನೇರಳೆ ವ್ಯವಸಾಯದಿಂದ ಹಿಡಿದು ರೇಷ್ಮೆ ಹುಳು ಸಾಕಣೆ, ರೇಷ್ಮೆ ನೂಲು ಬಿಚ್ಚುವುದು, ನೂಲು ಹುರಿ ಮಾಡುವುದು, ಸಿದ್ದ ಉಡುಪುಗಳ ತಯಾರಿಸುವುದು, ಮಾರಾಟ, ಜಾಹಿರಾತು ಮುಂತಾದ ಕೆಲಸಗಳನ್ನು, ಅಂದರೆ ಈ ಉದ್ಯಮದ ಶೇ. ೬೩ರಷ್ಟು ಕೆಲಸಗಳನ್ನು ಮಹಿಳೆಯರೇ ನಿರ್ವಹಿಸುತ್ತಿದ್ದಾರೆ. ಬಾಕಿ ಕಟ್ಟುವಿಕೆ, ರೋಗ ನಿಯಂತ್ರಣ ಮುಂತಾದವು ನಿಪುಣತೆಯನ್ನು ಬೇಡುವ ಕೆಲಸಗಳನ್ನು ಪುರುಷರೇ ನಿರ್ವಹಿಸುತ್ತಾರೆ. ಇಂತಹ ಸೂಕ್ಷ್ಮ ನಿಪುಣತೆಯ ಕೆಲಸಗಳನ್ನು ನಿರ್ವಹಿಸಲು ಮಹಿಳೆಯರಿಗೆ ಕೌಶಲ್ಯದ ಕೊರತೆಯಿದೆ. ಮಾರುಕಟ್ಟೆಯಲ್ಲಿ ಸೂಕ್ತ ಅವಕಾಶಗಳಿಲ್ಲದೆ, ಹಾಗೂ ಸಾರಿಗೆ ಸೌಲಭ್ಯಗಳ ತೊಂದರೆ ಮುಂತಾದವುಗಳಿಂದಾಗಿ ಮಹಿಳೆಯರು ಈ ಉದ್ಯಮದಲ್ಲಿಯೂ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳಲಾಗುತ್ತಿಲ್ಲ. ಪುರುಷರು ವಾಣಿಜ್ಯ ಬೆಳೆಗಳನ್ನು ಹೆಚ್ಚು ಹೆಚ್ಚು ಬೆಳೆದಂತೆಲ್ಲಾ ಮಹಿಳೆಯರ ಆರ್ಥಿಕ ಸ್ಥಿತಿ ಬಿಗಡಾಯಿಸತೊಡಗಿದೆ.

ಕೌಟುಂಬಿಕ ಸ್ವಾವಲಂಬನೆಯನ್ನು ಗುರಿಯಾಗಿ ಹೊಂದಿರುವ ಗ್ರಾಮೀಣ ಮಹಿಳೆಯರು ಮತ್ತು ಬುಡಕಟ್ಟು ಮಹಿಳೆಯರು ನಿಸರ್ಗದೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಂಡಿದ್ದು ತಮಗೆ ಅಗತ್ಯವಾದ ವಸ್ತುಗಳನ್ನು ಪಡೆದುಕೊಳ್ಳುತ್ತಿದ್ದರು. ದೇಶದ ಅಭಿವೃದ್ಧಿ ಸಾಧಿಸುವ ಅವಸರದಲ್ಲಿ, ಅಧುನೀಕರಣ, ಉದಾರೀಕರಣ, ಕೈಗಾರಿಕೀಕರಣಗಳ ಪರಿಣಾಮದಿಂದಾಗಿ, ಹಳ್ಳಿಗಳು ಅರಣ್ಯ ಕಳೆದುಕೊಂಡು ಬೆತ್ತಲಾಗುತ್ತಿವೆ. ಗ್ರಾಮೀಣ ಮಹಿಳೆಯರು ಉಚಿತವಾಗಿ

ಪಡೆಯುತ್ತಿದ್ದ ಸೌದೆ ಇಲ್ಲದಂತಾಗಿ ಸೀಮೆ ಎಣ್ಣೆಯ ಮರೆಹೋಗಬೇಕಾಗಿದೆ. ಕೃಷಿಯನ್ನೇ ಮೂಲ ಉದ್ಯೋಗವನ್ನಾಗಿ ಅವಲಂಬಿಸಿ ನಾಗರೀಕತೆಯ ನೆರಳೇ ಇಲ್ಲದೆ ಬದುಕುತ್ತಿದ್ದ ಬುಡಕಟ್ಟು ಸಮುದಾಯಗಳು ಇಂದು ನಿರ್ಗತಿಕರಾಗುತ್ತಿದ್ದಾರೆ. ದೊಡ್ಡ ದೊಡ್ಡ ಕೈಗಾರಿಕೆಗಳನ್ನು ಸ್ಥಾಪಿಸಲು ಹೊರಟು ಆ ಸಮುದಾಯಗಳನ್ನು ಬೇಡದ ತ್ಯಾಜ್ಯ ವಸ್ತುಗಳಂತೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಎಸೆಯುತ್ತಿರುವುದರಿಂದ ಮನೆ ಮಠ, ಆಸ್ತಿ ಕಳೆದುಕೊಂಡು ಬುಡಕಟ್ಟು ಮಹಿಳೆಯರು ಕಂಗಾಲಾಗುತ್ತಿದ್ದಾರೆ.

ಗ್ರಾಮೀಣ ಮಹಿಳೆಯರು ಪಾರಂಪರಿಕ ಕೃಷಿಕ್ಷೇತ್ರದಲ್ಲಿ ಸಾಗುವಳಿದಾರರಾಗಿ, ಕೃಷಿಕಾರ್ಮಿಕರಾಗಿ, ಕುಟುಂಬದ ಆರ್ಥಿಕ ಬೆಂಗಾವಲಾಗಿ ದುಡಿಯುತ್ತಿದ್ದರು. ಆಧುನಿಕ ಕೃಷಿ ಪದ್ಧತಿಯಲ್ಲಿ ಅವರ ಪಾತ್ರವನ್ನು ಗಣನೆಗೆ ತೆಗೆದುಕೊಳ್ಳಲಾಗುತ್ತಿಲ್ಲ. ವ್ಯವಸಾಯದಲ್ಲಿ ಮಹಿಳೆಯ ಪಾತ್ರ ಅಪಾರವಾದದ್ದು. ಬೀಜ ಬಿತ್ತುವುದು, ಪೈರು ನಾಟಿ ಮಾಡುವುದು, ಕಳೆ ಕೀಳುವುದು, ನೇಗಿಲು ಹಿಡಿಯುವುದೊಂದನ್ನು ಬಿಟ್ಟು, ಉಳಿದೆಲ್ಲಾ ಕೆಲಸಗಳನ್ನೂ ಮಹಿಳೆಯರು ನಿರ್ವಹಿಸುತ್ತಿದ್ದಾರೆ. ತಮಿಳು ನಾಡಿನಲ್ಲಿ ಇತ್ತೀಚೆಗೆ ಕೈಗೊಂಡ ಒಂದು ಅಧ್ಯಯನದ ಪ್ರಕಾರ ಅಡಿಗೆ, ಉಟೋಪಚಾರಗಳ ಕೆಲಸದಲ್ಲಿ ಮಹಿಳೆಯರು ಶೇ ೩೦.೧ ರಷ್ಟು ಶ್ರಮವನ್ನು ವ್ಯಯಿಸುತ್ತಾರೆ. ಉಳಿದಂತೆ ಶೇ. ೨೦.೭, ಶೇ. ೧೯.೮, ಶೇ. ೧೬.೫, ಶೇ. ೯.೬ ಮತ್ತು ಶೇ. ೩.೩ ರಷ್ಟನ್ನು ಕ್ರಮವಾಗಿ ಬಟ್ಟೆ ಒಗೆಯುವುದು, ನೀರು ಸಂಗ್ರಹಿಸುವುದು, ಕುಟುಂಬದ ನಿರ್ವಹಣೆ, ಮಕ್ಕಳ ಪಾಲನೆ, ಸೌದೆ ತರುವುದು ಮುಂತಾದ ಕೆಲಸಗಳಲ್ಲಿ ತಮ್ಮ ಶ್ರಮವನ್ನು ವ್ಯಯಿಸುತ್ತಾರೆ.

ಕೃಷಿ ಕ್ಷೇತ್ರದಲ್ಲಿ ಅಧಿಕ ಸಂಖ್ಯೆಯಲ್ಲಿರುವ ಮತ್ತೊಂದು ವರ್ಗವೆಂದರೆ ಕೃಷಿ ಕಾರ್ಮಿಕ ಮಹಿಳೆಯರು. ಇವರಲ್ಲಿ ಭೂರಹಿತರು ಹಾಗೂ ಪರಿಶಿಷ್ಟ ಜಾತಿ ಮತ್ತು ಪಂಗಡದವರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ವ್ಯವಸಾಯ ಕೂಲಿಯೇ ಇವರ ಜೀವನದ ಮಾರ್ಗೋಪಾಯವಾಗಿದೆ. ಕೃಷಿ ಉತ್ಪಾದನೆಯನ್ನು ಹೆಚ್ಚಿಸುವ ಅವಸರದಲ್ಲಿ ಆಧುನಿಕ ಸುಧಾರಿತ ಕೃಷಿ ಉಪಕರಣಗಳಾದ ಟ್ರ್ಯಾಕ್ಟರ್, ಟಿಲ್ಲರ್, ಕಟಾವು ಮಾಡುವ ಯಂತ್ರ, ಭತ್ತದ ನಾಟಿ ಮಾಡುವ ಯಂತ್ರ ಮುಂತಾದ ಯಾಂತ್ರಿಕ ಉಪಕರಣಗಳ ಬಳಕೆಯಿಂದಾಗಿ ಈ ಮಹಿಳೆಯರು ಕೃಷಿಯಲ್ಲಿನ ತಮ್ಮ ಕೆಲಸಗಳನ್ನು ಕಳೆದುಕೊಳ್ಳುತ್ತಿದ್ದಾರೆ. ಕೃಷಿ ಕ್ಷೇತ್ರದಲ್ಲಿನ ತಂತ್ರಜ್ಞಾನ ಪಾಶ್ಚಿಮಾತ್ಯ ತಂತ್ರಜ್ಞಾನದ ಅನುಕರಣೆಯಾಗಿದೆ. ಇದರ ಸ್ವಭಾವವೆಂದರೆ ಕಾರ್ಮಿಕರ ಸಂಖ್ಯೆ ಕಡಿಮೆ ಇದ್ದು ಮಾನವ ಶಕ್ತಿ ವಿರಳವಾಗಿರುವಂತಹ ಮತ್ತು ಯಂತ್ರಶಕ್ತಿಯನ್ನು ಯಥೇಚ್ಛವಾಗಿ ಬಳಸುವಂತದ್ದಾಗಿದೆ. ಆದರೆ ನಮ್ಮಲ್ಲಿ ಅಗತ್ಯಕ್ಕಿಂತ ಅಧಿಕ ಸಂಖ್ಯೆಯ ಕಾರ್ಮಿಕರಿದ್ದು, ನಿರುದ್ಯೋಗ, ಮರೆಮಾಚಿದ ನಿರುದ್ಯೋಗ ಹುದುಗಿ ಕುಳಿತಿರುವಾಗ, ಅಗತ್ಯವಿಲ್ಲದ ತಂತ್ರಜ್ಞಾನ ಬಳಕೆಯು ನಮ್ಮ ಕೃಷಿಕಾರ್ಮಿಕರ ಕೆಲಸಗಳನ್ನು ಕಿತ್ತುಕೊಂಡು ಅವರನ್ನು ನಿರ್ಗತಿಕರನ್ನಾಗಿ ಮಾಡುತ್ತಿದೆ.

ಕೆಲಸಗಳನ್ನು ಹುಡುಕಿಕೊಂಡು ನಗರಗಳಿಗೆ ದಾವಿಸುತ್ತಿರುವ ಗ್ರಾಮೀಣರಿಗೆ ಅಲ್ಲಿಯೂ

ಉದ್ಯೋಗವಿಲ್ಲದೆ, ದುಡಿಯಲು ಕೂಲಿಸಿಗದೆ ಕನಿಷ್ಠ ಸೌಲಭ್ಯಗಳೂ ಇಲ್ಲದಂತಾಗಿ ಅವರು ನಗರ ಪ್ರದೇಶಗಳಲ್ಲಿ ಕೊಳಚೆಗೇರಿಗಳನ್ನು ಸೃಷ್ಟಿಸುತ್ತಿದ್ದಾರೆ. ಕುಟುಂಬದ ನಿರ್ವಹಣೆ ಹೊತ್ತಿರುವ ಮಹಿಳೆಯರು, ಪುರುಷರಂತೆ ದೂರದ ಊರುಗಳಿಗೆ ಕೂಲಿ ಹುಡುಕಿಕೊಂಡು ಹೋಗಲಾರದೆ, ಇತ್ತ ಕೃಷಿಯೇತರ ಉದ್ಯೋಗಗಳೂ ಇಲ್ಲದಂತಾಗಿ ಕೃಷಿಕಾರ್ಮಿಕ ಮಹಿಳೆಯರು ಬೀದಿಪಾಲಾಗುತ್ತಿದ್ದಾರೆ.

ಕೃಷಿಕ್ಷೇತ್ರದಲ್ಲಿ ಮಹಿಳೆಯರು ವರ್ಷಪೂರ್ತಿ ದುಡಿದರೂ ಅವರ ದುಡಿಮೆಗೆ ಸಿಗುವ ಪ್ರತಿಫಲ ಕಡಿಮೆ. ಸ್ತ್ರೀ ಪುರುಷರಿಬ್ಬರೂ ಒಂದೇ ರೀತಿಯ ಸಮಾನ ಕೆಲಸ ನಿರ್ವಹಿಸಿದರೂ ಮಹಿಳೆಯರು ಪುರುಷರಿಗಿಂತ ಕಡಿಮೆ ಕೂಲಿ ಪಡೆಯುತ್ತಾರೆ. ಇವರಿಗೆ ಕುಟುಂಬದ ವ್ಯವಹಾರಕ್ಕೆ ಸಂಬಂಧಿಸಿದಂತೆ ಯಾವುದೇ ನಿರ್ಧಾರ ತೆಗೆದುಕೊಳ್ಳುವ ಸ್ವಾತಂತ್ರವಿಲ್ಲ.

ಪುರುಷರ ದುಡಿಮೆಯು ಕ್ರಯಸಹಿತವಾಗಿದ್ದು ಮಹಿಳೆಯರ ದುಡಿಮೆ ಕ್ರಯರಹಿತ ವಾಗಿದೆ. ಮಹಿಳೆಯನ್ನು ಅಭಿವೃದ್ಧಿಯ ಫಲವನ್ನು ಪಡೆಯುವವಳು ಎಂದು ಪರಿಗಣಿಸ ಲಾಗುತ್ತದೆಯೇ ಹೊರತು ಅವಳನ್ನು ಉತ್ಪಾದಕಳೆಂದು ಗುರುತಿಸುವುದಿಲ್ಲ. ಕುಟುಂಬ ಹಾಗೂ ಸಮಾಜಕ್ಕೆ ಸಲ್ಲಿಸುತ್ತಿರುವ ಅವಳ ಸೇವೆಯನ್ನು ಕಡೆಗಣಿಸಲಾಗಿದೆ.

ಅಭಿವೃದ್ಧಿ ಯೋಜನೆಗಳು ಮೇಲ್ನೋಟಕ್ಕೆ ಮಹಿಳೆಯರನ್ನು ಸರಿಯಾಗಿ ಪರಿಭಾವಿಸುವುದಾಗಿದ್ದು ಪ್ರಗತಿಪರವೆಂದು ಕಂಡು ಬಂದರೂ ಮಹಿಳೆಯರಿಗೆ ಆರ್ಥಿಕ ಶಕ್ತಿ ಒದಗಿಸಿ ಕೃಷಿವಲಯದಲ್ಲಿ ಅವರನ್ನು ಸ್ವಾವಲಂಬಿಗಳನ್ನಾಗಿ ಮಾಡುವುದು ಈ ಯೋಜನೆಗಳಿಗೆ ಮೂಲಭೂತ ಸವಾಲಾಗಿದೆ. ಮಹಿಳೆಯರ ಸ್ಥಿತಿಯನ್ನು ಉತ್ತಮ ಪಡಿಸುತ್ತವೆ ಎಂಬ ದೃಷ್ಟಿಕೋನದಿಂದ ರೂಪಿಸಿದ ಪ್ರತ್ಯೇಕ ಯೋಜನೆಗಳು ಬಂದವು. ರಾಜ್ಯವೂ ಜೊತೆ ಜೊತೆಯಾಗಿಯೇ ಬೃಹತ್ ಯೋಜನಾ ನೀತಿಗಳನ್ನು ರೂಪಿಸಿತು. ಕಲ್ಯಾಣಾಭಿವೃದ್ಧಿ ಪ್ರಸ್ತಾಪನೆಯೊಂದಿಗೆ ಮಹಿಳೆಯರ ಕಲ್ಯಾಣಾಭಿವೃದ್ಧಿ ಕಾರ್ಯಗಳು ನಡೆಯುತ್ತವೆ ಎಂದು ನಂಬಲಾಗಿತ್ತು. ಆದರೆ ಬಡತನ ನಿರ್ಮೂಲನೆ ಹಾಗೂ ಭೂಸುಧಾರಣೆಗಳಲ್ಲಿ ಮಹಿಳೆಯರನ್ನು ನಿರ್ಲಕ್ಷಿಸಲಾಯಿತು. ಪಂಚವಾರ್ಷಿಕ ಯೋಜನೆಗಳಲ್ಲಿ ಹಳ್ಳಿಗಾಡಿನ ಹೆಂಗಸರನ್ನು ಒಳಗೊಂಡಂತೆ ಅನೇಕ ಮಹಿಳಾ ಮಂಡಳಿಗಳು ಸ್ಥಾಪನೆಗೊಂಡು ಮಹಿಳೆಯರಿಗೆ ನೈಪುಣ್ಯತೆಯನ್ನು ಕಲಿಸಲು ಪ್ರಯತ್ನಿಸಲಾಯಿತು. ಆದರೆ ಅದು ಮಧ್ಯಮ ವರ್ಗದ ಮಹಿಳೆಯರ ವಿರಾಮ ವೇಳೆಯ ಕಲ್ಪನೆಯಾಗಿತ್ತು ಗ್ರಾಮೀಣ ಮಹಿಳೆಯರ ವ್ಯವಸಾಯಕ್ಕೆ ಸಂಬಂದಿಸಿದ ಶ್ರಮ ವಾಸ್ತವ ಬದುಕಿಗೆ ಕುರುಡಾಗಿತ್ತು. ಸರಕಾರ ಮಹಿಳೆಯರಿಗೆ ಆಸ್ತಿ ಅಧಿಕಾರವನ್ನು ಕಾನೂನಿನಲ್ಲಿ ಒದಗಿಸಿದೆಯಾದರೂ ಅವುಗಳು ಮಹಿಳೆಯರಿಗೆ ತಪುಲುವಂತ ಕಡ್ಡಾಯ ಕ್ರಮಗಳನ್ನು ಅನುಸರಿಸುತ್ತಿಲ್ಲ.

ಭಾರತೀಯ ಸಂವಿದಾನದಲ್ಲಿ ಸಮಾನತೆಯ ಕಾರ್ಯನೀತಿಯ ನಿರ್ದೇಶನ ತತ್ವ ೩೯ನೇ ಅನುಚೇದ ಹಾಗೂ ೧೫ನೇ ಅನುಚ್ಛೇದಗಳನ್ನು ಅನುಸರಿಸಿ ೧೯೭೬ರಲ್ಲಿ ಸಮಾನ ಪರಿಶ್ರಮದ ಧನ ಅದಿನಿಯಮವು ಜಾರಿಗೆ ಬಂದಿದೆ. ಇದರ ೪ (೧)ನೇ ಪ್ರಕರಣದಲ್ಲಿ ಲಿಂಗಸಮಾನತೆ

ಯನ್ನು ಪ್ರತಿಪಾದಿಸಲಾಗಿದ್ದು ಸಮಾನ ಕೆಲಸಕ್ಕೆ ಸಮಾನ ವೇತನ ಎಂಬ ನೀತಿಯನ್ನು ರೂಪಿಸಿದ್ದರೂ ಮಹಿಳೆಯರು ಪುರುಷರಿಗಿಂತ ಕಡಿಮೆ ಕೂಲಿ ಪಡೆಯುತ್ತಿದ್ದಾರೆ. ಹೀಗಾಗಿ ಯೋಜನೆಗಳಲ್ಲಿ ಮಹಿಳೆಯರು ಕಮಲಪತ್ರದ ಬಿಂದುವಿನಂತಾದರು. ಅದೇನೇ ಇರಲಿ. ಹಲವಾರು ದಶಕಗಳ ಯೋಜನೆಗಳು ಮಹಿಳೆಯರ ಬದುಕನ್ನು ಉತ್ತಮ ಪಡಿಸದಿದ್ದರೂ ಅವರ ನಿಕೃಷ್ಟ ಬದುಕಿನ ಬಗ್ಗಡವನ್ನು ಕಲಕಿವೆ.

ಸಾಂಪ್ರದಾಯಿಕ ಕೃಷಿ ಬದುಕಿನಲ್ಲಿಯೂ ಕಷ್ಟಗಳಿದ್ದವಾದರೂ ಮಹಿಳೆಯರು ಉಪಕಸುಬುಗಳನ್ನು ರೂಡಿಸಿಕೊಂಡು ಅಷ್ಟಿಷ್ಟು ಆರ್ಥಿಕ ಅನುಕೂಲಗಳನ್ನು ಕಲ್ಪಿಸಿಕೊಳ್ಳಲು ಕಲಿತು ಬದುಕನ್ನು ಸುಗಮಗೊಳಿಸಿಕೊಂಡಿದ್ದರು. ಆಧುನಿಕ ತಂತ್ರಜ್ಞಾನ ಪ್ರವೇಶದೊಂದಿಗೆ ಅವರು ಉಪಕಸುಬುಗಳನ್ನು ಕಳೆದುಕೊಳ್ಳುತ್ತಿರುವುದು ಒಂದು ಕಷ್ಟವಾದರೆ, ಅಭಿವೃದ್ಧಿ ಯೋಜನೆಗಳು ಮಹಿಳೆಯರಿಗೆ ಪ್ರವೇಶ ಪಡೆಯಲು ಕಷ್ಟಸಾಧ್ಯವೆನಿಸುವ ಅಧುನಿಕ ತಂತ್ರಜ್ಞಾನ ಬಳಕೆಗೆ ಹೆಚ್ಚು ಒತ್ತುಕೊಟ್ಟಿರುವುದು ಇನ್ನೊಂದು ಕಷ್ಟವಾಗಿದೆ. ನಮ್ಮ ಅಭಿವೃದ್ಧಿ ಯೋಜನೆಗಳು ಸೈದ್ಧಾಂತಿಕವಾಗಿ ಮಹಿಳೆಯರನ್ನು ಬಿಟ್ಟುಕೊಡದೆ ಪರಿಗಣಿಸಿವೆ ಎಂಬುದೇನೋ ಸುಸ್ಪಷ್ಟವಾಗಿರುವಂತಿದೆ. ಆದರೆ ಕಾರ್ಯಾಚರಣೆಯಲ್ಲಿನ ಪರಿಕಲ್ಪನೆಗಳು ಆ ಸಿದ್ಧಾಂತಕ್ಕೆ ಸರಿಯಾಗಿ ಹೊಂದುವಂತಿಲ್ಲ. ಹಾಗಾಗಿ ಕೃಷಿಮಹಿಳೆಯ ಒಳಿತನ್ನೇ ಯೋಜನೆಗಳು ಹೇಳುತ್ತಿವೆಯಾದರೂ ಆ ಒಳಿತು ಮಹಿಳೆಯರಿಗೆ ದಕ್ಕಲಾರದಂತೆ ಆಗುತ್ತಿದೆ. ಈ ತೊಡಕನ್ನು ನಮ್ಮ ಅಭಿವೃದ್ಧಿ ಯೋಜನೆಗಳು ಪರಿಹರಿಸಬೇಕಿದೆ. ಈ ಹಿನ್ನೆಲೆಯಲ್ಲಿ ಕೆಲವು ಮಾದರಿ ಕ್ರಮಗಳನ್ನು ಈ ಮುಂದೆ ಸೂಚಿಸಲಾಗಿದೆ.

ಮಹಿಳಾ ಕೃಷಿಕರ ಅಭಿವೃದ್ಧಿ ಕುರಿತು ನೀತಿ ನಿರೂಪಣೆಗಳನ್ನು ರೂಪಿಸುವಾಗ ಗ್ರಾಮೀಣ ಆಗುಹೋಗುಗಳನ್ನು ಅರಿತ ಮಹಿಳೆಯರನ್ನೂ ಯೋಜನಾ ಆಯೋಗದ ಸದಸ್ಯರನ್ನಾಗಿ ನೇಮಿಸುವುದರ ಜೊತೆಗೆ, ಕೃಷಿ ಕ್ಷೇತ್ರದಲ್ಲಿ ಅಧಿಕ ಸಂಖ್ಯೆಯಲ್ಲಿರುವ ಮಹಿಳೆಯರಿಗೆ ಕೃಷಿ ಅಭಿವೃದ್ಧಿಯ ಕಾರ್ಯಕ್ರಮಗಳಲ್ಲಿ ಸಾಂಪ್ರದಾಯಕವಾಗಿ ಕೊಡುತ್ತಿರುವ ಶೇ.೩೩ರಷ್ಟು ಮೀಸಲಾತಿಗೆ ಬದಲಾಗಿ ಶೇ.೫೦ ರಷ್ಟು ಮೀಸಲಾತಿ ಅಗತ್ಯವಾಗಿದೆ.

ಸರಕಾರ ಮತ್ತು ಸರಕಾರೇತರ ಸಂಸ್ಥೆಗಳು ಗ್ರಾಮೀಣ ಮಹಿಳೆಯರಿಗೆ ಸ್ವಾಯತ್ತತೆಯ ಪ್ರಜ್ಞೆ ಮೂಡಿಸಿ ಅದರಲ್ಲಿ ಅಂತರ್ಗತವಾಗಿರುವ ಕೀಳರಿಮೆಯನ್ನು ಹೋಗಲಾಡಿಸುವ ಪ್ರಕ್ರಿಯೆಯನ್ನು ಹುಟ್ಟುಹಾಕಿ ಅವರನ್ನು ಸಂಘಟಿತರನ್ನಾಗಿ ಮಾಡಬೇಕಾಗಿದೆ.

ಮಹಿಳಾ ಕೃಷಿ ಸಹಾಯಕಿಯರನ್ನು ನೇಮಿಸಿ ಅವರು ಗ್ರಾಮಮಟ್ಟದಲ್ಲಿ ನೆಲಸಬೇಕು. ಅವರು ಕೃಷಿ ಮಹಿಳೆಯರೊಂದಿಗೆ ನೇರ ಸಂಪರ್ಕವನ್ನು ಸಾಧಿಸಿ ಹೊಸತಳಿಗಳು, ತಂತ್ರಜ್ಞಾನ ತರಬೇತಿ, ರಿಯಾಯಿತಿ ದರದಲ್ಲಿ ಸಿಗುವ ಕೃಷಿ ಉಪಕರಣ, ಬೆಳೆಸಾಲ, ಬೆಳೆವಿಮೆ, ಬದಲಾಗುತ್ತಿರುವ ಮಾರಾಟದ ಬೆಲೆಗಳು ಮುಂತಾದವುಗಳ ಬಗ್ಗೆ ಮಾಹಿತಿ ನೀಡಿ ನೆರವಾಗಬೇಕು. ಹೊಸತಳಿಗಳನ್ನು ಅಳವಡಿಸುವುದರ ಜೊತೆಗೆ ಬೆಳೆನಷ್ಟ ಅನುಭವಿಸಿದ ಮಹಿಳೆಯರಿಗೆ ಪರಿಹಾರ ನೀಡುವಲ್ಲಿ ಸಹಾಯ ಮಾಡುವುದು ಮುಂತಾದ ಕೆಲಸಗಳನ್ನು

ನಿರ್ವಹಿಸುವಂತೆ ಮಾಡಬೇಕು. ಮಹಿಳೆಯರು ಬ್ಯಾಂಕುಗಳಲ್ಲಿ ಸಾಲಸೌಲಭ್ಯ ಪಡೆಯುವಾಗ ಇರುವ ಅಡ್ಡಿ ಆತಂಕಗಳಾದ ಆಸ್ತಿಯ ಪ್ರಮಾಣ ಪತ್ರ, ಜಂಟಿಖಾತೆಯ ಒಡೆತನದ ತೊಂದರೆಗಳನ್ನು ಹೋಗಲಾಡಿಸಿ ಅವರಿಗೆ ಒಂಟಿಯಾಗಿಯೇ ಸಾಲಸೌಲಭ್ಯಗಳ ಅವಕಾಶ ಒದಗಿಸಿ ಹಣಕಾಸಿನ ವ್ಯವಹಾರವನ್ನು ತಾವೇ ನಿರ್ವಹಿಸುವಂತೆ ಮಾಡಬೇಕಾಗಿದೆ.

ತಾಂತ್ರಿಕ ವರ್ಗಾವಣೆ ಬಹಳ ಕ್ಲಿಷ್ಟಕರವಾದುದು. ಅಧುನಿಕ ತಂತ್ರಜ್ಞಾನ ಕೃಷಿಕ ಮಹಿಳೆಯರಿಗೆ ಸುಲಭವಾಗಿ ದಕ್ಕಲಾರದು. ಹೊಸದನ್ನು ಕಲಿಯಬೇಕಾದರೆ ತರಬೇತಿ ಅಗತ್ಯವಾಗಿದೆ. ಹಂತಹಂತವಾಗಿ ವಿಸ್ತಾರವಾದ ತರಬೇತಿ ನೀಡಬೇಕಾದ ಅಗತ್ಯವಿದೆ. ಕೃಷಿಕ್ಷೇತ್ರದಲ್ಲಿ ನಿರತರಾಗಿರುವ ಮಹಿಳೆಯರ ಕಾರ್ಯವ್ಯಾಪ್ತಿಗೆ ಅನುಗುಣವಾಗಿ ತಾಂತ್ರಿಕ ಮಾರ್ಗದರ್ಶನ ನೀಡುವುದು, ಹಾಗೂ ಕೃಷಿ ಮಾಧ್ಯಮದಲ್ಲಿ, ತಾಂತ್ರಿಕತೆಯ ವಹಿವಾಟಿನಲ್ಲಿ ಮಹಿಳೆಯರು ಪುರುಷರ ಜೊತೆಗೆ ಯೋಗ್ಯರೀತಿಯ ಸಹಭಾಗಿತ್ವ, ಸಹದುಡಿಮೆಯ ಮೇಲ್ವಿಚಾರಣೆ ನಡೆಸಲು ಅನುಕೂಲವಾಗುವಂತೆ ಸಾಮಾನ್ಯ ಜ್ಞಾನ ನೀಡಬೇಕಾಗಿದೆ.

ಸುಧಾರಿತ ಆಧುನಿಕ ಕೃಷಿ ಉಪಕರಣಗಳ ಬಳಕೆಯಿಂದಾಗಿ ಕೃಷಿ ಕಾರ್ಮಿಕ ಮಹಿಳೆಯರು ತಮ್ಮ ಕೆಲಸ ಕಳೆದು ಕೊಳ್ಳುತ್ತಿದ್ದಾರೆ. ಅವರಿಗೆ ಕೃಷಿಯೇತರ ಉದ್ಯೋಗ ಅವಕಾಶಗಳನ್ನು ಸೃಷ್ಟಿಸುವುದು ಅಗತ್ಯವಾಗಿದೆ. ಜೊತೆಗೆ ಕೂಲಿಯಲ್ಲಿನ ಲಿಂಗತಾರತಮ್ಯಗಳನ್ನು ಹೋಗಲಾಡಿಸಿ ಸಮಾನ ವೇತನ ನೀಡಬೇಕಾಗಿದೆ.

ಕೃಷಿ ಮಹಿಳೆಯರು ಮಾರುಕಟ್ಟೆಯಲ್ಲಿ ತಮ್ಮನ್ನು ತೊಡಗಿಸಿ ಕೊಳ್ಳುವಂತಾಗಲು ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ಸೂಕ್ತ ವ್ಯವಸ್ಥೆಯ ಜೊತೆಗೆ ಸಾರಿಗೆ ಸೌಲಭ್ಯಗಳನ್ನು ನೀಡಬೇಕಾಗಿದೆ.

ಮೂಢನಂಬಿಕೆ ಗೊಡ್ಡು ಸಂಪ್ರದಾಯಗಳ ಆರಾಧಕರು ಮಹಿಳೆಯರಾದರೆ ಅವುಗಳನ್ನು ಪ್ರತಿಪಾದಿಸುವವರು ಪುರುಷರು. ಮಹಿಳೆಯರು ತಮ್ಮ ಜೈವಿಕ ವ್ಯತ್ಯಾಸಗಳನ್ನು ಮುಂದುಮಾಡಿ ಎಲ್ಲದಕ್ಕೂ ಪುರುಷರನ್ನು ಅವಲಂಬಿಸಬಾರದು. ಇಂತಹ ಪರಾವಲಂಬನೆ ಅನೇಕ ಸಮಸ್ಯೆಗಳಿಗೆ ಕಾರಣವಾಗುತ್ತದೆ. ತಮ್ಮ ಜಡ್ಡುಗಟ್ಟಿದ ಸಂಪ್ರದಾಯದ ಸುಳಿಯಿಂದ ನುಸುಳಿ ಬಂದು ಹೊಸ ಆಲೋಚನೆಗಳನ್ನು ಬೆಳೆಸಿಕೊಂಡು ಅಧುನಿಕ ಜೀವನ ಕ್ರಮಕ್ಕೆ ಹೊಂದಿಕೊಂಡು ಉತ್ತಮ ಜೀವನ ಕಲ್ಪಿಸಿಕೊಳ್ಳಬೇಕಾಗಿದೆ.

ಇನ್ನೂ ಸೂಕ್ಷ್ಮ ವಿವರಗಳಲ್ಲಿ ನಮ್ಮ ಅಭಿವೃದ್ಧಿ ಯೋಜನೆಗಳನ್ನು, ಅವುಗಳು ಜಾರಿ ಗೊಳಿಸುವ ಕಾರ್ಯಾಚರಣೆಯ ಸಂಬಂಧಗಳನ್ನು ಅಧ್ಯಯನ ಮಾಡಿ ಇನ್ನಷ್ಟು ಸೂಕ್ತ ಪರಿಹಾರಗಳನ್ನು ಕಂಡುಕೊಳ್ಳಬಹುದು. ಹೀಗಾದಾಗ ಮಾತ್ರ ನಮ್ಮ ಯೋಜನೆಗಳು ಕೇವಲ ಸಿದ್ಧಾಂತದ ನೆಲೆಯಲ್ಲಿ ಮಹಿಳೆಯರಿಗೆ ಒತ್ತಾಸೆಯಾಗುತ್ತವೆ ಎಂಬ ಅಪವಾದವನ್ನು ಹೊರದೆ ನಿಜವಾದ ಅರ್ಥದಲ್ಲಿ ಮಹಿಳೆಯರಿಗೆ ಧಾರಣಶಕ್ತಿಯನ್ನು ಒದಗಿಸಬಹುದು. ಈ ಸಮಾಜ ದಲ್ಲಿ ರೈತ ಮಹಿಳೆಯರೂ ಸಶಕ್ತರಾಗಿ ಆತ್ಮವಿಶ್ವಾಸದಿಂದ ಬದುಕಲು ನೆರವಾಗಬಹುದು.

# ಉದ್ಯೋಗ ಸಂಬಂಧಿ ಅಭಿವೃದ್ಧಿ ಯೋಜನೆಗಳು ಮತ್ತು ಮಹಿಳೆ - ಒಂದು ಸಮಕಾಲೀನ ಚಿಂತನೆ

ಕಾ.ಗು. ಗಾಯಿತ್ರಿದೇವಿ

ಅಭಿವೃದ್ಧಿಯ ಪ್ರಮುಖ ಗುರಿ ಎಂದರೆ ಜನರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳಲ್ಲಿ ಸುಧಾರಣೆ ತಂದು, ಕ್ರಮೇಣ ಸಮಾಜದಲ್ಲಿ ಬಡತನವನ್ನು ನಿರ್ಮೂಲನೆ ಮಾಡುವುದೇ ಆಗಿದೆ. ಹಲವು ದಶಕಗಳ ಹಿಂದೆ, ಅನೇಕ ರಾಷ್ಟ್ರಗಳಲ್ಲಿ ಆರ್ಥಿಕ ಮತ್ತು ಸಾಮಾಜಿಕ ಸುಧಾರಣೆಗಾಗಿ ಯೋಜನೆಗಳನ್ನು ರೂಪಿಸಿದಾಗ ಸರಕಾರಕ್ಕಿದ್ದ ಆಲೋಚನೆ ಎಂದರೆ, ಉತ್ಪಾದನಾ ರಂಗ, ಉದ್ಯೋಗ, ಸಮಾಜಕಲ್ಯಾಣ/ಸುಧಾರಣೆ, ಸೇವೆಗಳು ಮತ್ತು ಭೂ ಸುಧಾರಣಾ ಕಾರ್ಯಕ್ರಮಗಳ ಪ್ರಭಾವದಿಂದಾಗಿ ತಾನೇ ತಾನಾಗಿ ಜನರ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ ಸುದಾರಿಸುತ್ತದೆ, ಸಮಾಜದಲ್ಲಿನ ಅಸಮಾನತೆ ಮತ್ತು ಬಡತನವನ್ನು ತೊಡೆದು ಹಾಕುವಲ್ಲಿ ಯಶಸ್ವಿಯಾಗುತ್ತದೆ ಎಂದು. ಇಂತಹ ಆಲೋಚನೆಗಳು ಯಾವ ಅಂದಾಜಿನ ಆಧಾರಿತವಾಗಿದ್ದುವೆಂದರೆ, ಯಾವುದೇ ಸಮಾಜದ ಸಾಮಾನ್ಯ ಆರ್ಥಿಕ ಸುದಾರಣೆಯೊಡೊಡನೆ, ಬಡಜನರ ಉದ್ಧಾರವೂ ತಾನೇ ತಾನಾಗಿ ಯಾವ ಪ್ರಚೋದನೆಯೂ ಇಲ್ಲದಂತೆ ಆಗುತ್ತದೆ ಎಂಬುದರ ಮೇಲೆ.

ಆದರೆ ಕ್ರಮೇಣ ಸರಕಾರದ ಗಮನ ಮಂದಗತಿಯಲ್ಲಿ ಸಾಗಿದ ಅಭಿವೃದ್ಧಿ ಪಥದ ಕಡೆ ತಿರುಗಿದಾಗ ಗೋಚರವಾದ ಸತ್ಯವೆಂದರೆ, ಬೆಳವಣಿಗೆ ಪರವಾದ ಯಾವುದೇ ಯೋಜನೆಗಳೂ ಸಹ, ನೈಜದಲ್ಲಿ ಬಡತನ ವಿಮೋಚನಾ ಸ್ಥಿತಿಯನ್ನು ಉಂಟುಮಾಡಲಾರವು (ತಾವೇ ತಾವಾಗಿ) ಎಂದು. ಹೀಗಾಗಿ, ಪರ್ಯಾಯ ವ್ಯವಸ್ಥೆಗಾಗಿ ಹುಡುಕಾಟ ಆರಂಭವಾಗಿ, ''ಬೆಳವಣಿಗೆಯಿಂದ ಅಭಿವೃದ್ಧಿ'' ಎಂಬ ಸುತ್ತು ದಾರಿ ಬಿಟ್ಟು, ಬಡತನವನ್ನೇ ಉದ್ದೇಶವಾಗಿಟ್ಟುಕೊಂಡು, ಅದನ್ನು ತೊಡೆದು ಹಾಕಲೋಸುಗವೇ ವಿಶಿಷ್ಟವಾದ ಕಾರ್ಯಕ್ರಮಗಳ ರಚನೆ ಮತ್ತು ಅನುಷ್ಠಾನ ಕಾರ್ಯಕ್ರಮಗಳು ಮೊದಲುಗೊಂಡವು. ಅಂದರೆ, ಜನಹಿತಕ್ಕಿರುವ, ಹಾಗೆಂದು ಗುರುತಿಸಿ ಕೊಂಡಿರುವ ಗುಂಪುಗಳ ಅಭಿವೃದ್ಧಿ ಮತ್ತು ಅತ್ಯವಶ್ಯಕ ಅನುಕೂಲಗಳನ್ನು ಒದಗಿಸು ವುದಕ್ಕಾಗಿ ವಿಶೇಷ, ಪ್ರತ್ಯೇಕ ಕಾರ್ಯಕ್ರಮಗಳು ಸಹ ರೂಪುಗೊಂಡವು. ತಾವಿರುವ ಅಸಮಾನ ಪರಿಸ್ಥಿತಿಯಲ್ಲಿ ತಮ್ಮ ಸಂಕಷ್ಟಗಳನ್ನು ಸರಿಯಾಗಿ ಗುರುತಿಸಿ ತಮಗೆ ಬೇಕಾದ ಸವಲತ್ತು ಗಳನ್ನು ನೀಡುವ ವ್ಯವಸ್ಥೆಯನ್ನು ಬಡಜನತೆ ಆಶಾಭಾವನೆಯಿಂದ ಬರಮಾಡಿಕೊಂಡಿತು.

ಭಾರತದಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳು ಕಳೆದ ಮೂರು ದಶಕಗಳಿಂದ ಇಂತಹ ಬಡತನ ನಿರ್ಮೂಲನಾ ಕಾರ್ಯಕ್ರಮಗಳನ್ನು 'ಕುಟುಂಬ' ಮತ್ತು 'ವ್ಯಕ್ತಿ' ಎಂಬ ಎರಡನ್ನು ಮೂಲ ಬಿಂದುವನ್ನಾಗಿಸಿಕೊಂಡು ಜಾರಿಯಲ್ಲಿವೆ. ಸ್ವಾತಂತ್ರ್ಯಾನಂತರ ಜಾರಿಗೆ ಬಂದ ಪಂಚವಾರ್ಷಿಕ ಯೋಜನೆಗಳು ಒಂದು ಕಡೆಯಾದರೆ, ನಂತರ ಬಂದಂತಹ ಅಭಿವೃದ್ಧಿ ಪರ ಕಾರ್ಯಕ್ರಮಗಳಾದ ಗ್ರಾಮೀಣ ಭೂರಹಿತರಿಗಾಗಿ ಉದ್ಯೋಗ ಭರವಸೆ ಯೋಜನೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ (ಕೂಲಿಗಾಗಿ ಕಾಳು ಕಾರ್ಯಕ್ರಮ), ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮ ಇತ್ಯಾದಿ ಮತ್ತೊಂದು ಕಡೆ ಜಾರಿಗೊಂಡವು. ಇವುಗಳು ಮುಖ್ಯವಾಗಿ ದೇಶದ ಎಲ್ಲಾ ಕಡೆ ಅನ್ವಯಿಸಿದ್ದು, ಗಮನಾರ್ಹವಾದ ಪ್ರಗತಿಯನ್ನು ಸಹ ಸಾಧಿಸಿವೆ. ಈ ಕಾರ್ಯಕ್ರಮಗಳು ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳ ಜನರ ಸ್ಥಿತಿಯನ್ನು ಸುಧಾರಿಸಲೋಸುಗವೇ ರೂಪಿತವಾಗಿದ್ದುವು. ಐ.ಆರ್.ಡಿ.ಪಿ.ಯಂತಹ ಕಾರ್ಯಕ್ರಮಗಳಂತೂ ಆಯ್ದ ಅತಿ ಬಡ ಕುಟುಂಬಗಳಿಗೆ ಉತ್ಪಾದಕಾ ವಸ್ತುಗಳನ್ನು ಒದಗಿಸಿ ಅವುಗಳ ಜೀವನ ಮಟ್ಟವನ್ನು ಮೇಲೆತ್ತುವಲ್ಲಿ ಫಲಕಾರಿಯಾದುವು.

### ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಮಹಿಳೆ

ಈ ಮೇಲೆ ನಿವೇದಿಸಿರುವ ಮತ್ತು ಇನ್ನೂ ಅನೇಕ ಕಾರ್ಯಕ್ರಮಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಗೋಚರವಾಗುವ ಒಂದು ಮುಖ್ಯ ಸಂಗತಿ ಎಂದರೆ, ಇವೆಲ್ಲವುಗಳಲ್ಲಿ ಮಹಿಳೆಯರನ್ನು ಅದರಲ್ಲೂ ಗ್ರಾಮೀಣ ಮಹಿಳೆಯರನ್ನು ಕಡೆಗಣಿಸಲಾಗಿದೆ ಎಂಬುದು. ನಮಗೆ ಈಗಾಗಲೇ ತಿಳಿದಿರುವಂತೆ, ಮಹಿಳೆಯರು ಯಾವುದೇ ಸಮಾಜದ ಜನಸಂಖ್ಯೆಯ ಅರ್ಧದಷ್ಟಿದ್ದು, ಆ ಸಮಾಜದಲ್ಲಿ ದೊರೆಯುವ ಮಾನವ ಸಂಪನ್ಮೂಲದ ಅರ್ಧದಷ್ಟಿದ್ದಾರೆ. ಇಂತಹ ಸಂಪನ್ಮೂಲವನ್ನು ಸರಿಯಾದ ಉಪಯೋಗಕ್ಕೆ ಬಳಸದೆ, ಅವರನ್ನು ನಿರ್ಲಕ್ಷಿಸಿ, ಅಭಿವೃದ್ಧಿ ಯೋಜನೆಗಳಿಂದ ವಂಚಿತರನ್ನಾಗಿ ಮಾಡಿರುವುದು ಬಹಳ ಅನ್ಯಾಯ ಹಾಗೂ ಸಂವಿಧಾನಬಾಹಿರ. ಭಾರತದ ಸಂವಿಧಾನವು ಎಲ್ಲಾ ಪ್ರಜೆಗಳಿಗೂ ಲಿಂಗ, ಜಾತಿ, ಭಾಷೆ, ಧರ್ಮ, ಪ್ರಾಂತ್ಯ ಮುಂತಾದ ಅಂತರಗಳಿಂದ ಹೊರತಾದ ಸಮಾನತೆಯನ್ನೇ ಘೋಷಿಸಿರುವಾಗ ಹೀಗೆ ಮಹಿಳಾ ಹಿತವನ್ನು ಕಡೆಗಣಿಸಿರುವಂತಹ ಕಾರ್ಯಕ್ರಮಗಳು ಬಹಳ ವಿಷಾದವನ್ನೇ ಉಂಟುಮಾಡುತ್ತವಲ್ಲವೇ?

### ಮಹಿಳಾಭಿವೃದ್ಧಿ ಏಕೆ, ಹೇಗೆ?

ಯಾವುದೇ ಸಮಾಜದಲ್ಲಾಗಲಿ, ಅಲ್ಲಿನ ಅಭಿವೃದ್ಧಿಯ ಮುಖ್ಯ ಸೂಚಕವೆಂದರೆ, ಅದರ ಮಹಿಳೆಯರ ಸ್ಥಾನಮಾನ. ಸಮಾಜದ ಅರ್ಧ ಜನಸಂಖ್ಯೆಯಷ್ಟಿರುವ ಮಹಿಳೆಯರು ಅದರ ಮುಖ್ಯ/ ಅಮೂಲ್ಯ ಮಾನವ ಸಂಪನ್ಮೂಲ. ದೇಶದ ಸರ್ವಾಂಗೀಣ ಪ್ರಗತಿಗಾಗಿ, ಗೃಹಿಣಿಯರಾಗಿ, ಭಾವಿ ಪ್ರಜೆಗಳನ್ನು ಹೊತ್ತು, ಹೆತ್ತು, ಬೆಳೆಸುವ ತಾಯಂದಿರಾಗಿ, ಕಾರ್ಮಿಕರಾಗಿ ಮಹಿಳೆಯರು ಸಲ್ಲಿಸುತ್ತಿರುವ ಸೇವೆ ಅತಿ ದೊಡ್ಡದು ಮತ್ತು ಅಮೋಘ.

ಆದ್ದರಿಂದಲೇ ಅವರನ್ನು, ಅವರ ಶಕ್ತಿಯನ್ನು ಗುರುತಿಸಿ, ಅಭಿವೃದ್ಧಿ ಪಥದಲ್ಲಿ ಹಾಕಿಕೊಂಡು ಮುಂದುವರೆಯುವ ಅವಶ್ಯಕತೆ ಇದೆ. ಇದರಲ್ಲಿ ಬರಿಯ ಅವರ ಪ್ರಗತಿ ಮಾತ್ರವಲ್ಲದೆ, ದೇಶದ ಪ್ರಗತಿ ಸಹ ಅಡಕವಾಗಿದೆ.

ಪ್ರಪಂಚದ ಒಟ್ಟು ಸ್ತ್ರೀಯರಲ್ಲಿ ಶೇಕಡಾ ೭೫ರಷ್ಟು ಮಂದಿ ಅಭಿವೃದ್ಧಿ ಹೊಂದುತ್ತಿರುವ ಅಥವಾ ಅಭಿವೃದ್ಧಿಯಾಗದ ದೇಶಗಳಲ್ಲಿ ವಾಸಿಸಿದ್ದಾರೆ. ಮೊದಲ ಗುಂಪಿಗೆ (ಅಭಿವೃದ್ಧಿ ಹೊಂದುತ್ತಿರುವ ದೇಶಗಳ) ಹೋಲಿಸಿದರೆ ಎರಡನೆ ಗುಂಪಿನ ಸ್ತ್ರೀಯರಲ್ಲಿ ಮರಣ ಪ್ರಮಾಣ, ಕಡಿಮೆ ಜೀವನಾವಧಿ, ಕಡಿಮೆ ಅನಕ್ಷರತೆ, ನಿರುದ್ಯೋಗ (ಅದರಲ್ಲೂ ಯಾವ ಕ್ಷೇತ್ರಗಳಲ್ಲಿ ಉನ್ನತ ತರಬೇತಿ, ಅನುಭವ, ನೈಪುಣ್ಯ ಬೇಕಾಗಿದೆಯೋ ಅಲ್ಲಿ), ಅಭಿವೃದ್ಧಿ ಯೋಜನೆಗಳಿಂದ ಹೊರಬರುವ ಅಥವಾ ಉಂಟಾಗುವ ಸಾಮಾಜಿಕ ಮತ್ತು ಆರ್ಥಿಕ ಅನುಕೂಲಗಳು ಇತ್ಯಾದಿ ಕಡಿಮೆ ಇವೆ. ಪುರುಷರಿಗಿಂತ ಮಹಿಳೆಯರು ಹಿಂದುಳಿದಿದ್ದಾರೆ ಹಾಗೂ ಮಹಿಳೆಯರಲ್ಲಿ ಸಹ ಜಾತಿ, ವರ್ಗ, ಸಂಸ್ಕೃತಿ ಮತ್ತು ಪ್ರಾಂತೀಯ ಆಧಾರಗಳ ಮೇಲೆ ಅನೇಕ ಬದಲಾವಣೆಗಳಿವೆ ಎನ್ನಬಹುದು.

ಎಲ್ಲಾ ದೇಶಗಳಲ್ಲಿಯೂ ಸ್ತ್ರೀಯರು ಎರಡನೆ ದರ್ಜೆಯ ಪ್ರಜೆಗಳೆನ್ನಿಸಿಕೊಂಡು, ಅನೇಕ ಸವಲತ್ತುಗಳಿಂದ ವಂಚಿತರಾಗಿಯೇ ಬಂದಿದ್ದಾರೆ. ಭಾರತದಂತಹ ಪಿತೃಪ್ರಧಾನ ವ್ಯವಸ್ಥೆಯಲ್ಲಂತೂ ಸ್ತ್ರೀಗೆ ಅತಿ ಕೀಳು ದರ್ಜೆ ಸ್ಥಾನವನ್ನು ಸಾಂಪ್ರದಾಯಿಕ ಸಮಾಜವು ಕೊಟ್ಟಿತ್ತು. ಹಾಗೂ, ಜಾತಿ ಪದ್ಧತಿಯನುಸಾರ, ಕೆಳಸ್ತರದ ಜಾತಿಗಳಾದಷ್ಟೂ ಅಲ್ಲಿನ ಮಹಿಳೆಯರ ಸ್ಥಿತಿ ಸಹ ಕಷ್ಟಕರವಾಗಿತ್ತು. ಇಲ್ಲಿನ ಸಾಂಪ್ರದಾಯಿಕ ವ್ಯವಸ್ಥೆಯು ಇಂತಹ ಲಿಂಗಬೇಧಗಳನ್ನು ಎತ್ತಿ ಹಿಡಿದಿದ್ದು, ಕಾಲಾನುಕಾಲದಿಂದ ಮುಂದುವರೆದುಕೊಂಡೇ ಬಂದಿದೆ. ಸ್ತ್ರೀಯರ ಸಾಮಾಜಿಕ ಮತ್ತು ಆರ್ಥಿಕ ದುರ್ಬಲತೆಗೆ ಸಮಾಜವೇ ಕಾರಣವೇ ಹೊರತು ಅವರ (ಸ್ತ್ರೀಯರ) ತಪ್ಪಲ್ಲ ಎನ್ನಬಹುದು. ಅವಕಾಶಗಳನ್ನು ನೀಡಿದಾಗ ಅವರೂ ಸಹ ಪುರುಷರಂತೆ ಮುನ್ನುಗ್ಗಿ ತಮ್ಮ ಮತ್ತು ಕುಟುಂಬದ ಅಭಿವೃದ್ಧಿಗೆ ಕೆಲಸ ಮಾಡ ಬಹುದಲ್ಲವೇ?

ಈ ಮೇಲಿನ ವಿಷಯಗಳನ್ನು ಚರ್ಚಿಸಿದಾಗ ಕಂಡು ಬರುವ/ ಎದ್ದು ಕಾಣುವ ನ್ಯೂನತೆ ಎಂದರೆ ಮಹಿಳೆಯರು ತಾವಾಗಿಯೇ ಅಭಿವೃದ್ಧಿ ಯೋಜನೆಗಳನ್ನು ಬಳಸಿಕೊಳ್ಳುವಲ್ಲಿ ಇರುವ ಅನಾನುಕೂಲಗಳು. ಇಂತಹ ಪರಿಸ್ಥಿತಿಯಲ್ಲಿ ಎರಡು ರೀತಿಯ ಪರಿಸ್ಥಿತಿಗಳ ಸುಧಾರಣೆಯಾಗಬೇಕಾಗಿದೆ. ಒಂದು ಮಹಿಳೆಯರು ಸ್ವಾವಲಂಬಗೆಯತ್ತ, ಸಬಲೀಕರಣದತ್ತ ಮಾಡಬೇಕಾದ ಪ್ರಯತ್ನ. ಇದನ್ನೇ 'ಎಂಪವರ್‌ಮೆಂಟ್' ಎಂಬ ತಲೆಬರಹದಡಿ ಅನೇಕ ಕಾರ್ಯಕ್ರಮಗಳ ಚಿಂತನೆಗಳು ಮತ್ತು ವಾದ ವಿವಾದಗಳ ನಡುವೆ ನಡೆಸುತ್ತಿರುವುದು. ಎರಡನೆಯದು ಮತ್ತು ಮುಖ್ಯವಾದದ್ದೆಂದರೆ, ಯಾವುದೇ ಅಭಿವೃದ್ಧಿ ಯೋಜನೆಯನ್ನು ರೂಪಿಸಿದಾಗ, ಅದು ಮಹಿಳಾಪರ ಹಿತಕಾರಿಯಾಗಿದೆಯೇ, ಅವರೂ ಸಹ ಇದರಿಂದ ಫಲಾನುಭವಿಗಳಾಗುವರೇ ಎಂಬಂತಹ ಜಾಗರೂಕತೆಯ ಅವಶ್ಯಕತೆಯೇ ಆಗಿದೆ.

## ಮಹಿಳಾಪರ ಅಭಿವೃದ್ಧಿ ಯೋಜನೆಗಳು: ಒಂದು ವಿಶ್ಲೇಷಣೆ

ಎಲ್ಲ ಅಭಿವೃದ್ಧಿ ಯೋಜನೆಗಳೂ ಸಹ ಮಹಿಳಾ ಪರ ಚಿಂತನೆಯನ್ನುಟ್ಟಿಕೊಂಡಿದ್ದು, ಅವರ ಅಭಿವೃದ್ಧಿಯನ್ನು ದೃಷ್ಟಿಯಲ್ಲಿಟ್ಟುಕೊಂಡೇ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಬೇಕೆಂದು ಬೇರೆ ಹೇಳಬೇಕಾಗಿಲ್ಲ. ಭಾರತ ಸರ್ಕಾರವೂ ಸಹ ಬಹಳ ಹಿಂದೆಯೇ ಈ ದಿಕ್ಕಿನಲ್ಲಿ ನಿಗಾ ವಹಿಸಿ, ಮಹಿಳಾ ಅಭಿವೃದ್ಧಿ ಯೋಜನೆಗಳನ್ನು ಜಾರಿಗೆ ತಂದಿತು. ಅವುಗಳಲ್ಲಿ ಡ್ವಾಕ್ರಾ ಯೋಜನೆಯಂತೂ ಬಹಳ ಜನಪ್ರಿಯವಾಯಿತು. ಇದು ನೇರವಾಗಿ ಮಹಿಳೆಯರಿಗೆ, ಮತ್ತು ಬರಿಯ ಮಹಿಳಾ ಫಲಾನುಭವಿಗಳಿಗಾಗಿ ಮೀಸಲಾಗಿದ್ದರೆ, ಇನ್ನುಳಿದ ಅನೇಕ ಕಾರ್ಯಕ್ರಮಗಳು ಸಹ ಕಡ್ಡಾಯವಾಗಿ ಮಹಿಳಾ ವಿಮೋಚನೆ ಮತ್ತು ಅಭಿವೃದ್ಧಿಯ ಕಡೆ ಅತ್ಯಂತ ತೀವ್ರ ಗಮನ ಹರಿಸಿ, ಕಾರ್ಯಕ್ರಮಗಳನ್ನು ರೂಪಿಸಿಕೊಂಡಿವೆ. ಈ ಎಲ್ಲ ಯೋಜನೆಗಳೂ ಸುಮಾರು ೭೦ರ ದಶಕದಿಂದೀಚೆಗೆ ಬಂದಿವೆ. ಹಾಗಾದರೆ, ಇವುಗಳಿಂದಾಗಿರುವ ಮಹಿಳಾ ವಿಮೋಚನೆ ಮತ್ತು ಪ್ರಗತಿ ಎಷ್ಟು?

ಈ ಲೇಖನದಲ್ಲಿ ಮಹಿಳಾ ಅಭಿವೃದ್ಧಿ ಯೋಜನೆಗಳು ಎಷ್ಟರಮಟ್ಟಿಗೆ ಅವರನ್ನು ತಲುಪಿವೆ ಅದರಲ್ಲೂ, ಉದ್ಯೋಗ ಉದ್ಯಮ ಕಾರ್ಯಕ್ರಮಗಳಲ್ಲಿ ಮಹಿಳೆಯರ ಭಾಗವಹಿಸುವಿಕೆಯ ರೂಪುರೇಖೆಗಳೇನು? ಪ್ರವೇಶ ಮತ್ತು ಭಾಗವಹಿಸುವಿಕೆಯಲ್ಲಿ ಅವರಿಗಿರುವ ಅಡ್ಡಿ ಆತಂಕಗಳೇನು ಅವುಗಳ ನಿವಾರಣೆಗಾಗಿ ಸೂಕ್ತ ತರಬೇತಿ, ಶಿಕ್ಷಣ ಮುಂತಾದವು ದೊರಕುತ್ತಿವೆಯೇ? ಒಟ್ಟಾರೆ, ಇಂತಹ ಯೋಜನೆಗಳು ಮಹಿಳೆಯರನ್ನು ಎಷ್ಟರಮಟ್ಟಿಗೆ ಆರ್ಥಿಕವಾಗಿ, ಸಾಮಾಜಿಕವಾಗಿ ಸಬಲಗೊಳಿಸಿವೆ ಎಂಬ ನಿಟ್ಟಿನಲ್ಲಿ ಚರ್ಚೆ ನಡೆಸಲಾಗಿದೆ.

ಮೇಲೆ ನಿವೇದಿಸಿರುವ ವಿಷಯಗಳನ್ನು ಪರಾಮರ್ಶಿಸಿ ನೋಡಿದಾಗ, ಯಾವ ಒಂದು ವಿಶೇಷ ಯೋಜನೆಯನ್ನು ಗುರುಯಾಗಿಟ್ಟುಕೊಂಡು ಈ ಲೇಖನವನ್ನು ಸಿದ್ದಪಡಿಸಿಲ್ಲ. ಯೋಜನೆಗಳ ಬಗ್ಗೆ ಆತ್ಮಾವಲೋಕನವಲ್ಲ ಇದು. ಬದಲಾಗಿ ಅವುಗಳನ್ನು ಒಟ್ಟಾರೆ ಚಿತ್ರಿಸಿಕೊಂಡು, ನಮ್ಮ ಸಾಮಾಜಿಕ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಮಹಿಳೆಯರು ಎಷ್ಟರ ಮಟ್ಟಿಗೆ ಅವುಗಳ ಉಪಯೋಗವನ್ನು ಪಡೆಯಬಲ್ಲರು ಎಂದು ವಿಮರ್ಶಿಸಿ ನೋಡಲು ಪ್ರಯತ್ನಿಸುತ್ತದೆ.

ಅಭಿವೃದ್ಧಿ ಕಾರ್ಯಕ್ರಮಗಳನ್ನು ಅವಲೋಕಿಸಿದಾಗ ಅವುಗಳ ಯಶಸ್ಸು ಮೂರು ಅಂಶಗಳ ಮೇಲೆ ಅವಲಂಬಿಸಿರುವುದು ನಿಶ್ಚಿತವೆನ್ನಿಸುತ್ತದೆ. ಮೊದಲನೆಯದಾಗಿ ಅವುಗಳ ರಚನೆ, ರೂಪಿಕೆ ಇತ್ಯಾದಿ. ಎರಡನೆಯದು ಅವುಗಳ ಅನುಷ್ಠಾನ. ಮೂರನೆಯದು ಅವುಗಳಲ್ಲಿರುವ ಲೋಪದೋಷಗಳ ಗುರುತಿಸುವಿಕೆ ಹಾಗೂ ಸೂಕ್ತ ಸಲಹೆ, ಸೂಚನೆ ಇತ್ಯಾದಿ. ಈ ಮೂರೂ ಹಂತಗಳಲ್ಲಿ ಬರಿಯ ಸರಕಾರದ ಪಾತ್ರವಲ್ಲದೆ, ಯೋಜನೆಗಳು ಯಾರಿಗಾಗಿ ಅನುಷ್ಠಾನವಾಗುತ್ತಿವೆಯೋ ಅವರ ಪಾತ್ರ ಸಹ ಬಹಳಷ್ಟಿರುತ್ತದೆ. ಮೊದಲಿಗಿಂತ

ಈಚೆಗೆ ಯೋಜನೆಗಳ ರಚನೆಯಲ್ಲಿ ಅನೇಕ ಸುಧಾರಣೆಗಳಾಗಿವೆ. ಜನರ ಸಹಭಾಗಿತ್ವದ ಪಾತ್ರ ಇಲ್ಲಿ ಮುಖ್ಯ. ಯಾರಿಗಾಗಿ ಯೋಜನೆಗಳು ರಚಿತವಾಗುತ್ತಿವೆಯೋ, ಅವರೇ ಅದರಲ್ಲಿ ಪ್ರಮುಖ ಪಾತ್ರ ವಹಿಸುವುದು ಅವಶ್ಯಕವೆಂದರಿತು, ಜನರ ಭಾಗವಹಿಸುವಿಕೆಗೆ ಪ್ರಾಧಾನ್ಯತೆ ಕೊಡಲಾಯಿತು.

ಇದನ್ನೇ ನಾವಿಲ್ಲಿ ಬಹಳ ಮಹತ್ವದ ಘಟ್ಟವೆಂದು ಪರಿಗಣಿಸಬಹುದಾಗಿದೆ. ಯಾರಿಗಾಗಿ ಅಭಿವೃದ್ಧಿಯ ಅವಶ್ಯಕತೆ ಇದೆಯೋ ಅವರನ್ನೇ ಹೊರತು ಪಡಿಸಿ ಕಾರ್ಯಕ್ರಮಗಳು ರೂಪಿತವಾದಾಗ ಅವರ ಕಷ್ಟನಷ್ಟಗಳನ್ನು ಆಸೆ ಆಕಾಂಕ್ಷೆಗಳನ್ನು ಈ ಯೋಜನೆಗಳು ಮೈಗೂಡಿಸಿಕೊಂಡಿವೆ ಎಂದು ಹೇಗೆ ಹೇಳುವುದು ಸಾಧ್ಯವಿತ್ತು? ದಂತಗೋಪುರಗಳಲ್ಲಿ ಕುಳಿತು ಬಡಜನರ ಜೀವನದ ಪರಿಚಯವಿಲ್ಲದೆ, ಯೋಜನೆಗಳನ್ನು ರೂಪಿಸುತ್ತಿದ್ದ ಕಾಲವೊಂದಿತ್ತು. ಅಲ್ಲಿಂದ ಕ್ರಮೇಣ ಜನರ ಸಹಭಾಗಿತ್ವದೊಂದಿಗೆ, ಯೋಜನೆಗಳು ರೂಪುಗೊಳ್ಳಲು ಅನುವಾದವು. ಸಮಾಜವನ್ನು 'ಮೇಲಿನಿಂದ ಕೆಳಕ್ಕೆ' ಅವಲೋಕಿಸುವ ವಿಧಾನವು 'ಕೆಳಗಿನಿಂದ ಮೇಲಕ್ಕೆ' (ಬಾಟಮ್ ಅಪ್ ವಿಧಾನ) ಎಂಬ ನವ ವಿಧಾನಕ್ಕೆ ಅನುವು ಮಾಡಿಕೊಟ್ಟಿತು.

ಎರಡನೆಯದಾಗಿ ಈ ರೀತಿಯ ಪರಿಸ್ಥಿತಿಯಲ್ಲಿ ಮತ್ತೊಂದು ಹೊಸ ವಾಸ್ತವ ಎದುರಾಯಿತು. ಅದೇನೆಂದರೆ, ಜನರ ಜೀವನ ವಿಧಾನಗಳನ್ನು ಕಷ್ಟ, ಸವಾಲುಗಳನ್ನು ಹೊಸಬರಾಗಿ ಹೊರಗಿನಿಂದ ಯೋಜನಾಧಿಕಾರಿಗಳು ವೀಕ್ಷಿಸುವ ಬದಲಾಗಿ, ಜನರು ಆ ಸಮಸ್ಯೆ ಸವಾಲುಗಳನ್ನು ಹೇಗೆ ಭಾವಿಸುತ್ತಿದ್ದಾರೆಯೋ ಆ ದೃಷ್ಟಿಕೋನದಿಂದ ಯೋಜನೆಗಳನ್ನು ತಯಾರಿಸುವ ಒತ್ತಡ ಬಂದಿತು. ಇದು ಬಹಳ ಮುಖ್ಯ. ಏಕೆಂದರೆ, ಇದರಲ್ಲಿ ಜನರಿಗೆ ಪ್ರಾಮುಖ್ಯತೆ ಬಂದಿತು. ಅಧಿಕಾರಶಾಹಿ ವ್ಯವಸ್ಥೆಗಲ್ಲ. ಇದರ ಜೊತೆ ಜೊತೆಗೆ, ಪಂಚಾಯಿತಿರಾಜ್ ಸಂಸ್ಥೆಗಳಿಗೆ ಹೊಸ ಜೀವ ತುಂಬಿ ನವೀಕರಿಸಿ, ಕಾನೂನಿನ ಬೆಂಬಲ (ಸಂವಿಧಾನ ತಿದ್ದುಪಡಿಯೊಂದಿಗೆ) ಕೊಟ್ಟು, ಅಭಿವೃದ್ಧಿಯಲ್ಲಿ ಜನರ ಭಾಗವಹಿಸುವಿಕೆಯನ್ನು ಮೇರುಸ್ಥಿತಿಗೆ ಕೊಂಡೊಯ್ಯಲಾಯಿತು.

ಇಷ್ಟೆಲ್ಲ ಕ್ರಾಂತಿಕಾರಕ ಬದಲಾವಣೆಗಳ ನಡುವೆ, ಹೆಚ್ಚು ಕಡಿಮೆ ತಟಸ್ಥವಾದ ವಿಷಯವೆಂದರೆ, ಜನರು ಗಂಡು ಮತ್ತು ಹೆಣ್ಣು ಎಂಬ ಎರಡು ಗುಂಪುಗಳಿಗೆ ಸೇರಿದ್ದು, ಸಮಾಜದ ರೂಢಿ, ಆಚಾರ ವಿಚಾರಗಳಿಂದ ಪ್ರಭಾವಿತರಾಗಿ, ಕಟ್ಟುಪಾಡುಗಳನ್ನು ಪಡೆದು ಅಭಿವೃದ್ಧಿ ಪಥದಲ್ಲಿ ಚಲಿಸಲು ತಮ್ಮದೇ ಆದಂತಹ 'ಬೇಲಿ'ಗಳನ್ನು ಹೊಂದಿರುತ್ತಾರೆ ಎಂಬುದು. ಈ 'ಬೇಲಿ'ಗಳು ಗಂಡಿಗಿಂತ ಹೆಣ್ಣಿನ ವಿಷಯದಲ್ಲಿ ಅತಿ ಸಂಕೀರ್ಣವಾಗಿದ್ದು, ಕಷ್ಟಕರವಾಗಿರುತ್ತವೆ ಎಂಬುದು ಇನ್ನೊಂದು ವಿಷಯ.

ಹಾಗಾದರೆ, ಯೋಜನೆಗಳು, ಅದರಲ್ಲೂ ಮಹಿಳಾಪರವಾಗಿಯೇ ನಿಯೋಜಿಸಲ್ಪಟ್ಟಿರುವಂತಹ ಯೋಜನೆಗಳು ಸಹ, ಮಹಿಳೆಯರ ನೈಜ ಪರಿಸ್ಥಿತಿಯನ್ನು ಚಿತ್ರಿಸಲು

ಸಾಧ್ಯವಾಗಿವೆಯೇ? ಇವು ಡ್ವಾಕ್ರಾ, ಮಹಿಳಾ ಸಮೃದ್ಧಿ ಯೋಜನೆ, ಸ್ವರ್ಣ ಜಯಂತಿ ಮಹಿಳಾ ಯೋಜನೆ ಇತ್ಯಾದಿಗಳಾಗಿರಬಹುದು. ಅಥವಾ ಹೆಚ್ಚೂ ಕಡಿಮೆ ಎಲ್ಲಾ ಅಭಿವೃದ್ಧಿ ಯೋಜನೆಗಳ ಭಾಗವಾಗಿರುವ ಮಹಿಳಾ ಅಭಿವೃದ್ಧಿ ಯೋಜನೆಗಳು ಸಹ ಆಗಿರಬಹುದು.

ಈ ದಿಕ್ಕಿನಲ್ಲಿ ನಡೆಸಲಾಗಿರುವ ಅನೇಕ ಸಮೀಕ್ಷೆಗಳು, ಅಧ್ಯಯನಗಳ ಪ್ರಕಾರ, ಸಾಧಿಸಬೇಕಾದ್ದು ಬೆಟ್ಟದಷ್ಟಿದೆ. ಈ ಮಾತು ಹೇಳುವಾಗ ಒಂದು ಎಚ್ಚರಿಕೆ ಮಾತು. ಸಂಖ್ಯಾಧಾರಿತ ಅಧ್ಯಯನಗಳೇನೋ ಸಾಕಷ್ಟು ಅಭಿವೃದ್ಧಿ ಆಗಿಬಿಟ್ಟಿದೆ ಎನ್ನುವ ಸೂಚ್ಯಾಂಕಗಳನ್ನು ನೀಡಬಹುದು. ಸರಕಾರಿ ಅಧಿಕಾರಿಗಳಿಗಿರುವ ಕಟ್ಟಾಜ್ಞೆ ಎಂದರೆ, ಇಂತಿಷ್ಟು ಸಾಧನೆ ಮಾಡಬೇಕು (ವಾರ್ಷಿಕವಾಗಿ/ಮಾಸಿಕವಾಗಿ) ಮತ್ತು ಅವರು ಹಿರಿಯಧಿಕಾರಿಗಳಿಗೊಪ್ಪಿಸುವ ವಾರ್ಷಿಕ/ಮಾಸಿಕ ವರದಿಗಳಲ್ಲಿ ಇಂತಿಷ್ಟು ಸಾಧನೆ/ಪ್ರಗತಿ ಆಗಿದೆ ಎಂದು ನಿವೇದಿಸಿರುತ್ತಾರೆ. ಮೇಲಾಗಿ, ಅಭಿವೃದ್ಧಿ ಕಾರ್ಯಕ್ರಮಗಳು ಜನರ ಅನೇಕ ಗುಂಪುಗಳನ್ನು ಗಮನದಲ್ಲಿರಿಸಿಕೊಂಡೇ ಅನುಷ್ಠಾನವಾಗಿರುತ್ತವೆ. ಬಡತನ ರೇಖೆಗಿಂತ ಕೆಳಗಿರುವವರು, ಪರಿಶಿಷ್ಟ ಜಾತಿ/ವರ್ಗಗಳು, ಹಿಂದುಳಿದವರು, ಅಲ್ಪಸಂಖ್ಯಾತರು ಮತ್ತು ಮಹಿಳೆಯರು ಇತ್ಯಾದಿ. ಈ ಎಲ್ಲ ಕಲಮುಗಳಲ್ಲಿ ಸೂಚ್ಯಾಂಕಗಳನ್ನು ತುಂಬಿ ಇಂತಿಷ್ಟು ಪ್ರಗತಿ/ಸಾಧನೆ ಎಂದು ತೋರಿಸಲಾಗುತ್ತದೆ.

ಇಂತಹ ವರದಿಗಳಲ್ಲಿರುವ ನ್ಯೂನತೆಯೆಂದರೆ, ಅನುಕೂಲ ಪಡೆದ/ಅಭಿವೃದ್ಧಿ ಹೊಂದಿದ ಆ ವ್ಯಕ್ತಿಗಳು ಯಾರು ಎಂಬ ಸತ್ಯ ನಿಗೂಢವಾಗಿಯೇ ಉಳಿಯುತ್ತದೆ. ಯಾವ ಗುಂಪಿಗೆ ಸೇರಿದ ವ್ಯಕ್ತಿಯಾಗಲಿ, ಬರಿಯ ಒಂದು ಮಾಪನದಿಂದ ಅಳೆಸಿಕೊಳ್ಳುವಂತಿರುವುದಿಲ್ಲ. ಜಾತಿ, ವರ್ಗ, ಲಿಂಗ, ಪ್ರಾಂತ್ಯ ಹೀಗೆ ಅನೇಕ ಬೇಧಗಳಿರುತ್ತವೆ. ಇವುಗಳಲ್ಲಿ ಲಿಂಗಭೇಧವು ಪ್ರಮುಖವಾಗಿದ್ದು, ಅದು ಉಳಿದವುಗಳಿಂದ ನಿರ್ಧಾರಿತವಾಗಿರುತ್ತವೆ. ಸಾಂಖ್ಯಿಕ ವರದಿಗಳು ಇವೆಲ್ಲವುಗಳ ಛಾಯೆಯಾಗಿರುವುದಿಲ್ಲ.

ಇನ್ನು ಮೌಲಿಕ ಅಧ್ಯಯನಗಳನ್ನು ನೋಡಿದಾಗ ಅಲ್ಲಿ ಸಹ ವಾಸ್ತವಿಕ ಅಂಶಗಳ ಕೊರತೆ ಉಳಿದಿರುತ್ತದೆ. ಅಧ್ಯಯನ ವಿಧಾನಗಳು ಸಹ ವಸ್ತುಸ್ಥಿತಿಯಿಂದ ದೂರವಾದಷ್ಟೂ ಅಧ್ಯಯನದಲ್ಲಿ ಬಿರುಕುಗಳು ಉಳಿಯುತ್ತವೆ. ಪ್ರಶ್ನಾವಳಿ, ಸಂದರ್ಶನ ವಿಧಾನಗಳಿಗಿಂತ "ಭಾಗವಹಿಸಿಕೊಂಡು ಅವಲೋಕಿಸುವ" ವಿಧಾನ ಫಲಕಾರಿಯಾಗಿದೆ. ಇಂತಹ ವಿಧಾನದಿಂದ ಗೋಚರವಾಗಿರುವ ಅನೇಕ ಸತ್ಯಗಳನ್ನು ಕೆಳಕಂಡಂತೆ ಚರ್ಚಿಸಲಾಗಿದೆ.

ಮಹಿಳೆಯರ ಹಿತವನ್ನು ದೃಷ್ಟಿಯಲ್ಲಿರಿಸಿಕೊಂಡೇ ರಚಿತವಾಗಿರುವ ಕಾರ್ಯಕ್ರಮಗಳಿದ್ದಾಗ್ಯೂ ಮಹಿಳೆಯರು ಉದ್ಯೋಗ ಉದ್ಯಮಗಳಲ್ಲಿ ಭಾಗವಹಿಸುವುದು ತೊಡಕಾಗಿರುವುದು ಏಕೆ? ಇದು ನಮ್ಮ ಮುಂದಿರುವ ಮೊದಲ ಪ್ರಶ್ನೆ.

ಅಭಿವೃದ್ಧಿಯಿಂದ ವಂಚಿತವಾಗಿರುವ ಪ್ರದೇಶಗಳಲ್ಲಿ ಹೆಚ್ಚು ಭಾಗ ಗ್ರಾಮಗಳಾಗಿವೆ ಎಂಬುದು ಎಲ್ಲರಿಗೂ ಗೊತ್ತಿರುವ ವಿಷಯ. ಹಾಗೆಂದು ನಗರಗಳಲ್ಲಿ ಎಲ್ಲ ಜನರು

ಮುಂದುವರೆದಿದ್ದಾರೆ ಎಂದಲ್ಲ. ಇಲ್ಲಿ ಅನೇಕ ಅಂಶಗಳಿಂದ ಜನರು ಹೆಚ್ಚು ಪ್ರಜ್ಞಾವಂತರು. ಇವನ್ನು ಮಹಿಳೆಯರಿಗೆ ಅನ್ವಯಿಸಿದಾಗ ನಗರ ಗ್ರಾಮಗಳ ಅಂತರ ಇನ್ನೂ ಹೆಚ್ಚಾಗಿದೆ ಎಂಬುವುದು ಕಂಡು ಬರುತ್ತದೆ. ಹಿಂದಿನ ದಿನಗಳಿಗಿಂತ ಈಗ ಪರಿಸರ ಬದಲಾಗಿರುವುದು ದಿಟ. ಸಮಾಜಶಾಸ್ತ್ರಜ್ಞರು ಹೇಳಿರುವಂತೆ, ಕೈಗಾರಿಕೀಕರಣ, ನಗರೀಕರಣ, ಔದ್ಯೋಗಿಕ ಕ್ರಾಂತಿ, ವಿಜ್ಞಾನ, ಸಂಚಾರ, ಸಂಪರ್ಕ, ಮಾಧ್ಯಮಗಳು ಹೊಸ ಆರ್ಥಿಕ ನೀತಿ, ಉದಾರೀಕರಣ ಇತ್ಯಾದಿಗಳಿಂದ ವಿಕಾಸ ಉಂಟಾಗಿದೆ.

ಆದರೂ ನಮ್ಮ ಸಮಾಜದ ಕಂದಾಚಾರಗಳಿಂದ ಸ್ತ್ರೀಯರು ಪೂರ್ತಿಯಾಗಿ ಹೊರಬರಲಾಗಿಲ್ಲ. ಇದು ಎಲ್ಲ ಸ್ತ್ರೀಯರಿಗೂ ಅನ್ವಯಿಸುವ ವಿಷಯ. ಪುರುಷ ಪ್ರಧಾನ ವ್ಯವಸ್ಥೆ, ಜಾತಿ ಧರ್ಮಗಳ ಕವಚಗಳು, ಅನಕ್ಷರತೆ ಮುಂತಾದವುಗಳಿಂದ ಬಂಧಿತರಾಗಿರುವ ಸ್ತ್ರೀಯರಿಗೆ ಯೋಜನೆಗಳ ಪೂರ್ಣ ಪ್ರಯೋಜನ ಸಿಗಲಾಗಿಲ್ಲ. ಉದಾಹರಣೆಗೆ, ಗ್ರಾಮೀಣ ಪ್ರದೇಶಗಳಲ್ಲಿ ಆಚರಣೆಯಲ್ಲಿರುವ ಅನೇಕ ವೃತ್ತಿ ಕುಶಲಕಲೆಗಳಲ್ಲಿ ಮಹಿಳೆಯರ ಪ್ರಧಾನ ಪಾತ್ರ ವಹಿಸುವುದು ಕಾಲಾನುಕಾಲದಿಂದ ಬಂದಿರುವ ತಿಳಿದಿರುವ ವಿಷಯ. ವ್ಯವಸಾಯ, ರೇಷ್ಮೆ, ಕೃಷಿ, ಕುಂಬಾರಿಕೆ, ಕಮ್ಮಾರಿಕೆ, ನೇಯ್ಗೆ, ಚರ್ಮದ ಕೆಲಸ ಹೀಗೆ ಹಲವು ಹನ್ನೊಂದು ಕೆಲಸಗಳಲ್ಲಿ ಮಹಿಳೆಯರು ನಿರತರಾಗಿಯೇ ಇದ್ದಾರೆ. ಬಾಲ್ಯದಿಂದಲೇ ಇವುಗಳಲ್ಲಿ ಆಕೆಗೆ ನೈಪುಣ್ಯತೆ ಶುರುವಾಗುತ್ತದೆ. ಆದರೆ ಸ್ವತಂತ್ರವಾಗಿ ಉತ್ಪಾದನೆ ಮಾಡುವ ಸಾಮರ್ಥ್ಯ (ನಿಪುಣತೆ) ಇದ್ದಾಗ್ಯೂ, ಸಾಮಾಜಿಕ ಪರಿಸರದ ಒತ್ತಡದಿಂದ ಆಕೆಗೆ ಇದು ಸಾಧ್ಯವಾಗುತ್ತಿಲ್ಲ. ಆಕೆಗೆ ಎರಡನೆ ದರ್ಜೆಯ ಸಹಾಯಕಿಯಾಗಿ ದುಡಿಯುವ ಕೆಲಸವೇ ಮುಂದುವರೆದಿದೆ. ಯೋಜನೆಗಳ ಮೂಲಕ ಕೊಡಲಾಗಿರುವ ಉದ್ಯೋಗ ಉಧ್ಯಮಗಳಲ್ಲಿ ಸ್ತ್ರೀಯರು ತೊಡಗಲೆಂದು ಅನೇಕ ಪೂರಕ ಪರಿಸ್ಥಿತಿಗಳನ್ನು ಒದಗಿಸಲಾಗಿದೆ. ಒಂಟಿಯಾಗಿ ಎದುರಿಸಲಾಗದ್ದನ್ನು ಜಂಟಿಯಾಗಿ, ಇತರ ಮಹಿಳೆಯರ ಬಲ, ಸಹಕಾರದೊಂದಿಗೆ ಸಾಧಿಸಲು ಎಂಬ ಹಿರಿಯಾಸೆಯೊಂದಿಗೆ, ಮಹಿಳಾ ಮಂಡಳಿಗಳನ್ನು ರೂಪಿಸಿಕೊಂಡು, ಉದ್ಯೋಗ ಉದ್ದಿಮೆಗಳನ್ನು ತೆಗೆದುಕೊಳ್ಳಲು ಉತ್ತೇಜನ ಕೊಡಲಾಯಿತು. ದ್ವಾಕ್ರಾ ಯೋಜನೆಯ ಗುರಿ ಇದೇ ಆಗಿತ್ತು. ಆದರೆ, ಈ ಗುಂಪುಗಳ ರಚನೆ, ಕಾರ್ಯ ವಿನ್ಯಾಸದಲ್ಲಿ ಅನೇಕ ನ್ಯೂನತೆಗಳು ಅಧ್ಯಯನಗಳಿಂದ ಕಂಡುಬಂದಿವೆ. ಫಲಾನುಭವಿಗಳನ್ನು ಆರಿಸುವಾಗ ರಾಜಕೀಯ ಒತ್ತಡಗಳು, ಸ್ವಾರ್ಥಪರತೆ, ಅಧಿಕಾರಿಶಾಹಿ ಧೋರಣೆ, ಜಾತಿ ಒತ್ತಡಗಳು, ಮುಂತಾದ ಅಡೆತಡೆಗಳುಂಟಾದವು. ಹಾಗೆಯೇ ಉದ್ದಿಮೆಗಳನ್ನು ನಡೆಸುವಾಗ ಕುಟುಂಬದ ಹಿರಿಯರ ಪುರುಷರ ದಬ್ಬಾಳಿಕೆ, ಬಿಡುವಿಲ್ಲದ ಗೃಹಕೃತ್ಯಗಳು, ಮಕ್ಕಳ ಲಾಲನೆ, ಪಾಲನೆ ಒಂದು ಕಡೆಯಾದರೆ, ಗುಂಪಿನ ಸದಸ್ಯರ ನಡುವೆ ಜಗಳ, ಭಿನ್ನಾಭಿಪ್ರಾಯಗಳು, ಹಣದ ದುರುಪಯೋಗ ಇತ್ಯಾದಿ ಮತ್ತೊಂದು ಕಡೆ, ಇದೆಲ್ಲಕ್ಕೂ ಮಿಗಿಲಾಗಿ ತರಬೇತಿ ಮತ್ತು ನೈಪುಣ್ಯತೆ ಕಾರ್ಯಕ್ರಮಗಳು ಸಹ ಸರಿಯಾಗಿ ನಡೆದಿಲ್ಲದಿರುವುದು ಕಂಡುಬಂದಿದೆ.

ಕಾರ್ಯಕ್ರಮಗಳ ಸಮಯ, ವೇಳಾಪಟ್ಟಿ, ತರಬೇತಿದಾರರ ಸಹನೆ, ಕುಶಲತೆ, ಸ್ಥಳ ಮತ್ತು ತರಬೇತಿ ಹೊಂದಲಿರುವ ಮಹಿಳೆಯರ ಆರ್ಥಿಕ ಪರಿಸ್ಥಿತಿ, ಜಾತಿ ಮುಂತಾದವುಗಳು ಸಮರ್ಪಕವಾದ ತರಬೇತಿ ಆಗುವುದರಲ್ಲಿ ಅಡ್ಡಿ ಆತಂಕಗಳನ್ನು ತಂದಿವೆ.

ವ್ಯವಸಾಯ, ರೇಷ್ಮೆ, ಹೈನುಗಾರಿಕೆ ಮುಂತಾದ ಉದ್ದಿಮೆಗಳ ಬಗ್ಗೆ ಜನರಿಗೆ ತಿಳುವಳಿಕೆ ಕೊಡಲು ಇರುವ ವಿಸ್ತರಣಾ ಸೇವೆಗಳು ಸಹ ಅನೇಕ ವೇಳೆ ಮಹಿಳೆಯರಿಗೆ ಸರಿಯಾಗಿ ತಲುಪದೆ ಹೋಗುತ್ತವೆ. ಇಂತಹ ಅಧಿಕಾರಿಗಳು ಸಾಮಾನ್ಯವಾಗಿ ಪುರುಷರಾಗಿದ್ದು, ಕುಟುಂಬದ ಹಿರಿಯ ಪುರುಷನ ಜೊತೆ ಮಾತ್ರ ಪ್ರತಿಕ್ರಿಯಿಸುವ ಸಾಮಾಜಿಕ ಬಂಧನಕ್ಕೊಳಗಾಗಿ, ಮಹಿಳೆ ಈ ಜ್ಞಾನದಿಂದ ಸಂಪೂರ್ಣವಾಗಿ ವಂಚಿತಳಾಗಿಯೇ ಉಳಿಯುವಂತಾಗಿದೆ.

ಅನೇಕ ವೇಳೆ ಪೂರ್ವಾಗ್ರಹ ಪೀಡಿತವಾಗಿ ಕುಟುಂಬದ ಹಿರಿಯರು ಈ ಉದ್ಯಮಶೀಲ ಮಹಿಳೆಯರನ್ನು ಬದಲಾವಣೆಯ ಪಥದಿಂದ ವಿಚಲಿತರಾಗುವಂತೆ ಮಾಡುತ್ತಾರೆ. ಪಡೆದ ತರಬೇತಿ ಸಹ ಉಪಯೋಗವಿಲ್ಲದಂತೆ ಆಗುತ್ತದೆ.

ಮೂರನೆಯ ಸಮಸ್ಯೆ ಎಂದರೆ, ಉದ್ಯೋಗ ಉದ್ಯಮಗಳನ್ನು ಒಂದು ಗುಂಪಿನ ಮಹಿಳೆಯರಿಗೆ ಪರಿಚಯಿಸಿದಾಗ, ಆ ಮಹಿಳೆಯರಿಗೆ ಆ ಉದ್ಯಮದಲ್ಲಿ ಏನೇನೂ ಆಸಕ್ತಿ ಇಲ್ಲದಿದ್ದರೆ, ಅಥವಾ ಆ ಪ್ರಾಂತ್ಯದಲ್ಲಿ ಆ ಕಸುಬು ಎಲ್ಲೂ ಇಲ್ಲದಿದ್ದು, ಜನರಿಗೆ ಅದರ ಪರಿಚಯವೇ ಇಲ್ಲದಿದ್ದರೆ, ಅಥವಾ ಅದನ್ನು ಉತ್ಪಾದಿಸುವ ಕಲೆ ತಿಳಿದಿರದಿದ್ದರೆ, ಆಗ ಸಹ ಉದ್ಯಮ ಕುಂಠಿತವಾಗುತ್ತದೆ. ಮಹಿಳಾ ಉದ್ದಿಮೆದಾರರು ತಮ್ಮ ಕುಲಕಸುಬುಗಳನ್ನು ಉದ್ದಿಮೆಯನ್ನಾಗಿ ಮಾರ್ಪಡಿಸಿದಾಗ ಯಶಸ್ಸು ಕಂಡಿರುವ ಅನೇಕ ನಿದರ್ಶನಗಳಿವೆ.

ನಾಲ್ಕನೆಯದಾಗಿ, ಕುಲಕಸುಬುಗಳು ಉದ್ದಿಮೆಗಳಾಗುವುದಕ್ಕೂ, ಹೊಸ ಕಸುಬುಗಳನ್ನು ಉದ್ಯಮಗಳಾಗಿ ಅಳವಡಿಸಿಕೊಳ್ಳುವುದಕ್ಕೂ ಮಹಿಳೆಯರಲ್ಲಿ ವ್ಯತ್ಯಾಸ ಕಂಡುಬಂದಿದೆ. ಕಚ್ಚಾ ವಸ್ತುಗಳ ಸಿಗುವಿಕೆ, ಸರಬರಾಜು ಮತ್ತು ಉತ್ಪಾದಿಸಿದ ವಸ್ತುಗಳ ವಿವೇವಾರಿ ಇವೆಲ್ಲಕ್ಕೂ ಅನಾನುಕೂಲಗಳಿರುತ್ತವೆ. ಮಹಿಳೆಯಾಗಿ ತಮ್ಮ ಮನೆ/ಗ್ರಾಮದಿಂದ ದೂರ ಹೋಗಿ ಇವೆಲ್ಲವುಗಳ ವ್ಯವಸ್ಥೆ ಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ.

ಗ್ರಾಮ ಸೇವಿಕೆ/ವಿಸ್ತರಣಾಧಿಕಾರಿಗಳು ಮತ್ತಿತರರು ಮಹಿಳೆಯರಾಗಿದ್ದರೂ, ಮಹಿಳೆಯರ ಬಗ್ಗೆ ಸಹಾನುಭೂತಿ ತೋರುವುದಿಲ್ಲ. ಉದ್ದಿಮೆಗಳನ್ನು ನಿಭಾಯಿಸುವಲ್ಲಿ ಅವರಿಗೆ ಮಾರ್ಗದರ್ಶನ ತೋರಿ ನಡೆಸಿಕೊಂಡು ಹೋಗುವಲ್ಲಿ ಅವರು ಯಶಸ್ವಿಯಾಗಿಲ್ಲವೆಂದು ಕಂಡುಬಂದಿದೆ. ಕೆಲವು ಬಾರಿ ಅವರು ಎಷ್ಟೇ ಕಷ್ಟಪಟ್ಟರೂ ಶ್ರಮ ವಹಿಸಿ ತರಬೇತಿ ಕೊಟ್ಟಾಗಿಯೂ ಕೂಡ ಮಹಿಳಾ ಫಲಾನುಭವಿಗಳು ಪ್ರತಿಕ್ರಿಯಿಸಿ, ಆಸಕ್ತಿ ತೋರಿಸಿ ಕೆಲಸ ಮಾಡುವುದಿಲ್ಲ, ಬದಲಾಗಿ ಅಧಿಕಾರಿಗಳ ಮನ ನೋಯಿಸಿ ಉದ್ದಿಮೆಯು ಸ್ಥಗಿತ ವಾಗುವುದಕ್ಕೆ ದಾರಿ ಮಾಡಿಕೊಡುತ್ತಾರೆ.

ಕೊನೆಯದಾಗಿ, ಮಹಿಳಾ ಉದ್ದಿಮೆದಾರರ ಅಜ್ಞಾನ, ಮೌಢ್ಯ ಮತ್ತು ಅಸಡ್ಡೆಯ ಫಲವಾಗಿ ಅವರು ಸಾಲದ ಹೊರೆ ಹೊತ್ತು ತೀರಿಸಲಾಗದೆ ಒದ್ದಾಡುವ ಪರಿಸ್ಥಿತಿ ತಲುಪುತ್ತಾರೆ. ಕೆಲವೊಮ್ಮೆ, ಇದೇ ಕಾರಣಗಳಿಂದ ತಮ್ಮ ಕುಟುಂಬದ ಪುರುಷರಿಂದ ಸಹ ತುಳಿತಕ್ಕೊಳಗಾಗುತ್ತಾರೆ.

ಒಂದು ವೇಳೆ ಉದ್ದಿಮೆ ಯಶಸ್ವಿಯಾಗಿ ನಡೆದರೂ ಎರಡು ಹಂತಗಳಲ್ಲಿ (ಕಚ್ಚಾ ವಸ್ತುಗಳ ಸರಬರಾಜು ಮತ್ತು ಸಿದ್ಧಪಡಿಸಿದ ಪದಾರ್ಥಗಳ ವಿಲೇವಾರಿ) ಸ್ವತಃ ತೀರ್ಮಾನ ತೆಗೆದುಕೊಳ್ಳುವುದು ಮತ್ತು ಖರ್ಚು ವೆಚ್ಚದ ವ್ಯಯ, ಆದಾಯದ ಮೇಲಿನ ಸ್ವಾಮ್ಯ ಮುಂತಾದವುಗಳಿಂದ ಅವರು ವಂಚಿತರಾಗಿಯೇ ಉಳಿದಿದ್ದಾರೆ.

# ಟಿ.ವಿ. ಮತ್ತು ಮಹಿಳೆ

## ಸಮೀಪಿಸುತ್ತಿರುವ ಭವಿಷ್ಯದ ಜಾಗತಿಕ ಸಮಸ್ಯೆ....

ಎಂ. ಉಷಾ

ಸಮೂಹ ಮಾಧ್ಯಮಗಳ ಸಂದರ್ಭದಲ್ಲಿ ಮಹಿಳಾ ಅಧ್ಯಯನ ಎರಡು ಪ್ರಶ್ನೆಗಳನ್ನು ಪ್ರಧಾನವಾಗಿ ಎತ್ತುತ್ತದೆ. ಒಂದು, ಸಮೂಹ ಮಾಧ್ಯಮವನ್ನೊಂದು ಉದ್ಯಮವಾಗಿ ಪರಿಗಣಿಸುತ್ತ ಅಲ್ಲಿ ಮಹಿಳೆಯರಿಗೆ ದೊರಕದಿರುವ ಅವಕಾಶಗಳನ್ನು ಕುರಿತಾದ ಪ್ರಶ್ನೆ. ಎರಡು, ಸಮೂಹ ಮಾಧ್ಯಮವನ್ನೊಂದು ಸಾಂಸ್ಕೃತಿಕ ಸಂಚಲನೆಯ ಘಟಕವಾಗಿ ಭಾವಿಸಿ ಅಲ್ಲಿ ಮಹಿಳೆಯರ ದುರ್ಬಳಕೆಯಾಗುತ್ತಿರುವುದರ ಕುರಿತಾದ ಪ್ರಶ್ನೆ. ಆದರೆ ಈ ಹೊತ್ತಿನ ಬಂಡವಾಳಶಾಹಿ ವ್ಯವಸ್ಥೆಯಾದರೋ ಮೇಲಿನೆರಡೂ ಪ್ರಶ್ನೆಗಳನ್ನು ಒಟ್ಟಿಗೆ ತಳುಕು ಹಾಕಿಕೊಂಡು, ತನಗೆ ಅನುಕೂಲವಾಗುವಂತೆ ಬಳಸಿಕೊಳ್ಳುವ ತಂತ್ರಗಾರಿಕೆಯ ಮೂಲಕ ಇಂತಹ ಪ್ರಶ್ನೆಗಳನ್ನೇ ಇಡಿಯಾಗಿ ನುಂಗಿ ನೀರು ಕುಡಿಯುವ ಕಾರ್ಯದಲ್ಲಿ ನಿರತವಾಗಿವೆ. ಮಹಿಳೆಯರನ್ನು ಒಂದು ಉಪಭೋಗಿ ವಸ್ತುವಾಗಿ ಬಳಸಿಕೊಳ್ಳುವ ಸಂದರ್ಭವನ್ನು ನಿರ್ಮಿಸಿ, ಅದನ್ನೇ ಅವಕಾಶಗಳೆಂದು ಕರೆದು ನಂಬಿಸುತ್ತಿವೆ. ಅಲ್ಲದೆ ವ್ಯವಸ್ಥೆಯು ನಿರ್ಮಿಸುತ್ತಿರುವ ಇಂತಹ ಅವಕಾಶಗಳನ್ನು ಅತ್ಯುತ್ಸಾಹದಿಂದ ತಬ್ಬಿಕೊಳ್ಳುತ್ತಿರುವ ಪ್ರಜ್ಞಾವಂತ ಹೆಣ್ಣುಮಕ್ಕಳ ದೊಡ್ಡ ದಂಡು ಈ ಸಂಗತಿಯನ್ನು ಮತ್ತಷ್ಟು ಸಂಕೀರ್ಣಗೊಳಿಸುತ್ತಿದೆ. ಹೆಣ್ಣಿನ ಬಳಕೆಯನ್ನೇ ಆಕೆಗೆ ನೀಡುವ ಅವಕಾಶವೆಂದು ಪ್ರತಿಪಾದಿಸುವ ವ್ಯವಸ್ಥೆ, ಆ ಅವಕಾಶದ ಮೂಲಕವೇ ಸೀಮೋಲ್ಲಂಘನ ಮಾಡಲು ಹೊರಟಿರುವ ಆಧುನಿಕ ಮಹಿಳೆ ಈ ಇಬ್ಬರ ಪೈಪೋಟಿಯು ಬೆಳವಣಿಗೆಯಿಂದಾಗಿ ಸಮೂಹ ಮಾಧ್ಯಮ ಮತ್ತು ಮಹಿಳೆ ಎಂಬ ಸಂಗತಿ ಈ ಹೊತ್ತು ಅತ್ಯಂತ ಸಂಕೀರ್ಣಸ್ವರೂಪವನ್ನು ತಾಳುತ್ತಿದೆ.

ಸಮೂಹ ಮಾಧ್ಯಮಕ್ಕೆ ಸಂಬಂಧಪಟ್ಟ ಈ ಚರ್ಚೆಯನ್ನು ಇನ್ನೂ ವಿಸ್ತಾರವಾದ ಪರಿಧಿಯಲ್ಲಿ ಕೂಡ ಪರಿಶೀಲಿಸಬಹುದಾಗಿದೆ. ತೊಂಭತ್ತರ ದಶಕದವರೆಗೆ ಸಮೂಹ ಮಾಧ್ಯಮಗಳು ಹೆಣ್ಣನ್ನು ಮಾತ್ರ ಸರಕಾಗಿ ಬಳಸಿಕೊಳ್ಳುತ್ತಿದ್ದರೆ ಈ ಹೊತ್ತು ಗಂಡು ಹೆಣ್ಣೆಂಬ ಭೇದವಿಲ್ಲದೆ ಇಬ್ಬರನ್ನೂ ಬಳಸಿಕೊಳ್ಳತೊಡಗಿವೆ. ಲಿಂಗಭೇದವನ್ನೂ ಮೀರಿ ಒಟ್ಟಾರೆಯಾಗಿ ಮನುಕುಲವನ್ನೇ ಉಪಭೋಗ ಸಂಸ್ಕೃತಿಯ ಸರಕಾಗಿಸುವ ದಿಕ್ಕಿನಲ್ಲಿ ಮುಂದುವರಿದು ಬಂಡವಾಳಶಾಹಿ ಜಗತ್ತಿನೊಂದಿಗೆ ತನ್ನ ಸಂಬಂಧವನ್ನು ಗಾಢಗೊಳಿಸಿ ಕೊಳ್ಳುತ್ತಿದ್ದು, ಈ ಕಾರ್ಯದಲ್ಲಿ ಟೆಲಿವಿಷನ್ ಜಾಲದ್ದು ಮೊದಲ ಹೆಸರಾಗಿದೆ.

ಟೆಲಿವಿಷನ್ ಮತ್ತು ಮಹಿಳೆ ಕುರಿತಂತೆ ಹಲವಾರು ಅಧ್ಯಯನಗಳು ನಡೆಯುತ್ತಿವೆ. ಇವುಗಳಲ್ಲಿ ಹೆಚ್ಚಿನವು ಟೆಲಿವಿಷನ್ ಉದ್ಯಮದ ಯಶಸ್ಸಿಗಾಗಿ ಕೈಗೊಂಡವುಗಳಾಗಿದ್ದು ಅವು ಮಹಿಳೆಯ ಪ್ರಧಾನ ಆಸಕ್ತಿಯನ್ನು ಟೆಲಿವಿಷನ್‌ನತ್ತ ಕೇಂದ್ರೀಕರಿಸುವುದರ ಸಾಧ್ಯತೆಗಳ ಹುಡುಕಾಟದಲ್ಲಿ ನಿರತವಾದುದಾಗಿವೆ. ಸೂಕ್ಷ್ಮವಾಗಿ ಗಮನಿಸಿದಾಗ ಈ ಅಧ್ಯಯನಗಳು ಟೆಲಿವಿಷನ್‌ಅನ್ನು ಮಹಿಳೆಯರ ಉಪಭೋಗಿ ಸರಕಾಗಿಸುವ ಮೂಲಕವೇ ಆಕೆಯನ್ನು ಹೆಚ್ಚು ಪರಿಣಾಮಕಾರಿಯಾದ ನೆಲೆಯಲ್ಲಿ ಉಪಭೋಗಿ ಸಂಸ್ಕೃತಿಯ ಸರಕಾಗಿಸುವ ದಾರಿಯೊಂದನ್ನು ಆವಿಷ್ಕರಿಸಿಕೊಡುವುದಾಗಿದೆ. ಮಹಿಳೆಯರಿಗೆ ಏನು ಬೇಕು ಎಂಬ ಉದಾರ ಆಹ್ವಾನವೊಂದನ್ನು ತೆರೆಯ ಮೇಲೆ ಸೃಷ್ಟಿಸುತ್ತಲೇ, ಮಹಿಳೆಯನ್ನು ಏನಾಗಿಸಬೇಕು ಎಂಬ ಅಣತಿಯನ್ನು ತೆರೆಯ ಮರೆಯಲ್ಲಿ ಬಂಡವಾಳಶಾಹಿ ಜಗತ್ತಿನಿಂದ ಪಡೆದುಕೊಳ್ಳುತ್ತಿವೆ.

ಟೆಲಿವಿಷನ್ ನಿರ್ವಹಿಸುತ್ತಿರುವ ಈ ತೆರೆ-ಮರೆಯ ನಾಟಕ ತೊಂಭತ್ತರ ದಶಕದಲ್ಲಿ ಹೆಚ್ಚು ವ್ಯಾಪಿಸುವುದಕ್ಕೆ ಬಲವಾದ ಜಾಗತಿಕ ಕಾರಣವೂ ಇದೆ. ಭಾರತದಂತಹ ಬೃಹತ್ ಜನಸಂಖ್ಯೆಯ ದೇಶದಲ್ಲಿ ಬೃಹತ್ ಬಂಡವಾಳದ ಕಬ್ಬಿಣದ ಕಾರ್ಖಾನೆಯೊಂದಕ್ಕಿಂತಲೂ ಹೆಚ್ಚು ಲಾಭವನ್ನು ಸೋಪು, ಪೇಸ್ಟ್‌ನಂತಹ ಸರಕುಗಳ ಉತ್ಪಾದನೆಯ ಮೂಲಕ ಮಾಡಬಹುದೆಂಬ ಲೆಕ್ಕಾಚಾರ ಇಂದು ಲೋಕ ಕಂಡ ಸತ್ಯ. ಈ ಸತ್ಯ ಸಾಕ್ಷಾತ್ಕಾರದ ಹಾದಿ ಹಿಡಿದೇ ಎಂತೆಂತಹ ಬೃಹತ್ ಬಂಡವಾಳದ ಉದ್ಯಮಗಳೂ ಸಹ ಇಂದು ಉಪ್ಪು-ಮಸಾಲೆಗಳ ತಯಾರಿಕೆಗೆ ಪೈಪೋಟಿ ನಡೆಸುತ್ತಿವೆ. ಪರಿಣಾಮವಾಗಿ ಉಪಭೋಗಿ ಸರಕುಗಳ ಉತ್ಪಾದನೆಯಲ್ಲಿ ಹಿಂದೆಂದೂ ಕಾಣದಷ್ಟು ಬಂಡವಾಳ ಹರಿದು ಬರುತ್ತಿದೆ. ದೊಡ್ಡ ಉದ್ಯಮ ಘಟಕಗಳು ಸಣ್ಣ ಸಾಮಗ್ರಿಗಳ ಉತ್ಪಾದನೆಯಲ್ಲಿ ಆಸಕ್ತವಾದ ಅಥವ ಸಣ್ಣ ಸಾಮಾನುಗಳು ದೊಡ್ಡ ಉದ್ಯಮ ಘಟಕವನ್ನು ಆಕರ್ಷಿಸತೊಡಗಿದ್ದರ, ಈ ಬೆಳವಣಿಗೆಯ ಪರಿಣಾಮವಾಗಿ ಇಂದು ಉಪಭೋಗಿ ಸರಕುಗಳ ಮಾರುಕಟ್ಟೆಯ ತಂತ್ರದಲ್ಲಿ ಅಮೂಲಾಗ್ರ ಬದಲಾವಣೆ ಉಂಟಾಗಿದೆ. ಇದುವರೆಗೂ ಸಾಮಾನ್ಯ ಜನ ಕಂಡು ಕೇಳರಿಯದ ಹಲವಾರು ಬೃಹತ್ ಬಂಡವಾಳ ಸಂಸ್ಥೆಗಳು ತಮ್ಮ ಹೆಸರನ್ನು ಸಣ್ಣಪುಟ್ಟ ಗ್ರಾಹಕ ಸಾಮಗ್ರಿಗಳೊಂದಿಗೆ ಡೋರ್ ಟು ಡೋರ್ ಡೆಲಿವರಿ ಮಾಡುವುದರಲ್ಲಿ ಪೈಪೋಟಿಗೆ ಇಳಿದಿವೆ. ಇದಕ್ಕೆ ಉದಾಹರಣೆಯಾಗಿ ಉಪ್ಪಿನ ಕತೆಯನ್ನೇ ನೋಡಿ.

ಉಪ್ಪಿಗೆ ಭಾರತದ ಸಾಂಸ್ಕೃತಿಕ, ರಾಜಕೀಯ, ಆರ್ಥಿಕ ಸಂದರ್ಭದಲ್ಲಿ ಮಹತ್ವದ ಸಂಕೇತವೊಂದಿದೆ. ತನಗಿಂತಲೂ ಉಪ್ಪನ್ನೇ ಮುಖ್ಯವೆಂದ ಮಗಳನ್ನು ಕಠಿಣ ಶಿಕ್ಷೆಗೆ ಗುರಿಪಡಿಸಿದ ರಾಜನೊಬ್ಬ ಕಡೆಗೆ ಉಪ್ಪಿನ ಮಹತ್ವವನ್ನು ಅರಿತು ಸೋಲೊಪ್ಪಿಕೊಂಡನೆನ್ನುವ ಜಾನಪದ ಕತೆಯಿಂದ ಹಿಡಿದು, ಗಾಂಧೀಜಿಯ ಉಪ್ಪಿನ ಸತ್ಯಾಗ್ರಹದವರೆಗೆ ಭಾರತೀಯರ ಬದುಕನ್ನು ವ್ಯಾಪಿಸಿರುವ ಅತಿ ಉಪಯುಕ್ತವಾದ ಕಡಿಮೆ ಬೆಲೆಯ ಉಪ್ಪು ಇಂದು ಭಾರತದಲ್ಲಿ ಕೇವಲ ಉಪ್ಪಾಗಿ ಉಳಿದಿಲ್ಲ. ಬದಲಿಗೆ ಅದು ವಿವಿಧ ಬೃಹತ್ ಬಂಡವಾಳ

ಸಂಸ್ಥೆಗಳ ಬೋರ್ಡುಗಳನ್ನು ತಗುಲಿಹಾಕಿಕೊಂಡ ವೈಜ್ಞಾನಿಕ ಉತ್ಪಾದನಾ ಸರಕಾಗಿ ಮನೆ ಮನೆಯನ್ನು ತಲುಪತೊಡಗಿದೆ. ಇದು ಉಪ್ಪಿನ ಕತೆಯಲ್ಲಿನ ಭಾರತದ ಪ್ರಗತಿ!

ಮೊನ್ನೆಮೊನ್ನೆಯಷ್ಟೇ ಪೊರಕೆಯ ಕಂಪೆನಿಯೊಂದು ಪೊರಕೆಯ ತುದಿಗೆ ಮಸಾಲೆ ಸಾಮಾನನ್ನೂ ಬಾಲಂಗೋಚಿಯಂತೆ ತೂಗುಹಾಕಿ ಮಾರಾಟಕ್ಕೆ ಇಳಿಸಿದೆ. ಇಂತಹ ಮಾರಾಟ ತಂತ್ರಗಳಿಂದಾಗಿ ನಿಜಕ್ಕೂ ಉಪ್ಪನ್ನು ತುಂಬಿದ ಪ್ಲಾಸ್ಟಿಕ್ ಡಬ್ಬಿ ಹಾಗು ಉಪ್ಪು, ಪೊರಕೆಗೆ ಕಟ್ಟಿದ ಮಸಾಲೆ ಪ್ಯಾಕೆಟ್ ಹಾಗು ಪೊರಕೆ ಈ ಎರಡರಲ್ಲಿ ಯಾವುದು ಅಗ್ಗದ ವಸ್ತುವಿರಬಹುದೆಂಬ, ಗ್ರಾಹಕರು ಯಾವುದರ ಬೆಲೆಯನ್ನು ಯಾವ ವಸ್ತುವಿನ ನೆಪದಲ್ಲಿ ತೆರುತ್ತಿದ್ದಾರೆಂಬ ಪ್ರಶ್ನೆ ಹುಟ್ಟಿಸುವಂತದ್ದಾಗಿದೆ. ಏಕೆಂದರೆ ಇಂತಹ ಮಾರಾಟ ತಂತ್ರಗಳಿಂದಾಗಿ ಬಂಡವಾಳ ಶಾಹಿ ಉತ್ಪಾದಕ ಜಗತ್ತಿನಲ್ಲಿ ಬೆಂಕಿ ಪೊಟ್ಟಣದಿಂದ ಹಿಡಿದು ಬೃಹತ್ ವಿದ್ಯುತ್ ಉಪಕರಣದವರೆಗೆ ಯಾವ ವಸ್ತುವಿನ ಉತ್ಪಾದನಾ ವೆಚ್ಚ ಏನಿರ ಬಹುದು?, ಮಾರುಕಟ್ಟೆಯಲ್ಲಿ ಅದರ ಮೌಲ್ಯವೇನಾಗಬೇಕು?, ಇತ್ಯಾದಿ ವಿಚಾರಗಳೆಲ್ಲ ಗ್ರಾಹಕರಿಗೆ ಅಗೋಚರವಾಗತೊಡಗುತ್ತಿವೆ.

ಜನಸಾಮಾನ್ಯರನ್ನು ಅಗೋಚರ ಕತ್ತಲಲ್ಲಿರಿಸುವ ಇಂತಹ ಕೆಲಸದಲ್ಲಿ ಬಂಡವಾಳಶಾಹಿ ವ್ಯವಸ್ಥೆ ತನ್ನ ಪರವಾಗಿ ಕಾರ್ಯನಿರ್ವಹಿಸಲು ಸಮೂಹ ಮಾಧ್ಯಮಗಳಿಗೆ ಇಮ್ಮಡಿ ಮುಮ್ಮಡಿ ಹಣ ತೆರಲು ಮುಂದಾಗಿದೆ. ಸಮೂಹ ಮಾಧ್ಯಮವು ಜನ ಸಾಮಾನ್ಯರಿಗೆ ಎಲ್ಲ ತಿಳುವಳಿಕೆಯನ್ನು ಒದಗಿಸುವ ನಾಟಕವಾಡುತ್ತಲೇ ಏನನ್ನು ತಿಳಿಯಬಾರದ ಸ್ಥಿತಿಗೆ ಜನತೆಯನ್ನು ತಲುಪಿಸುವುದಲ್ಲದೆ, ಬಂಡವಾಳಶಾಹಿ ಜಗತ್ತಿಗೂ ತಾನು ಅಹರ್ನಿಶಿ ನಿಮ್ಮ ಸೇವೆ ಸಲ್ಲಿಸುತ್ತಿದ್ದೇನೆ ಎಂಬುದಾಗಿಯೂ ನಂಬಿಸುತ್ತ ತಾನೊಂದು ಬೃಹತ್ ಬಂಡವಾಳಶಾಹಿ ಉದ್ಯಮವಾಗಿ ಬೆಳೆದು ಇಡೀ ಜಗತ್ತನ್ನೇ ತನ್ನ ಪದತಲದಲ್ಲಿ ಕೆಡವಿಕೊಳ್ಳುವತ್ತ ಮುಂದಾಗುತ್ತಿದೆ. ಇದರ ಪರಿಣಾಮವಾಗಿ ಕೊನೆಗೊಂದು ದಿನ ಸಮೂಹ ಮಾಧ್ಯಮಗಳ ಬೆಲೆಯನ್ನು ಗ್ರಾಹಕ ಹಾಗು ಉತ್ಪಾದಕರಿಬ್ಬರೂ ಪೂರೈಸಲಾರದ ಸ್ಥಿತಿಯೊಂದು ಉದ್ಭವಿಸಿದರೂ ಆಶ್ಚರ್ಯವಿಲ್ಲ. ಭಾರತದಲ್ಲಂತೂ ಇಂತಹ ಪರಿಸ್ಥಿತಿ ಈಗಾಗಲೇ ಕಾಣಿಸತೊಡಗಿದ್ದು ಸಣ್ಣ ಉದ್ದಿಮೆಗಳೊಂದಿಗೆ ಮಧ್ಯಮ ಪ್ರಮಾಣದ ಉದ್ದಿಮೆಗಳು ಇಂದು ಸಮೂಹ ಮಾಧ್ಯಮಗಳಿಂದ ದೂರವಿರಬೇಕಾದ ಉದಾಹರಣೆಗಳು ದೊರೆಯುತ್ತಿವೆ. ಹೀಗೆ ಸಮೂಹ ಮಾಧ್ಯಮಗಳು ಜಾಗತಿಕ ಅರ್ಥವ್ಯವಸ್ಥೆಯ ಅತಿ ಸಮೀಪದಲ್ಲಿರುವ ಭವಿಷ್ಯದ ಸಮಸ್ಯೆಯಾಗಿ ರೂಪುಗೊಳ್ಳುತ್ತಿದೆ. ಸಮೂಹ ಮಾಧ್ಯಮದ ಪ್ರಗತಿ ಎನ್ನುವುದು ಬರಲಿರುವ ಜಾಗತಿಕ ಸಂಕಷ್ಟವೊಂದರ ವಾಸನೆಯನ್ನು ಈ ಹೊತ್ತೇ ಅನುಭವಕ್ಕೆ ತರುತ್ತಿರುವಾಗ ಅದರ ಕುರಿತ ಪ್ರಶ್ನೆಗಳು ಕೇವಲ ಮಹಿಳಾ ಅಧ್ಯಯನದ ಸಂಗತಿಗಳು ಮಾತ್ರವಾಗಿ ಉಳಿಯ ಲಾರದಾಗಿದೆ.

**ಆಪೋಶಣ ಗೊಳ್ಳಬಹುದಾದ ಅಧ್ಯಯನ ಮಾದರಿಗಳು....**

ವಸ್ತುಸ್ಥಿತಿ ಹೀಗಿರುವಾಗ ಟೆಲಿವಿಷನ್ ಕುರಿತು ಮಹಿಳಾ ಅಧ್ಯಯನವು ತನ್ನ ವಿಶ್ಲೇಷಣೆಯೊಂದನ್ನು ಕೈಗೊಳ್ಳುವುದಾದರೆ ಅದರ ಅಧ್ಯಯನ ಮಾದರಿ ಹೇಗಿರಬೇಕೆಂಬುದೊಂದು ಜಟಿಲ ಪ್ರಶ್ನೆ. ಏಕೆಂದರೆ ನಾವು ಕೈಗೊಳ್ಳುವ ಯಾವ ಅಧ್ಯಯನವಾದರೂ ಸರಿಯೇ ಅದು ಮಹಿಳಾ ಅಧ್ಯಯನದ ಅಗತ್ಯಕ್ಕಿಂತ ಹೆಚ್ಚಾಗಿ ಉದ್ಯಮದ ಅಗತ್ಯವನ್ನೇ ಪೂರೈಸಬಹುದಾದ ಸಾಧ್ಯತೆ ಏನು ದೂರದ ಮಾತಲ್ಲ. ಏಕೆಂದರೆ ಮಹಿಳೆಯರ ಬೇಕು ಬೇಡಗಳ ನಾಡಿ ಮಿಡಿತವೇ ಟೆಲಿವಿಷನ್ ಜಾಲದ ಯಶಸ್ಸಿನ ಕೇಂದ್ರಬಿಂದು. ಹಾಗಾಗಿ ಎಂತಹ ಅಧ್ಯಯನವನ್ನು ಕೂಡ ಬಂಡವಾಳಶಾಹಿ ವ್ಯವಸ್ಥೆ ಆಪೋಶಣ ತೆಗೆದುಕೊಳ್ಳಬಹುದಾದ ಎಚ್ಚರವನ್ನು ಗಮನದಲ್ಲಿಟ್ಟುಕೊಂಡೇ ಈ ಅಧ್ಯಯನದ ಮಾದರಿಯನ್ನೂ ಸ್ವಲ್ಪ ಭಿನ್ನವಾಗಿಸಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನವು ತನ್ನದೇ ಆದ ನಿಶ್ಚಿತ ತಾತ್ವಿಕ ಚೌಕಟ್ಟು ಹಾಗು ಕ್ಷೇತ್ರಕಾರ್ಯದ ಮಾದರಿಯೊಂದನ್ನು ಗುರುತಿಸಿಕೊಂಡಿದೆ. ಕ್ಷೇತ್ರಕಾರ್ಯಕ್ಕಾಗಿ ರೂಪಿಸಿಕೊಂಡ ಪ್ರಶ್ನಾವಳಿಯ ಮಾದರಿಯನ್ನು ಅಧ್ಯಯನದ ಕೊನೆಯಲ್ಲಿ ನೀಡಿರುವುದರಿಂದ ಇಲ್ಲಿ ಅದರ ತಾತ್ವಿಕ ಚೌಕಟ್ಟನ್ನು ಕುರಿತಂತೆ ಮಾತ್ರ ಪ್ರಸ್ತಾಪಿಸಲಾಗಿದೆ.

ಟೆಲಿವಿಷನನ್ನು ಒಂದು ಉದ್ಯಮವಾಗಿ, ಸಾಂಸ್ಕೃತಿಕ ಸಂಚಲನ ಘಟಕವಾಗಿ ಗ್ರಹಿಸುವ ಎರಡು ಮಾದರಿಗಳು ಈಗಾಗಲೇ ಜನಪ್ರಿಯವಾಗಿದ್ದು, ಈ ಎರಡು ಮಾದರಿಗಳು ಟೆಲಿವಿಷನ್ ಉದ್ಯಮಜಾಲಕ್ಕೆ ಅತ್ಯಂತ ಉಪಯುಕ್ತವಾದ ಮಾದರಿಗಳೆಂಬುದು ಸಾಬೀತಾಗಿದೆ. ಹಾಗಾಗಿ ಈ ಎರಡು ಪ್ರಸಿದ್ಧಮಾದರಿಗಳನ್ನು ಬಿಟ್ಟು ಕೊಟ್ಟು ಇಲ್ಲಿ ಟೆಲಿವಿಷನ್ ಮತ್ತು ಮಹಿಳೆಯ ಸಂಬಂಧವನ್ನು ಕೌಟುಂಬಿಕ ವ್ಯಾಪ್ತಿಯಲ್ಲಿ ಗ್ರಹಿಸಲಾಗಿದೆ. ಕುಟುಂಬದೊಳಗಿನ ಸದಸ್ಯರಿಗೆ ಮನರಂಜನೆಗಾಗಿ/ ಜ್ಞಾನಕ್ಕಾಗಿ ಒದಗಿಸಲ್ಪಟ್ಟ ಒಂದು ಉಪಭೋಗಿ ಸರಕಾಗಿ ಟಿ.ವಿ.ಯನ್ನು ಭಾವಿಸುತ್ತ, ಈ ಸರಕನ್ನು ಕುಟುಂಬದ ಗೃಹಿಣಿಯೊಬ್ಬಳು ಬಳಸಿಕೊಳ್ಳಬಹುದಾದ ಸಾಧ್ಯತೆಗಳ ಸ್ವರೂಪವೇನು ಎಂಬುದರತ್ತ ಗಮನ ಹರಿಸಲಾಗಿದೆ. ಆ ಮೂಲಕ ಟೆಲಿವಿಷನ್ ಜಾಲವು ಗೃಹಿಣಿಯನ್ನು ತನ್ನ ಬಳಕೆಯ ವಸ್ತುವಾಗಿಸಿಕೊಂಡಂತೆ, ಗೃಹಿಣಿಯು ಟಿ.ವಿ. ಯನ್ನು ಹೇಗೆ ಗ್ರಹಿಸಿ, ಬಳಸಿಕೊಳ್ಳುತ್ತಿದ್ದಾಳೆ ಎಂಬುದನ್ನು ಅರಿಯಲು ಯತ್ನಿಸಲಾಗಿದೆ. ಅದಕ್ಕೆ ಪೂರಕವಾಗುವಂತೆ ಪ್ರಶ್ನಾವಳಿಯನ್ನು ರೂಪಿಸಲಾಗಿದ್ದು, ಆ ಅಂಶದ ತಾಳೆನೋಡುವಿಕೆಗಾಗಿ (ಕ್ರಾಸ್ ಚೆಕ್ಕಿಗೋಸ್ಕರ) ಮಾತ್ರವೇ ಟೆಲಿವಿಷನ್ ಕಾರ್ಯಕ್ರಮಗಳ ವಿವರ, ಗುಣಮಟ್ಟ, ಭಾಷೆ ಇತ್ಯಾದಿ ಪ್ರಶ್ನೆಗಳನ್ನು ಬಳಸಿಕೊಳ್ಳಲಾಗಿದೆ. ಹಾಗಾಗಿಯೇ ಈ ಅಧ್ಯಯನದ ಫಲಿತವು ಎಷ್ಟು ಮಹಿಳೆಯರು ಯಾವ ಭಾಷೆಯ, ಯಾವ ಚಾನಲಿನ ಯಾವ ಕಾರ್ಯಕ್ರಮ ನೋಡುತ್ತಾರೆ, ಇತ್ಯಾದಿ ಅಂಶಗಳನ್ನು ಇಲ್ಲಿ ಪ್ರಸ್ತಾಪಿಸುವುದಿಲ್ಲ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮೊದಲಿಗೆ ಪ್ರಸ್ತಾಪಿಸಬೇಕಾದ ಮುಖ್ಯ ಅನುಭವವೊಂದಿದೆ. ಅದು ಈ ಕ್ಷೇತ್ರಕಾರ್ಯಕ್ಕೆ ಮಹಿಳೆಯರು ಪ್ರತಿಕ್ರಿಯಿಸಿದ ವಿಧಾನ ಕುರಿತದ್ದು.

ಕ್ಷೇತ್ರಕಾರ್ಯದಲ್ಲಿ ಭಾಗವಹಿಸಿದ ಬಹಳಷ್ಟು ಜನ ಗೃಹಿಣಿಯರು ಸ್ವತಂತ್ರವಾಗಿ ತಾವೊಬ್ಬರೇ ತಕ್ಷಣದಲ್ಲಿ ಪ್ರಶ್ನೋತ್ತರ ಮಾಲಿಕೆಗೆ ಉತ್ತರಿಸುವ ಬಗ್ಗೆ ಅಷ್ಟೇನೂ ಉತ್ಸುಕರಾಗಿರಲಿಲ್ಲ. ಅಂದರೆ ತಮ್ಮ ಅಭಿಪ್ರಾಯಗಳನ್ನು ಕುಟುಂಬದವರೊಂದಿಗೆ ಚರ್ಚಿಸಿ ನೀಡಬೇಕೆಂಬ ಮನೋಭಾವ ಪ್ರಕಟಿಸಿದರು. ಎರಡನೆಯದಾಗಿ ಆದಾಯದ ವಿಚಾರ ಬಂದಾಗ ಖಚಿತವಾಗಿ ತಿಳಿಸಲು ಹಿಂಜರಿದರು. ಅದರಲ್ಲಿ ಕೆಲವರಿಗೆ ಆ ಬಗ್ಗೆ ಖಚಿತ ಮಾಹಿತಿ ಇಲ್ಲದಿದ್ದಿರ ಬಹುದಾದರೂ, ಕೆಲವರು ಮಾತ್ರ ಅದರ ಅಗತ್ಯ ಇಲ್ಲಿ ಯಾಕೆ ಎನ್ನುವ ಮೂಲಕ ಮನೆಯ ಯಜಮಾನನ ಪರಾಮರ್ಶೆ ಇಲ್ಲದೆ ಇಂತದ್ದನ್ನು ಮಾತನಾಡುವುದು ಸರಿಯಲ್ಲ ಎಂಬ ಇಂಗಿತ ಪ್ರಕಟಿಸಿದರು. ಕೊನೆಯದಾದ, ಆದರೆ ಎಲ್ಲಕ್ಕಿಂತ ಕುತೂಹಲಕಾರಿಯಾದದ್ದು ಕುಟುಂಬದ ಸದಸ್ಯರನ್ನು ಪ್ರತ್ಯೇಕಿಸಿ ಮಾಹಿತಿ ಸಂಗ್ರಹಿಸುವ ಸಂದರ್ಭದಲ್ಲಿ ಮುಖ್ಯವಾಗಿ ತನ್ನನ್ನು ಗಂಡನಿಂದ ಪ್ರತ್ಯೇಕಿಸಿ ನೋಡುವ ಕ್ರಮದ ಬಗ್ಗೆ ಸಂಕೋಚ, ಅನುಮಾನ, ಅಸಮಧಾನ ವ್ಯಕ್ತವಾದುದು.

ಮೇಲಿನ ಈ ಮೂರು ಅಂಶಗಳನ್ನು ಮನದಲ್ಲಿಟ್ಟುಕೊಂಡೇ ನಾವು ಅವರ ಉತ್ತರಗಳನ್ನು ಪರಿಶೀಲಿಸುವುದು ಹೆಚ್ಚು ಸೂಕ್ತ ಎನಿಸುತ್ತದೆ,. ಏಕೆಂದರೆ ಅವರು ನೀಡಿರುವ ಉತ್ತರಗಳನ್ನು ಈ ಪ್ರತಿಕ್ರಿಯೆಗಳು ಪ್ರಭಾವಿಸಿರುವ ಸಾಧ್ಯತೆ ಬಹಳವಾಗಿದೆ. ಮೇಲಿನ ಮೂರು ಅನುಭವಗಳಿಂದ ಬಹುತೇಕ ಎಲ್ಲ ಗೃಹಿಣಿಯರು ತಮ್ಮ ಪ್ರತಿಯೊಂದು ನಿಲುವು ಕುಟುಂಬದ ಕ್ಷೇಮಕ್ಕೆ ಭಂಗ ತರಬಾರದೆಂಬ ಆಶಯವನ್ನು ವ್ಯಕ್ತಪಡಿಸುವುದೇ ಆಗಿತ್ತಲ್ಲದೆ, ಆ ಕುಟುಂಬ ಕ್ಷೇಮದ ಜವಾಬ್ದಾರಿಯನ್ನು ತನ್ನ ನೈತಿಕ ಹೊಣೆಯಾಗಿ ಒಪ್ಪಿಕೊಂಡಿರುವುದನ್ನೂ ಸೂಚಿಸುತ್ತದೆ. ಅಂದರೆ ಎಲ್ಲಿ ಮಹಿಳೆ ತನ್ನನ್ನೊಬ್ಬ ಸ್ವತಂತ್ರ ಜೀವಿಯಾಗಿ ಗುರುತಿಸಿ ಕೊಳ್ಳುವುದಕ್ಕಿಂತ ಹೆಚ್ಚಾಗಿ ಕುಟುಂಬದ ಓರ್ವ ಆದರ್ಶ ಸದಸ್ಯೆಯಾಗಿ ಪ್ರತಿನಿಧಿಸಿಕೊಳ್ಳಲು ಬಯಸುತ್ತಾಳೋ ಅಲ್ಲಿ ಆಕೆಯ ಅಭಿಪ್ರಾಯಗಳು ಉಳಿದೆಲ್ಲ ಸಂಗತಿಗಳಿಂದ ಸ್ವತಂತ್ರವಾಗಿ ಸ್ವಯಂ ಆಗಿ ಇರುತ್ತವೆ ಎಂಬುದು ಸಾಧ್ಯವಿಲ್ಲ. ಆ ಕಾರಣಕ್ಕಾಗಿಯೇ ಉಳಿದ ಅಧ್ಯಯನದ ಮಾದರಿಗಳಿಂದ ಮಹಿಳಾ ಅಧ್ಯಯನದ ಮೆಥೆಡಾಲಜಿ ಭಿನ್ನವಾಗ ಬೇಕಾಗುತ್ತದೆ. ಪ್ರಧಾನ ಅಧ್ಯಯನ ವಿಧಾನ ಹಾಗು ಮಹಿಳೆಯರಿಗಿರುವ ಈ ವಿಲೋಮ ಸಂಗತಿಯನ್ನು ಸಾಧ್ಯವಾದಷ್ಟು ಪರಿಹರಿಸಿಕೊಳ್ಳುವ ಸಲುವಾಗಿಯೇ ಪ್ರಶ್ನೆಗಳಿಗೆ ಉತ್ತರಿಸುವಾಗಿನ ಮಹಿಳೆಯರ ಪ್ರತಿಕ್ರಿಯೆಯ ಅವಲೋಕನದೊಂದಿಗೇ ಪ್ರಶ್ನಾವಳಿಯ ಮಾದರಿಯನ್ನು ಸುತ್ತು ಬಳಕೆಯ ದಾರಿಯಾಗಿಸಿಕೊಳ್ಳಲಾಗಿದೆ. ಉದಾ: ಮೆಚ್ಚಿನ ಕಾರ್ಯಕ್ರಮ ಯಾವುದು ಎಂಬ ಪ್ರಶ್ನೆಯ ಉತ್ತರವನ್ನು ಅವರು ಕೊಟ್ಟಿರುವ ವೀಕ್ಷಣೆಯ ಸಮಯ ಹಾಗು ಕುಟುಂಬದ ಇತರ ಸದಸ್ಯರ ವೀಕ್ಷಣಾ ಸಮಯ ಇವುಗಳ ಸಂದರ್ಭದಲ್ಲಿ ತಾಳೆ ನೋಡುವ ಚೆಕ್ ಅಂಡ್ ಮೇಟ್ ವಿಧಾನ ಅನುಸರಿಸಲಾಗಿದೆ.

ಕ್ಷೇತ್ರಕಾರ್ಯದಲ್ಲಿ ಭಾಗಿಯಾದ ಗೃಹಿಣಿಯರು ಬೇರೆ ಬೇರೆ ಜಾತಿ, ಭಾಷೆಗಳಿಗೆ ಸೇರಿದವರಾಗಿದ್ದರೂ ಅವರುಗಳ ಅರ್ಥಿಕ ಸ್ಥಿತಿಗತಿಗಳಲ್ಲಿ ಗಮನಾರ್ಹವಾದ ವ್ಯತ್ಯಾಸವೇನೂ

ಇರಲಿಲ್ಲ. ಇವರೆಲ್ಲ ಬಹುಭಾಷಿಕ ಪ್ರದೇಶದಲ್ಲಿ ವಾಸಿಸುವವರಾಗಿದ್ದರಿಂದ ಟೆಲಿವಿಷನ್ ವೀಕ್ಷಣೆಯಲ್ಲಿ ಭಾಷೆಯನ್ನೊಂದು ಸಮಸ್ಯೆಯಾಗಿ ಹೊಂದಿದವರಾಗಿರಲಿಲ್ಲ. ಹಾಗಾಗಿ ಒಂದಕ್ಕಿಂತ ಹೆಚ್ಚು ಭಾಷೆಯ ಛಾನಲ್‌ಗಳನ್ನು ವೀಕ್ಷಿಸುವ ಹವ್ಯಾಸ ಹೊಂದಿದವರಾಗಿದ್ದರು. ಕ್ಷೇತ್ರಕಾರ್ಯಕ್ಕಾಗಿ ಬಳಸಿಕೊಂಡ ಗೃಹಣಿಯರ ಸಂಖ್ಯೆ ತೀರ ಸಾಂಕೇತಿಕವಾದುದಾಗಿದ್ದು ಅದನ್ನೇ ಶೇಕಡಾವಾರು ಅಂಕಿ ಅಂಶವಾಗಿ ಗುಣಿತಗೊಳಿಸಿ ಕೊಳ್ಳಲಾಗಿದೆ.

## 'ಮಹಿಳಾ ಸಮಯದ' ಸೃಷ್ಟಿ....

ಮೇಲಿನೆಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಈ ಅಧ್ಯಯನದ ಕೇಂದ್ರವಾದ 'ಕುಟುಂಬ' ಹಾಗು 'ಟೆಲಿವಿಷನ್' ಗಳ ನಿರ್ವಚನದ ಸ್ವರೂಪವೇನು ಎಂಬುದನ್ನು ಮೊದಲಿಗೆ ಕಂಡುಕೊಳ್ಳಬೇಕಿದೆ.

ಟೆಲಿವಿಷನ್ ಎಂದರೇನು? ಅದರ ಮುಖ್ಯ ಉಪಯೋಗವೇನು? ಎಂಬ ಪ್ರಶ್ನೆಗೆ ನೂರಕ್ಕೆ ನೂರರಷ್ಟು ಮಹಿಳೆಯರ ಗ್ರಹಿಕೆ ಅದೊಂದು ಕೌಟುಂಬಿಕ ಮನರಂಜನ ಸಾಧನ ಎಂಬುದಾಗಿತ್ತಾದರೂ ಅದರಲ್ಲಿ ಶೇ ೩೦ರಷ್ಟು ಗೃಹಿಣಿಯರು ಮನರಂಜನೆಯ ಸಾಧನ ಎಂಬುದರೊಂದಿಗೆ ಜ್ಞಾನಸಾಧನ ಎಂಬುದಾಗಿ ಕೂಡ ಗ್ರಹಿಸಿದವರಾಗಿದ್ದರು. ಹಾಗಾಗಿ ಇವರೆಲ್ಲರ ಉತ್ತರದಲ್ಲಿ ಕುಟುಂಬದ ಸದಸ್ಯರ ಮನರಂಜನೆ ಹಾಗು ಜ್ಞಾನವಿಸ್ತರಣೆಯಲ್ಲಿ ಯಾರ್ಯಾರ ಅಗತ್ಯಗಳು ಎಷ್ಟು ಎಂಬುದರ ತೀರ್ಮಾನ ಅಡಗಿತ್ತು. ಅದನ್ನು ಈ ಕೆಳಗಿನಂತೆ ಗುರುತಿಸಬಹುದು.




ಮನರಂಜನೆಯ ಸಾಧನ


ಮನರಂಜನೆ + ಜ್ಞಾನ ಸಾಧನ

ಚಿತ್ರ ೧

ಕ್ಷೇತ್ರಕಾರ್ಯದಲ್ಲಿ ಭಾಗವಹಿಸಿದವರೆಲ್ಲ ಮಧ್ಯಮವರ್ಗಕ್ಕೆ ಸೇರಿದ ಗೃಹಿಣಿಯರಾದ್ದರಿಂದ ಎಲ್ಲರೂ ತಮ್ಮ ಕುಟುಂಬವನ್ನು ಸುಸಂಸ್ಕೃತವಾದ ಆಧುನಿಕ ಸಮಾಜ ಘಟಕವಾಗಿ ನಿರ್ವಚಿಸಿಕೊಳ್ಳಲು ಪ್ರಯತ್ನಿಸಿದವರಾಗಿದ್ದರು. ಆಧುನಿಕ ಭಾರತೀಯ ಸಮಾಜವು ನಿರ್ವಚಿಸಿದ ಕುಟುಂಬ ವ್ಯವಸ್ಥೆಯೊಳಗಿನ ಸ್ಥಾನ ನಿರ್ದೇಶನಗಳನ್ನು ಒಪ್ಪಿದವರಾಗಿದ್ದರು. ಅಂದರೆ ಕುಟುಂಬದ ವಿವಿಧ ಸದಸ್ಯರ ನಡುವಿರುವ ಸಂಬಂಧ ನಿರ್ದೇಶನಗಳ ಆಧಾರದ ಮೇಲೆ ಗಂಡ-ಹೆಂಡತಿ-ಅತ್ತೆ-ಮಾವ-ಮಗ-ಮಗಳು ಇತ್ಯಾದಿ ಸಂಬಂಧಗಳಿಗಿರುವ ಅಧಿಕಾರದ ಸ್ವರೂಪವನ್ನು ಕ್ವಚಿತ್ತಾದ ಭಿನ್ನತೆಯೊಂದಿಗೆ ಒಪ್ಪಿದವರಾಗಿದ್ದರು. ಇಲ್ಲಿ ಬಳಸಲಾಗಿರುವ ಕ್ವಚಿತ್ತಾದ ಭಿನ್ನತೆ ಎಂಬುದನ್ನು ಈ ರೀತಿ ವಿವರಿಸಬಹುದೇನೋ.

ಗಂಡ-ಹೆಂಡತಿ-ಮಕ್ಕಳು ಎಂಬ ಆಧುನಿಕ ಕುಟುಂಬ ರಚನೆಯ ಚೌಕಟ್ಟಿಗಿಂತ ಸ್ವಲ್ಪ ಬೇರೆಯಾದ ಸಂಬಂಧಗಳನ್ನು, ಅಂದರೆ ಅತ್ತೆ-ಮಾವ ನಾದಿನಿ ಇತ್ಯಾದಿಗಳನ್ನು, ಪರಿಧಿಯಲ್ಲಿನ ಅಥವ ಹೆಚ್ಚುವರಿ ಸಂಬಂಧಗಳಾಗಿಯೇ ಸ್ವೀಕರಿಸುವ ಮನೋಭಾವ ಕಂಡುಬರುತ್ತದೆ. ಹಾಗಾಗಿ ಇದನ್ನು ಗಂಡ-ಹೆಂಡತಿ-ಮಕ್ಕಳ ತ್ರಿಕೋಣ ಸಂಬಂಧದಲ್ಲಿ ಕೇಂದ್ರೀಕೃತವಾದ ಆಧುನಿಕ ಭಾರತೀಯ ಕುಟುಂಬಗಳೆಂದು ನಿರ್ವಚಿಸಲಾಗಿದೆ. ಹೀಗೆ ಹಿರಿಯ ಸದಸ್ಯರನ್ನು ಒಳಗೊಂಡಿದ್ದ ಕುಟುಂಬಗಳು ಶೇ.೨೪ರಷ್ಟಿದ್ದು ಅಂತಹ ಕುಟುಂಬಗಳಲ್ಲಿ ಸದಸ್ಯರೆಲ್ಲರ ಟೆಲಿವಿಷನಿನ ಅಗತ್ಯವೆಂಬುದು ಕುಟುಂಬದ ಸದಸ್ಯರ ವಯೋಮಾನ, ಸ್ಥಾನಮಾನ, ವರಮಾನ ಇತ್ಯಾದಿಗಳಲ್ಲಿ ಯಾವೊಂದನ್ನೋ ಪ್ರಧಾನವಾಗಿ ಆಧರಿಸಿದ್ದಾಗಿರದಿದ್ದರೂ, ಆ ಎಲ್ಲದರ ಮಿಶ್ರ ಪರಿಣಾಮದ ಮೇಲೆ ರೂಪುಗೊಂಡದ್ದಾಗಿತ್ತು.

ಹಿರಿಯ ಸದಸ್ಯರನ್ನು ಖಾಯಂ ಆಗಿ ಹೊಂದಿಲ್ಲದ ಶೇ.೭೬ರಷ್ಟು ಕುಟುಂಬಗಳಲ್ಲಿ ಟೆಲಿವಿಷನಿನ ಬಳಕೆ ಎಂಬುದು ಗಂಡ-ಹೆಂಡತಿ-ಮಕ್ಕಳು ಎಂಬ ತ್ರಿಕೋಣ ಸಂಬಂಧದಲ್ಲಿ ರೂಪಿತವಾದುದಾಗಿದ್ದು ಅಲ್ಲಿನ ತೀರ್ಮಾನಗಳು ಹಲವಾರು ಭಿನ್ನತೆಯನ್ನು ವ್ಯಕ್ತಪಡಿಸಿದವು. ಅದನ್ನು ಈ ರೀತಿ ಗುರುತಿಸಬಹುದು.




A:24% ಹಿರಿಯ ಸದಸ್ಯರನ್ನೊಳಗೊಂಡ ಕುಟುಂಬ ಗೃಹಣಿಯರು

B:28% ವಿವಿಧ ರೀತಿಯಲ್ಲಿ ಟಿ.ವಿ. ವೀಕ್ಷಣಾ ಸ್ಪರ್ಧೆಯಲ್ಲಿ ಹೊರಗುಳಿದ ಗೃಹಣಿಯರು

C:16% ಅಸಮರ್ಪಕ ಮಾಹಿತಿ ನೀಡಿರುವರು

D:32% ಮಹಿಳಾ ಸಮಯದ ನಿರ್ವಚನಕ್ಕೆ ನೆರವಾದವರು

ಚಿತ್ರ ೨

ಟಿವಿಯನ್ನು ದಿನದಲ್ಲಿ ತಾವೇ ಹೆಚ್ಚಾಗಿ ಬಳಸಿಕೊಳ್ಳುತ್ತಿರುವುದಾಗಿ ಶೇ.೧೬ರಷ್ಟು ಗೃಹಿಣಿಯರು ತಿಳಿಸಿದರಾದರೂ, ಈ ಯಥೇಚ್ಛ ಅವಕಾಶ ಆಕೆಗೆ ದೊರಕಲು ಕಾರಣಗಳೇನಿರಬಹುದು ಎಂಬ ಅಂಶ ಪ್ರಶ್ನೋತ್ತರ ಮಾಲಿಕೆಯ ಸಂದರ್ಭದಲ್ಲಿ ಈ ರೀತಿ ವ್ಯಕ್ತವಾಯಿತು. ಗಂಡನಿಗೆ ಟಿ.ವಿ. ನೋಡುವುದರಲ್ಲಿ ಆಸಕ್ತಿ ಇಲ್ಲದಿರುವುದು ಹಾಗು ಮಕ್ಕಳನ್ನು ಟಿ.ವಿ.ನೋಡುವುದರಲ್ಲಿ ನಿರುತ್ಸಾಹಿಸಿರುವುದು ಇದಕ್ಕೆ ಕಾರಣವಾಗಿತ್ತು. ಅಂದರೆ ಟಿ.ವಿ. ನೋಡುವಿಕೆಗೆ ಬೇಡಿಕೆಯೇ ಇಲ್ಲದ ಕುಟುಂಬಗಳಲ್ಲಿ ಗೃಹಿಣಿಗೆ ಅಗ್ರಸ್ಥಾನವಿತ್ತು.

ಮೇಲಿನದಲ್ಲದೆ ಟಿ.ವಿ.ಯನ್ನು ಅತ್ಯಧಿಕವಾಗಿ ಬಳಸಿಕೊಳ್ಳುವವರ ಶೇ.೪ ಪ್ರಮಾಣದ ಇನ್ನೊಂದು ಗುಂಪು ಕಂಡುಬಂದಿದ್ದು ಅದಕ್ಕೆ ಕಾರಣಗಳು ಈ ರೀತಿಯದಾಗಿತ್ತು. ಈ ಗೃಹಿಣಿಯರು ಟಿ.ವಿ.ಜೊತೆಯಲ್ಲಿ ತಮ್ಮದೇ ಆದ ನಿಶ್ಚಿತ ಅಭಿರುಚಿಯನ್ನಾಗಲಿ, ಭಾವನಾತ್ಮಕ ಸಂಬಂಧವನ್ನಾಗಲೀ ಏರ್ಪಡಿಸಿಕೊಳ್ಳದವರಾಗಿದ್ದು ಇವರಿಗೆ ನಾನು ಟಿ.ವಿ. ನೋಡುವ ಸಮಯ ಎಂಬುದೂ ಇಲ್ಲ. ನೋಡಲಾಗದ ಸಮಯ ಎಂಬುದೂ ಇರಲಿಲ್ಲ.

ಟಿ.ವಿ. ಚಾಲು ಇದ್ದಾಗಲೆಲ್ಲ ನೋಡುವವರಾಗಿದ್ದು ಕುಟುಂಬದ ಇತರ ಸದಸ್ಯರ ವೀಕ್ಷಣಾ ಸಮಯವೆಲ್ಲದರ ಮೊತ್ತವಾಗಿ ಇವರ ವೀಕ್ಷಣಾ ಸಮಯ ರೂಪುಗೊಂಡುದಾಗಿತ್ತು.

ಮೇಲಿನ ಎರಡು ಬಗೆಯ ಗೃಹಿಣಿಯರೊಂದಿಗೆ ಶೇ ೪ರಷ್ಟು ಜನ ನೇರವಾಗಿ ತಮಗೆ ಟಿ.ವಿ.ನೋಡುವ ಅಭಿರುಚಿ ಇಲ್ಲ. ಟಿ.ವಿ. ಕಣ್ಣೆದುರಿಗೆ ಇರುವುದರಿಂದ ಒಮ್ಮೊಮ್ಮೆ ನೋಡಲೇ ಬೇಕಾಗುತ್ತದೆ ಎಂದು ಹೇಳುವ ಮೂಲಕ ಅಧ್ಯಯನದಿಂದ ತಮ್ಮನ್ನು ನೇರವಾಗಿ ಹೊರಗಿಟ್ಟು ಕೊಂಡರು. ಹೀಗೆ ಸಣ್ಣ ಕುಟುಂಬಗಳ ಶೇ.೭೬ ರಷ್ಟು ಗೃಹಿಣಿಯರಲ್ಲಿ ಕೂಡ ಶೇ.೨೪ರಷ್ಟು ಗೃಹಿಣಿಯರು ಕುಟುಂಬದಲ್ಲಿ ಟಿ.ವಿ. ನೋಡುವ ಸ್ಪರ್ಧೆಯಲ್ಲಿ ವಿವಿಧ ಕಾರಣಗಳಿಗಾಗಿ ಪೈಪೋಟಿ ಒಡ್ಡಲಾರದವರಾಗಿದ್ದರು.

ಕ್ಷೇತ್ರಕಾರ್ಯದಲ್ಲಿ ಶೇ. ೧೬ರಷ್ಟು ಗೃಹಿಣಿಯರು ಕಾಲಂನಿಂದ ಕಾಲಂಗೆ ಪರಸ್ಪರ ಹೊಂದಿಕೆಯಾಗದ ಉತ್ತರಗಳನ್ನು ನೀಡುವುದರ ಮೂಲಕವೇ ತಮ್ಮ ಅನಿಸಿಕೆಗಳು ತೋರಿಕೆಯವು ಎಂಬುದನ್ನು ರುಜುವಾತು ಪಡಿಸಿದರು. ಅಂದರೆ ಇವರು ನೀಡಿದ ಮೆಚ್ಚಿನ ಕಾರ್ಯಕ್ರಮಗಳ ವಿವರ, ವೀಕ್ಷಣಾ ಸಮಯದ ವಿವರ ಹಾಗು ಕುಟುಂಬದ ಇತರ ಸದಸ್ಯರ ವೀಕ್ಷಣಾ ಸಮಯಗಳ ನಡುವೆ ಹೊಂದಾಣಿಕೆ ಕಂಡು ಬರಲಿಲ್ಲ. ಹಾಗಾಗಿ ಇವರ ಅಭಿಪ್ರಾಯಗಳನ್ನು ತೀರ್ಮಾನಗಳ ಸಂದರ್ಭದಲ್ಲಿ ಬಳಸಿಕೊಳ್ಳಲಾಗಲಿಲ್ಲ.

ಉಳಿದ ಶೇ.೩೨ರಷ್ಟು ಗೃಹಿಣಿಯರು ಟಿ.ವಿ. ನೋಡುವ ವಿಷಯದಲ್ಲಿ ತಮಗಿರುವ ಸಮಸ್ಯೆಯನ್ನು ತೋರ್ಪಡಿಸಿದರು. ಅವರಲ್ಲಿ ಶೇ. ೧೨ರಷ್ಟು ಗೃಹಿಣಿಯರು ಈ ಕುರಿತ ಅಭಿಪ್ರಾಯವನ್ನು ನೇರವಾಗಿ ಅಸಮಧಾನದ ರೂಪದಲ್ಲೇ ವ್ಯಕ್ತಪಡಿಸಿದರು. ಅವರು ನೀಡಿದ ಕಾರಣಗಳು ಈ ರೀತಿಯವು. ಒಂದು, ನಮ್ಮ ಮನೆಯವರು ತಮಗೆ ಬೇಕಾದ ಚಾನಲ್ ಹಾಕುತ್ತಾರೆ (ಮುಖ್ಯವಾಗಿ ಇಂಗ್ಲೀಷ್) ಎರಡು, ನಮ್ಮ ಮನೆಯವರು ಹೆಚ್ಚು ಟಿ.ವಿ. ನೋಡುವುದು ಕಾಲಹರಣ ಕೆಟ್ಟದ್ದು, ಮಕ್ಕಳ ಮೇಲೆ ಕೆಟ್ಟ ಪರಿಣಾಮ ಬೀರುತ್ತದೆ ಇತ್ಯಾದಿ ಕಾರಣಗಳಿಂದ ನಿರ್ಬಂಧಿಸುತ್ತಾರೆ. ಮೂರು, ಯಾರು ನೇರವಾಗಿ ನಿರ್ಬಂಧಿಸ ದಿದ್ದರೂ ರಾತ್ರಿ ಕೆಲಸದ ವೇಳೆಯಾದ್ದರಿಂದ ನೋಡಲಾಗುವುದಿಲ್ಲ. ಏಕೆಂದರೆ ತಮ್ಮ ದೈನಂದಿನ ಅಗತ್ಯಗಳ ವಿಷಯದಲ್ಲಿ ಯಾವ ಬದಲಾವಣೆ ಅಥವ ರಿಯಾಯತಿಯೂ ನಮ್ಮ ಮನೆಯಲ್ಲಿ ಸಾಧ್ಯವಿಲ್ಲ.

ಇನ್ನುಳಿದ ಶೇ. ೨೦ರಷ್ಟು ಮಹಿಳೆಯರು ಕುಟುಂಬದ ಇತರ ಸದಸ್ಯರಿದ್ದಾಗ ಅಂದರೆ ಗಂಡ,ಮಕ್ಕಳು ಇದ್ದಾಗ ಟಿ.ವಿ. ಬಗೆಗಿನ ತಮ್ಮ ಆದ್ಯತೆ ಕಡಿಮೆಯಾಗುವುದನ್ನು ಪ್ರಸ್ತಾಪಿಸಿದ ರಾದರೂ ಅದನ್ನೊಂದು ಕೊರತೆಯಾಗಿ ಭಾವಿಸಿ ತೀವ್ರ ವಿಷಾದವನ್ನೇನೂ ವ್ಯಕ್ತಪಡಿಸಲಿಲ್ಲ. ಕುಟುಂಬದ ಸದಸ್ಯರಲ್ಲೆಲ್ಲ ಇಡೀ ದಿನ ಮನೆಯಲ್ಲಿರುವವಳು ತಾನೇ ಆಗಿರುವುದರಿಂದ ಹೊರಗಿನಿಂದ ಬಂದವರಿಗೆ ಅವರಿರುವಷ್ಟು ಹೊತ್ತು ಅವಕಾಶ ದೊರೆಯಬೇಕೆಂಬುದು ಅವರ ಅಭಿಪ್ರಾಯದ ಸಾರಾಂಶವಾಗಿತ್ತು. ಈ ಸಂತೃಪ್ತ ಮನಸ್ಥಿತಿಯ ಹಿಂದೆ ಮಧ್ಯಾಹ್ನದ ಕಾರ್ಯಕ್ರಮಗಳು ಬೆಂಬಲವಾಗಿ ನಿಂತಿದ್ದರೂ ಅದಕ್ಕಿಂತ

ಬಲವಾದ ಭಾವನೆಯೊಂದು ಕೆಲಸ ಮಾಡಿದ್ದು ಅಧ್ಯಯನದ ಸಂದರ್ಭದಲ್ಲಿ ಗೋಚರವಾಯಿತು. ಕುಟುಂಬವೊಂದರಲ್ಲಿ ಕುರ್ಚಿ, ಮಂಚ, ಚಿನ್ನಾಭರಣಗಳಂತೆ ಟಿ.ವಿ.ಕೂಡ ಒಂದು ವಸ್ತು. ಈ ಎಲ್ಲ ವಸ್ತುಗಳನ್ನು ಯಾರ್ಯಾರ ಅಗತ್ಯಕ್ಕೆ ಎಷ್ಟೆಷ್ಟು ಬಳಸಿಕೊಳ್ಳಬೇಕು ಎಂಬುದರ ಬಗ್ಗೆ ಕುಟುಂಬದಲ್ಲಿ ಒಂದು ಬಗೆಯ ಹೊಂದಾಣಿಕೆ ಇರುತ್ತದೆ. ಉದಾ: ಮಂಚ ಕುರ್ಚಿ ಎಂಬುದು ಸದಸ್ಯರೆಲ್ಲರೂ ಒಟ್ಟಿಗಿದ್ದಾಗ ಖಂಡಿತವಾಗಿ ಹಿರಿಯರಿಗೆ ಸಲ್ಲಬೇಕೆಂಬ ನಂಬಿಕೆ. ಹಾಗೆಯೇ ಚಿನ್ನಾಭರಣ ಹೆಣ್ಣುಮಕ್ಕಳಿಗೆ ಸೇರಬೇಕಾದ ವಸ್ತು. ಈ ರೀತಿಯಲ್ಲಿ ಗಮನಿಸಿದಾಗ ಟಿ.ವಿ. ಎಂಬ ಆಕರ್ಷಕ ಮನರಂಜನಾ ವಸ್ತುವನ್ನು ಕೂಡ ಕುಟುಂಬದ ಸದಸ್ಯರು ಹೇಗೆ ಹಂಚಿಕೊಳ್ಳಬೇಕೆಂಬ ತಿಳುವಳಿಕೆ ಇಲ್ಲಿ ಕೆಲಸ ಮಾಡಿದೆ. ದುಡಿದು ತರುವ ಗಂಡ, ಭವಿಷ್ಯದಲ್ಲಿ ಆಸರೆಯಾಗಬೇಕಾದ ಮಗ, ಪರರ ಒಡವೆಯಾಗಿ ಹೋಗುವ ಮಗಳು- ಈ ಮೂವರಿಗೆ ಕ್ರಮೇಣ ಆದ್ಯತೆ ದೊರೆಯ ಬೇಕೆಂಬ ನಿಲುವು ಇವರದಾಗಿದೆ. ಭಾರತೀಯ ಕುಟುಂಬಗಳಲ್ಲಿ ಈ ತಿಳುವಳಿಕೆಯನ್ನು ಅರಿತೇ ಟೆಲಿವಿಷನ್ ಜಾಲ ತನ್ನ ಕೆಲಸ ಮಾಡುವ ಕಾರ್ಯಕ್ರಮಗಳ ಸ್ವರೂಪವನ್ನು ಅದಕ್ಕೆ ತಕ್ಕಂತೆ ಹೊಂದಿಸಿಕೊಳ್ಳುವ ಮೂಲಕ ಕುಟುಂಬದ ಯಾವ ಸದಸ್ಯರೂ ತನ್ನ ಕೇಂದ್ರಾಸಕ್ತಿಯಿಂದ ತಪ್ಪಿಸಿಕೊಳ್ಳಲಾರದ ಕಾರ್ಯವಿಧಾನವೊಂದನ್ನು ರೂಢಿಸಿಕೊಳ್ಳಲು ಹೊರಟಿದೆ. ಈ ಕಾರ್ಯಯೋಜನೆಯ ಅಂಗವಾಗಿ ಟೆಲಿವಿಷನ್ ಜಾಲದ ಮದ್ಯಾಹ್ನದ ಸಮಯ ಮಹಿಳಾ ಸಮಯವಾಗಿ ಆವಿಷ್ಕಾರಗೊಂಡಿದೆ. ಟಿ.ವಿ. ವೀಕ್ಷಣೆಯಲ್ಲಿನ ಉಳಿದೆಲ್ಲರ ಗೈರು ಹಾಜರಿಯ ಈ ಸಮಯವನ್ನು ಮಹಿಳೆಯ ಸಮಯವೆಂದು ನಂಬಿಸುವುದು ಆರಂಭದಲ್ಲಿ ಪ್ರಸ್ತಾಪಿಸಲಾದ ಬಳಕೆ ಹಾಗು ಅವಕಾಶಗಳಿಗೆ ಸಂಬಂಧ ಪಟ್ಟ ಪ್ರಶ್ನೆಯನ್ನೇ ಮತ್ತೊಂದು ನೆಲೆಯಿಂದ ಸಾಬೀತು ಪಡಿಸುವುದಾಗಿದೆ.

ಕುಟುಂಬವೊಂದರಲ್ಲಿ ಉಳಿದಾರಿಗೂ ಬೇಡದ ಸಮಯವೊಂದನ್ನು ಮಹಿಳೆಯ ಸಮಯವಾಗಿ ನಿರ್ವಚಿಸುವ ಮೂಲಕ ಟೆಲಿವಿಷನ್ ಜಾಲವು ಒಂದೇ ಏಟಿಗೆ ಎರಡು ಹಣ್ಣನ್ನು ಬೀಳಿಸುವುದರಲ್ಲಿ ಯಶಸ್ವಿಯಾಗಿದೆ. ಒಂದೆಡೆ ಆಧುನಿಕ ಅವಿಷ್ಕಾರಗಳು ಕೌಟುಂಬಿಕ ಪುರುಷ ಪ್ರಧಾನತೆಯನ್ನು ಎಂದಿಗೂ ಭಂಗಗೊಳಿಸಲಾರವು ಎಂಬುದನ್ನು ಕುಟುಂಬದ ಯಜಮಾನನ ಅನುಭವಕ್ಕೆ ತರಿಸುವುದು. ಇನ್ನೊಂದೆಡೆ ಆಧುನೀಕರಣ ಪ್ರಕ್ರಿಯೆಗೆ ಒಳಗಾಗುತ್ತಿರುವ ಗೃಹಿಣಿಗೆ ಆಧುನಿಕ ಆವಿಷ್ಕಾರಗಳು ಸ್ತ್ರೀ ಪರವಾಗಿವೆ ಎಂದೂ ನಂಬಿಸುವುದು. ಆ ನಂಬಿಕೆಗೆ ಪೂರಕ ವಾಗುವಂತೆ ಮಧ್ಯಾಹ್ನದ ಮೆಗಾ ಧಾರಾವಾಹಿಗಳನ್ನು ರೂಪಿಸಿ ಆಧುನಿಕ ಚಿಂತನೆ ಮತ್ತು ಆಧುನಿಕ ಜೀವನ ಕ್ರಮ ಈ ಎರಡಕ್ಕೂ ಅವಳನ್ನು ಮುಖಾಮುಖಿಯಾಗಿಸಿ ಅದರಲ್ಲಿ ಆಧುನಿಕ ಜೀವನ ವಿಧಾನವನ್ನು ಆಕೆ ಒಪ್ಪಿದಂತೆಯೂ, ಆಧುನಿಕ ಚಿಂತನೆಯ ವಿಚಾರದಲ್ಲಿ ಪರಂಪರಾಗತ ಮೌಲ್ಯಗಳಿಗೆ ಹಿಂತಿರುಗಿದಂತೆಯೂ ತೀರ್ಮಾನಗಳನ್ನು ನೀಡುವುದು. ಆ ಮೂಲಕ ಪರಂಪರಾಗತವಾದ ಪುರುಷ ಪ್ರಧಾನತೆ ಹಾಗು ಆಧುನಿಕವಾದ ಉಪಭೋಗಿ ಸಂಸ್ಕೃತಿಗಳೆರಡರ ಪ್ರಭಾವದಿಂದಲೂ ಆಕೆ ಮುಕ್ತಗೊಳ್ಳಲಾರದ ಕನಸಿನ ಜಾಲವೊಂದನ್ನು ನಿರ್ಮಿಸುವುದು, ಈ ಮಹಿಳಾ ಸಮಯದ ನಿರ್ವಚನದ ಹಿಂದಿನ ಸಾಂಸ್ಕೃತಿಕ ರಾಜಕಾರಣವಾಗಿದೆ.

# ಟಿ.ವಿ. ಮತ್ತು ಮಹಿಳೆ

ಪ್ರಶ್ನಾವಳಿ ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

| I. ವೈಯಕ್ತಿಕ ಹಿನ್ನೆಲೆ | | |
|---|---|---|
| ಹೆಸರು: | ವಯಸ್ಸು: | ವಿದ್ಯಾರ್ಹತೆ: |
| ಭಾಷೆ: | ವರಮಾನ: | ಜಾತಿ:GM/OBC/SC/ST |

| II. ಕೌಟುಂಬಿಕ ವಿವರ | | |
|---|---|---|
| a. ಗಂಡನ ಹೆಸರು: | ಉದ್ಯೋಗ: | ವಿದ್ಯಾರ್ಹತೆ: |
| ಆದಾಯ: | ಉದ್ಯೋಗದ ಸಮಯ: | |
| b. ಮಕ್ಕಳ ವಿವರ: | ಗಂ: | ಏನು ಮಾಡುತ್ತಿದ್ದಾರೆ |
| | ಹೆಂ: | |
| c. ಅತ್ತೆ, ಮಾವ: | ಇದ್ದಾರೆ/ಇಲ್ಲ | |
| d. ಮಗ, ಸೊಸೆ: | ಇದ್ದಾರೆ/ಇಲ್ಲ | |
| e. ಮೊಮ್ಮಕ್ಕಳು: | ಇದ್ದಾರೆ/ಇಲ್ಲ | |
| f. ಕೆಲಸದಾಳು: | ಇದ್ದಾರೆ/ಇಲ್ಲ | |
| g. ಗೃಹ ಸಾಧನಗಳು: | | |

| III. ಟಿ.ವಿ. ವಿವರ | | |
|---|---|---|
| a. ಕೊಂಡು ಎಷ್ಟು ವರ್ಷ ಆಯ್ತು | ಯಾವುದು ಕಲರ್ ಬ್ಲಾಕ್ ವೈಟ್ | |
| b. ಬೇಕು ಎಂಬ ನಿರ್ಧಾರ ಯಾರದು | ನಾನೇ/ಗಂಡ/ಗಂಡುಮಗ/ಹೆಣ್ಣುಮಗಳು | |
| c. ಕೇಬಲ್ ಕನೆಕ್ಷನ್ | ಇದೆ/ಇಲ್ಲ | |
| d. ಬೇಕು ಬೇಡ ಎನ್ನುವ ನಿರ್ಧಾರ ಯಾರದು | ನಾನೇ/ಗಂಡ/ಗಂಡುಮಗ/ಹೆಣ್ಣುಮಗಳು | |
| e. ಬೇಕು/ಬೇಡಗಳ ಕಾರಣ:೧. ಬೇಕು, ಯಾಕೆಂದರೆ<br>೨. ಬೇಡ, ಯಾಕೆಂದರೆ | ಟಿ.ವಿ. ಬಗ್ಗೆ | ಕೇಬಲ್ ಬಗ್ಗೆ |

| IV. ಟಿ.ವಿ. ಕಾರ್ಯಕ್ರಮ ವಿವರ | | |
|---|---|---|
| a. ಯಾವ ಭಾಷಾ ಚಾನಲ್: | ಕ/ತೆ/ಹಿಂ/ಇಂ/ಇತರೆ | |
| b. ಆದ್ಯತಾನುಸಾರ ಚಾನಲ್ ಆಯ್ಕೆ: | ೧. | ಏಕೆಂದರೆ |
| | ೨. | ಏಕೆಂದರೆ |
| | ೩. | ಏಕೆಂದರೆ |
| | ೪. | ಏಕೆಂದರೆ |
| c. ಆದ್ಯತಾನುಸಾರ ಕಾರ್ಯಕ್ರಮ ಆಯ್ಕೆ: | ೧. | ಏಕೆಂದರೆ |
| | ೨. | ಏಕೆಂದರೆ |
| | ೩. | ಏಕೆಂದರೆ |
| | ೪. | ಏಕೆಂದರೆ |

ಕಾಲ

a. ದಿನಕ್ಕೆ ಎಷ್ಟು ಗಂಟೆ ನೋಡುತ್ತೀರಿ:

| b. ಯಾವಾಗ? | ಆ ಸಮಯವೇ ಏಕೆ? | ಏನನ್ನು ನೋಡುತ್ತೀರಿ? | ಯಾರ‍್ಯಾರು ನೋಡುತ್ತೀರಿ? | ಯಾಕೆ ನೋಡುವುದಿಲ್ಲ? |
|---|---|---|---|---|
| ಬೆಳಿಗ್ಗೆ | | | | |
| ಮಧ್ಯಾಹ್ನ | | | | |
| ಸಂಜೆ | | | | |
| ರಾತ್ರಿ | | | | |
| ನಡುರಾತ್ರಿ | | | | |

c. ಗಂಡ ಎಷ್ಟು ಗಂಟೆ ನೋಡುತ್ತಾರೆ: ಯಾವಾಗ: ಏನನ್ನು:

d. ಮಕ್ಕಳು ಯಾವಾಗ: ಏನನ್ನು:

e. ಇತರರು ಯಾವಾಗ: ಏನನ್ನು:

| f. ಭಾನುವಾರ (ನೀವು) | ಎಷ್ಟು ಹೊತ್ತು | ಏನನ್ನು | ಯಾವಾಗ | ಜೊತೆಯಲ್ಲಿ ಯಾರಿರುತ್ತಾರೆ |
|---|---|---|---|---|
| | | | | |

g. ಮನೆಯಲ್ಲಿ ಎಲ್ಲ ಸದಸ್ಯರೂ ಟಿ.ವಿ. ನೋಡುತ್ತಿರುವಾಗ ರಿಮೋಟ್ ಯಾರ ಹತ್ತಿರವಿರುತ್ತದೆ: ನಾನು/ಗಂಡ/ಮಗ/ಮಗಳು

h. ನೀವು ಟಿ.ವಿ. ನೋಡುತ್ತೀರುವ ಸಮಯದ ಬಗ್ಗೆ ನಿಮಗೆ ತೃಪ್ತಿ ಇದೆಯೇ: ಇದೆ/ಇಲ್ಲ/ಯಾಕೆ

i. ಟಿ.ವಿ.ಯಿಂದಾಗಿ ನಿಮ್ಮ ದಿನಚರಿಯಲ್ಲಿ ಬದಲಾವಣೆ ಮಾಡಕೊಳ್ಳಬೇಕಾದ ಅಗತ್ಯ ಬಂದಿದೆಯೇ ಹೌದು/ಇಲ್ಲ

j. ಹೌದಾದರೆ ಅದನ್ನು ಹೇಗೆ ಸರಿ ತೂಗಿಸಿಕೊಂಡಿದ್ದೀರಿ?:

k. ನೀವು ನೋಡುವ ಟಿ.ವಿ. ಕಾರ್ಯಕ್ರಮಗಳ ಬಗ್ಗೆ ನಿಮ್ಮ ಗಂಡನ ಪ್ರತಿಕ್ರಿಯೆ ಏನು?

೧. ತಲೆ ಕೆಡಿಸಿಕೊಳ್ಳುವುದಿಲ್ಲ
೨. ಟೀಕಿಸುತ್ತಾರೆ.
೩. ಗೊಣಗುತ್ತಾರೆ
೪. ಹಾಸ್ಯ ಮಾಡುತ್ತಾರೆ
೫. ಆ ಬಗ್ಗೆ ನಾನು ತಲೆ ಕೆಡಿಸಿಕೊಂಡಿಲ್ಲ.

| l.ಅತ್ತೆ/ಮಾವ/ಸೊಸೆ ಅಭಿಪ್ರಾಯವೇನು? | ಅತ್ತೆ | ಮಾವ | ಮಕ್ಕಳು | ಸೊಸೆ |
|---|---|---|---|---|
| A | | | | |
| B | | | | |
| C | | | | |
| D | | | | |
| E | | | | |

V. ಸದ್ಯದಲ್ಲಿ ಯಾವುದಾದರೂ ಬೇಕೆನಿಸಿದ ಕಾರ್ಯಕ್ರಮವನ್ನು ನಿಮಗೆ ನೋಡಲಾಗುತ್ತಿಲ್ಲವೆ? ಯಾಕೆ?

VI. a. ನಿಮ್ಮ ನೆರೆಯವರೊಂದಿಗೆ ಎಷ್ಟು ಸಮಯ ಕಳೆಯುತ್ತೀರಿ?

b. ಈ ಸಮಯದಲ್ಲಿ ಟಿ.ವಿ. ನೋಡುವ ಹವ್ಯಾಸ ಇದೆಯೇ?

ಈ ಅಂಕಣದಲ್ಲಿ ಮಹಿಳೆಯರು ಸಾಹಿತ್ಯ ರಚನೆಯ ಪ್ರಕ್ರಿಯೆಯಲ್ಲಿ ತೊಡಗಿಕೊಳ್ಳುತ್ತಿದ್ದ ಹೊಸತರಲ್ಲಿ ಬರೆಯುತ್ತಿದ್ದ ಬಗೆಗಳನ್ನು ಪುನರವಲೋಕಿಸುವ ಅವಕಾಶವನ್ನು ಕಲ್ಪಿಸಿ ಕೊಳ್ಳಲಾಗಿದೆ.

ಈ ಬಾರಿ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ನಮ್ಮ ಮಹಿಳಾ ಸಾಹಿತ್ಯವು ಪ್ರತಿಕ್ರಿಯಿಸಿದ ಒಂದು ಮಾದರಿಯ ಪರಿಚಯಕ್ಕಾಗಿ ಮೊಗೇರಿ ಚಂದ್ರಮ್ಮನವರ ಹಾಡನ್ನು ಬಳಸಿದ್ದೇವೆ.

ಹಾಗೆಯೇ ಮಹಿಳೆಯರ ಸಾಹಿತ್ಯ ಸಾಧನೆಯ ಹೊಳಹುಗಳನ್ನು ತೋರುವ ಜಯಮ್ಮನವರ ಒಂದು ಕವಿತೆಯನ್ನು ಆಯ್ದು ಟಿಪ್ಪಣಿಯೊಂದಿಗೆ ಪರಿಚಯಿಸಲಾಗಿದೆ.

-ಸಂ

## ಕವನ: -ಗೆ

ಲೇಖಕಿ : ಜಯಮ್ಮ

ಜಯಕರ್ನಾಟಕದ ೧೯೨೬ನೇ ವರ್ಷದ ಸಂಚಿಕೆಗಳನ್ನು ನೋಡುವಾಗ ಈ ಕೆಳಗಿನ ಕವನವೊಂದು ಕಣ್ಣಿಗೆ ಬಿತ್ತು. ಬರೆದವರು: ಜಯಮ್ಮ. ಇವರ ಬೇರೆ ಬೇರೆ ರಚನೆಗಳು ಸರಿ ಸುಮಾರಿನ ಸಂಚಿಕೆಗಳಲ್ಲಿ ಪ್ರಕಟವಾಗಿವೆ.

-ಗೆ

ಭರದಿಂದ ನಭದಲ್ಲಿ ಕೂಡುತಿವೆ ಮೋಡಗಳು
ಕಿರುಮನೆಯ ದೀವಿಗೆಯ ನಂದಿಸಿದೆ ಮೆಲ್ಲೆಲರು
ಬಿರುಗಾಳಿಯಾ ಕೊಳಲು ಹಾಡುತಿದೆ ಬಿರುಸುದನಿಯಿಂದೊರಟು ಹಾಡುಗಳನು
ಹೊಳೆ ಹೊಳೆವ ಮಿಂಚುಗಳ ಕೂರಲಗು ದಯೆಯುಳಿದು
ಛಲದಿಂದ ಸೀಳುತಿದೆ ಕಾರಿರುಳ ಗರ್ಭವನು
ಸುಲಿಯುತಿದೆ ಮನದಾಸೆ ಕತ್ತಲೆಯೊಳುಳಿದೆನ್ನೊಬ್ಬಳನೆ ಎಲ್ಲಿ ಹೋದೆ?

ವಾರ್ಧಕ ಷಟ್ಪದಿಯ ಅಚ್ಚುಕಟ್ಟಾದ ರಚನೆ. ಆದಿಪ್ರಾಸ ನಿಯಮವನ್ನು ಪಾಲಿಸಿಯೂ ಮೀರಿರುವ ಬಗೆಯಿಂದ ಇದು ಎರಡು ಚರಣದ ಕವಿತೆಯೂ ಆಗಬಹುದು. ಅಂಶ ಛಂದಸ್ಸಿನ ನಡಿಗೆಯಲ್ಲೂ ಓದಲು ಸಾಧ್ಯ. ವಿಷ್ಣು, ರುದ್ರಗಳ ಬೆರಕೆಯಿದೆ. ಆದರೆ ಛಂದೋಭಾಗವಿಲ್ಲ.

ಏಕ ಆದಿಲಘುವಿನ ಗಣಗಳು ಇಲ್ಲ. ಈ ನಡೆಯಿಂದಲೇ 'ಬಿರುಗಾಳಿಯ ಕೊಳಲು' ಎಂಬ ರಚನೆ ಸಾಧುವಾಗುವುದು. ಅರ್ಥ ಘಟಕಗಳನ್ನೇ ಷಟ್ಪದಿಯ ಪಾದಗಳಾಗಿ ಅಳವಡಿಸಿಕೊಂಡಿರುವುದರಿಂದ ಹೊಸಕವಿತೆಯ ಲಕ್ಷಣಗಳೂ ಸೇರಿಕೊಂಡಿವೆ. ಹೆಚ್ಚು ವಿವರಣೆ ಬಯಸದ ಕವಿತೆಯಿದು. '-ಗೆ' ಎಂಬ ಶೀರ್ಷಿಕೆ ೧೯೨೬ಕ್ಕೆ ಮೊದಲು ಯಾವುದಾದರೂ ಕವಿತೆಗೆ ಬಳಕೆಯಾಗಿತ್ತೋ ಇಲ್ಲವೋ ತಿಳಿಯದು. ಆರನೆಯ ಸಾಲಿನ 'ಎನ್ನೊಬ್ಬಳನೆ' ಎಂಬ ಬಳಕೆಯಿಂದ '-ಗೆ' ಬಗೆಗೆ ಸೂಚನೆಗಳು ಸಿಗುತ್ತವೆ.

ಒಂದು ವಿಷಣ್ಣ ಮನಸ್ಸಿನ ಅವಸ್ಥೆಯನ್ನು ಬಣ್ಣಿಸಲು ಆಯ್ದುಕೊಂಡ ಪ್ರಾಕೃತಿಕ ವಿವರಗಳು ಮತ್ತು ಆ ವಿವರಗಳ ಬಣ್ಣನೆಗೆ ಬಳಸಿದ ಭಾಷೆಯನ್ನು ಗಮನಿಸಿ. ಮಳೆಯ ಮುಂಚಿನ ಘಳಿಗೆಯ ವರ್ಣನೆ ಇಲ್ಲಿದೆ. ಮನಸ್ಸಿನ ಏಕಾಂತದ ಅವಸ್ಥೆಯನ್ನು ರೂಪಿಸುವ ಸಂದರ್ಭವಿದು. ಜೊತೆಗೆ ಆವರಿಸಿದ ಕತ್ತಲು, ಇರುವ ದೀಪವೂ ನಂದಿಹೋದ ಸ್ಥಿತಿ, ಈ ಒಂಟಿತನವನ್ನು ತೀವ್ರಗೊಳಿಸುತ್ತದೆ. ಹೀಗಾಗಿ ಕವನದ ಕೊನೆಯ ಅಳಲಿನ ಪ್ರಶ್ನೆ ಕೇವಲ ನಾಟಕೀಯವಲ್ಲ.

ಮೊದಲ ಎರಡು ಪಾದಗಳು ಕೇವಲ ವಿವರಣೆಗಳು. 'ಭರದಿಂದ', 'ಮೆಲ್ಲೆಲರು' ಎಂಬ ಪದಗಳಲ್ಲಿ ವಿವರಣೆಗೆ ಒಂದು ದೃಷ್ಟಿಕೋನ ಸೇರಿಸುವ ಯತ್ನವಿದೆಯಾದರೂ ಅವು ನುಡಿಯ ಸಹಜ ಆಯ್ಕೆಯೂ ಆಗಿವೆ. ಮುಂದಿನ ಎರಡು ಪ್ರಾಕೃತಿಕ ವಿವರಣೆಗಳು ಸಂದರ್ಭದ ವ್ಯಾಖ್ಯಾನವನ್ನು ಹೊಂದಿವೆ. ಒರಟುಹಾಡು ನುಡಿಸುವ ಕೊಳಲು ಮತ್ತು ಗರ್ಭವನ್ನು ಸೀಳುವ ಕೂರಲಗುಗಳನ್ನು ಕ್ರಮವಾಗಿ ಪ್ರಾಕೃತಿಕ ವಿವರಗಳಾದ ಬಿರುಗಾಳಿ ಮತ್ತು ಮಿಂಚುಗಳಲ್ಲಿ ಕವಿತೆ ಗುರುತಿಸುತ್ತದೆ. ಆಕಾರರಹಿತ, ಚಲನಶೀಲ ಬಿರುಗಾಳಿ, ಮಿಂಚುಗಳನ್ನು ಖಚಿತ ಆಕಾರದ, ಸ್ಥಿರವಾದ ಕೊಳಲು, ಕೂರಲಗುಗಳೊಡನೆ ಸಂಯೋಜಿಸಿರುವುದು ಒಂದು ಮುಖ್ಯ ದೃಷ್ಟಿಕೋನವನ್ನು ಸೂಚಿಸುತ್ತದೆ. ಒರಟು ಹಾಡು ನುಡಿವ ಮತ್ತು ಗರ್ಭ ಸೀಳುವ ಕ್ರಿಯೆಗಳೂ ಈ ದೃಷ್ಟಿಕೊನಕ್ಕೆ ಪೂರಕವಾಗಿವೆ: ಹೇಳುತ್ತಿರುವ ವ್ಯಕ್ತಿಯ ಒಂಟಿತನದ, ಅಸಹಾಯಕತೆಯ ಅವಸ್ಥೆಯನ್ನು ಸಮರ್ಥವಾಗಿ ಸೂಚಿಸುವಂತಿವೆ.

ಮನೆಯೊಳಗೆ ಕವಿದ ಕತ್ತಲು, ಮನೆಯ ಹೊರಗಿನ ಪ್ರಕೃತಿಯ ಬೆಳಕಿನ ನಿರ್ದಯತೆ ಈ ಕವಿತೆಯ ನಿರೂಪಣೆಗೆ ವಿಶಿಷ್ಟವಾದೊಂದು ಚೌಕಟ್ಟು ಕಲ್ಪಿಸಿದೆ. ಕತ್ತಲು, ಬೆಳಕುಗಳ ಜೋಡಿಯನ್ನು ನಿರಾಸೆ ಆಸೆಗಳ ಸೂಚಕಗಳನ್ನಾಗಿ ಬಳಸುವ ಮಾದರಿ ಕನ್ನಡದಲ್ಲಿ ಹಿಂದೆ ಅಲ್ಲಲ್ಲಿ ಕಂಡು ಬಂದಿತ್ತಾದರೂ ನವೋದಯ ಕಾಲದ ಪ್ರಮುಖ ವೈಚಾರಿಕ ನುಡಿಗಟ್ಟಾಯಿತಷ್ಟೆ. ಈ ಪ್ರಕ್ರಿಯೆ ಅನನ್ಯವಾದೊಂದು ರೀತಿಯಲ್ಲಿ ೧೯೨೬ರ, ಈ ಕವಿತೆಯಲ್ಲಿ ಮೈದಳೆದಿದೆ; ಆದರೆ ಬೆಳಕು ಕತ್ತಲೆಗೆ ಪೂರಕವಾಗಿದೆಯೆಂಬ ಅಂಶವೊಂದು ಇಲ್ಲಿನ ಮುಖ್ಯ ತಿರುವು. ಹೆಂಗಸೊಬ್ಬರ ಈ ರಚನೆ ಆಧುನಿಕ ಕನ್ನಡ ಕಾವ್ಯಧಾರೆಯ ಆರಂಭ ಹಂತದ ಗಮನಾರ್ಹ ದಾಖಲೆಯೆಂದು ತಿಳಿಯುವುದು ಅವಶ್ಯವಾಗಿದೆ.

## ಕವನ: ದೇಶಭಕ್ತರ ಉದ್ಗಾರಗಳು

ಲೇಖಕಿ : ಮೊಗೇರಿ ಚಂದ್ರಮ್ಮ

ದಕ್ಷಿಣ ಕನ್ನಡದ ಮೊಗೇರಿ ಚಂದ್ರಮ್ಮನವರು ನಮ್ಮ ಸುಪ್ರಸಿದ್ಧ ಕವಿ ದಿವಂಗತ ಮೊಗೇರಿ ಗೋಪಾಲ ಕೃಷ್ಣ ಅಡಿಗರ ಸೋದರತ್ತೆ. ಅವರು ಬರೆದ 'ದೇಶಭಕ್ತರ ಉದ್ಗಾರಗಳು' ಎಂಬ ಈ ಹಾಡು ಅಂದು ಬಲು ಜನಪ್ರಿಯವಾಗಿತ್ತು. ಇದನ್ನು ಮುಖಾರಿ ರಾಗದಲ್ಲಿ ಹಾಡುತ್ತಿದ್ದರಂತೆ. ಡಾ.ಸೂರ್ಯನಾಥಕಾಮತರು ಸಂಪಾದಿಸಿದ 'ಸ್ವಾತಂತ್ರ್ಯ ಸಮರದ ಗೇಯಗೀತೆಗಳು' ಎಂಬ ಸಂಗ್ರಹದಲ್ಲಿ ಇದು ಸೇರಿದೆ.

ಸೂರೆಯಾದುದು ನಮ್ಮ ಭಾರತ ಭೂಮಿ । ಸೈರಿಸುವದೆಂತಿದನು ।
ಮಾರಿ ಹೋಗಿಹೆವು ॥ ಪಲ್ಲವಿ ॥

ಹೆತ್ತ ಮಕ್ಕಳ ತೆರದಿ ಪ್ರಜೆಗಳಂ ಪಾಲಿಪುದು । ಮತ್ತೆ ತಿಳಿಯಲು
ರಾಜಧರ್ಮವೈಸೆ ॥ ಇತ್ತ ನೋಡಿರಿ । ಸವತಿ ಪುತ್ರರಂದದೊಳೆಮ್ಮ ।
ನತ್ಯಧಿಕವಾಗಿ ಪೀಡಿಪರಾಂಗ್ಲ ಜನರು ॥

ಕೋಡು ಕಲಮುಗಳೆಂದು ಮಾಡುವರು ಕಲಹಗಳ । ದೂಡುವರು
ಸೆರೆಗೆ ಭಾರತ ಪುತ್ರರ ॥ ಖೋಡಿಗೈವರ ನ್ಯಾಯದೇವತೆಯ ಸಂಪದವ ।
ಬೇಡವವರೊಡನೆ ಸಹಕಾರ ನಮಗಿನ್ನ ॥

ನಮ್ಮ ನಮ್ಮೊಳಗೆ ಕಡುವೈರವಂ ಹುಟ್ಟಿಸುತ । ಹಮ್ಮಿನಿಂ ಸುಳ್ಳು
ಸಾಕ್ಷಿಯ ನುಡಿಸುತ ॥ ದುರ್ಮಾರ್ಗದಿಂದ ಸುಜನರನ್ನು ಸೆರೆಮನೆಗಟ್ಟಿ ।
ತಮ್ಮತಮ್ಮೊಳು ನಗುತಲಿರುವರವರು ॥

ಹಿಂದೂ ಮುಸಲ್ಮಾನರೊಳಗೆ ವೈರವ ಬೆಳಸಿ । ಹಿಂದೊಮ್ಮೆ ಸಫಲ
ರಾಗಿಯೆ ನಲಿದರು ॥ ಇಂದಿಲ್ಲಿ ಬ್ರಾಹ್ಮಣೇತರರು ಬ್ರಾಹ್ಮಣರೆಂಬು ।
ದೊಂದು ಭೇದವ ಹೂಡಿ । ನಲಿಯುತ್ತಲಿಹರು ॥

ಪ್ರೋಸಿರ್ಘುರು ಪೀನಲುಗಳು । ವಾಸಿಸಿರೆ ಭಾರತದಿ। ಶಾಸನಗಳಿನ್ಯಾತ
ರತ್ಯುಗ್ರದ ॥ ಪ್ರಾಸಿಗೈದವು ನಮ್ಮ ಜನರ ಬಹುವಿಧದಿಂದ
ಅಸುರೀತನದ ಕಾಯ್ದೆಯ ಕೋಡ್ಗಳು ॥

ದೂರ ತೀರಾಳೊಡೆಯರಿವರೆ ಕೆಟ್ಟವರೆಂದು। ದೂರುವುದು ನಮ್ಮ
ಷಂಡರ ನಡತೆಯ ॥ ಸೇರಿಹರು ಪರಸೇವೆಯೊಳಗೆ ದುಃಸ್ವಾರ್ಥದಿಂ।
ಸಾರುವರು ಪಾಶ್ಚಿಮಾತ್ಯರು ದೇವರೆಂದು ॥

ಕುಲಕೆ ಕೇಡನು ಬಗೆದು ಕೊಡಲಿಯೊಳು ತಾ ಸೇರಿ । ನಲಿಯುತ್ತಲಾ
ಮಾನವರ ಕರದೊಳು ॥ ಛಲದಿಂ ಸ್ವಕಿಯ ವೃಕ್ಷಗಳ ತಲೆಗಳ ಕಡಿವ ।
ಬಲುಗೊಡಲಿ ಕಾವಿನಂತಿಹರು ಜನರು ॥

ಹುಟ್ಟಿದುದು ಭಾರತದಿ ಬೆಳೆದುದೂ ಭಾರತದಿ। ಹೊಟ್ಟೆ ತುಂಬುವುದು
ಭಾರತದಲ್ಲಿಯೇ ॥ ದುಷ್ಟರೊಳು ಬೆರೆತು ಒಡ । ಹುಟ್ಟಾದ ಭಾರತದ
ಶ್ರೇಷ್ಠರೊಳು ಕ್ರೂರತನಮಂ ತೋರುತಿಹರು ॥

ದೇಶ ಘಾತಕರಾಗಿ ಮಾತೃ ಘಾತಕರಾಗಿ । ಲೇಸೇನ ಪಡೆವಿರೈ ।
ಮರುಳುಗಳಿರ ॥ ಆ ಸಕಲ ಸ್ವಾತಂತ್ರ್ಯ ಪೂರಿತರು ನಿಮ್ಮನ್ನು ।
ದಾಸರೆನ್ನುತ ತಿಳಿದು ನಗದಿಹರೇ ಮನದೀ ॥

ಶಾಪವೀಯಳೆ ಭಾರತಮಾತೆ ತಾಂ ಕೋಪಿಸುತ । ಲೀಪರಿಯ ವರ್ತನ
ವನ್ನು ಬಿಟ್ಟು ॥ ರೂಪುಗೊಂಡಿರುವ ಸ್ವಾತಂತ್ರ್ಯ ಯುದ್ಧಂಗಣಕೆ ।
ಕಾಪುರುಷ್ಯತನವ ತೋರದೆ ನಡೆಯಿರಯ್ಯ ।

ಭರತಖಂಡದ ಜನರೆ । ಪರಮ ಬಾಂಧವರೆ ।ನೀ। ವರಿಯಿರೈ ।
ಸ್ವಾತಂತ್ರ್ಯದಮಲಕಲಿಯ ॥ ಚಿರಕಾಲ ರೂಢವಾಗಿರುವ ದೈನ್ಯವನಾ
ಮುಖ । ಪುರದರಸನತಿ ಕರುಣದಿಂದ ತೊಲಗಿಸುವನು ॥

ಅಭಿವ್ಯಕ್ತಿ: ಇಂದು

# ಎಳ್ಳು, ಹೂವು ಮತ್ತು ನೀರು

ಮೂಲ: ಮಲಯಾಳಂ: ಲಲಿತಾಂಬಿಕಾ ಅಂತರ್ಜನಂ (೧೯೦೯-೧೯೮೭)
ಕನ್ನಡ ಅನುವಾದ: ಡಾ.ಎಚ್.ಎಸ್.ರಾಘವೇಂದ್ರರಾವ್

ಅಮ್ಮಾ, ನಾನು ಮರಳಿ ಬಂದಿದ್ದೇನೆ. ನೀನು ಸತ್ತು ಎರಡು ವರ್ಷಗಳಾದವು. ಈ ದಿನ ನಿನ್ನ ಶ್ರಾದ್ಧ. ನನ್ನ ಕೈಯಲ್ಲಿರುವ ಒಂದು ಹಿಡಿ ಅಕ್ಕಿ ಮಂತ್ರಗಳಿಂದ ಪವಿತ್ರವಾಗಿದೆ. ಈಜ್ ದರ್ಭೆಯ ಹುಲ್ಲು ಕೂಡ ಹಾಗೆಯೇ. ಇಗೋ, ಅದನ್ನು ನಾನು ಎಳ್ಳು, ಹೂವು ಮತ್ತು ನೀರಿನೊಂದಿಗೆ ಬೆರೆಸಿ ನಿನಗೆ ಅರ್ಪಿಸುತ್ತಿದ್ದೇನೆ. ಇಗೋ, ಇನ್ನಷ್ಟು ಹೂವು, ಇನ್ನಷ್ಟು ಎಳ್ಳು, ಮತ್ತೆ, ನೀರು ಹಾಗೂ ಶ್ರೀಗಂಧದ ಚೂರ್ಣ, ನೀನು ಇದೆಲ್ಲವನ್ನೂ ಸ್ವೀಕರಿಸುವೆಯಾ? ಏಕೆಂದರೆ ಈಗ ನಿನಗೆ ಕೊಡಲು ನಮ್ಮ ಬಳಿ ಇನ್ನೇನೂ ಇಲ್ಲ.

ನಿಜವಾಗಿಯೂ ನಾವು ಇನ್ನೇನನ್ನೂ ಕೊಡಲಾರೆವೇ? ನೀನು ನಮ್ಮನ್ನು ಬಿಟ್ಟುಹೋದ ಕ್ಷಣದಿಂದ ಈ ಬಗ್ಗೆ ಯೋಚನೆಮಾಡಿದ್ದೇನೆ. ಈ ಎಳ್ಳಿನೊಂದಿಗೆ, ಈ ನೀರಿನೊಂದಿಗೆ ನನ್ನೆಲ್ಲ ನೆನಪುಗಳನ್ನೂ ತೋಡಿಕೊಳ್ಳಬಾರದೇಕೆ....? ಅಮ್ಮಾ. ನೀನು ನಿಜವಾಗಿಯೂ ನಮ್ಮಿಂದ ದೂರವಾಗಿರುವೆಯಾ....? ಇಲ್ಲ, ಈಗ ನೀನು ಸದಾ ಸರ್ವದಾ ನಮ್ಮೊಂದಿಗೆ ಇರುವೆಯೆಂದು ನನ್ನ ಭಾವನೆ. ನೀನು ಬದುಕಿದ್ದಾಗ ನಿನ್ನ ಸಮ್ಮತಿಯಿಲ್ಲದ ಹಲವು ಕೆಲಸಗಳನ್ನು ನಾನು ಮಾಡಿದೆ. ನೀನು ಕ್ಷಮಿಸುವೆಯೆಂಬ ನಂಬಿಕೆಯೊಂದಿಗೆ. ಆದರೆ ಈಗ ಪ್ರತಿಯೊಂದು ಕ್ರಿಯೆಗೆ ಮೊದಲು, ಮಾತಿಗೆ ಮೊದಲು ನನ್ನನ್ನು ಕಾಡುವ ಪ್ರಶ್ನೆ ಒಂದೇ "ಅಮ್ಮಾ ಇದನ್ನು ಒಪ್ಪುತ್ತಿದ್ದಳೇ? ಕ್ಷಮಿಸುತ್ತಿದ್ದಳೇ?" ಹೀಗೆ, ಅಮ್ಮಾ, ಕೊನೆಗೂ ನಾನು ನೀನು ಬಯಸುತ್ತಿದ್ದ ಮಗಳಾಗಿದ್ದೇನೆ.

ಹಲವು ಬಾರಿ ನಿನ್ನನ್ನು ಕುರಿತು ಬರೆಯಬೇಕೆಂದು ಹಂಬಲಿಸಿದ್ದೇನೆ. ನಿನಗೆ ಅದು ಇಷ್ಟವಾಗುತ್ತಿತ್ತೇನು? ಅಪ್ಪನ ಬಗ್ಗೆ ನಾನು ಬರೆದ ಲೇಖನ ಮತ್ತು ಕವಿತೆಯನ್ನು ನೀನು ಎಷ್ಟು ಜತನವಾಗಿ ಕಾಪಾಡಿಕೊಂಡಿದ್ದೆ. ಕೊನೆಯ ದಿನ ನನಗೆ ಒಪ್ಪಿಸಿದ ಕಾಗದ ಪತ್ರಗಳ ನಡುವೆ ಅವೂ ಸಿಕ್ಕವು. ನನ್ನ ಜಾತಕ ಕೂಡ ಅಲ್ಲಿ ಇತ್ತು. ನಾನು ಮಗುವಾಗಿದ್ದಾಗ ಬರೆದುದನ್ನು ತುಂಬಿಸಿಕೊಂಡ ನೋಟ್ ಪುಸ್ತಕವೂ ಅವುಗಳ ನಡುವೆ ಅಡಗಿ ಕುಳಿತಿತ್ತು. ನನ್ನ ಮಕ್ಕಳು ಮೊಮ್ಮಕ್ಕಳಿಗೆ ನಾನು ಕೊಡಲೆಂದು ತೆಗೆದಿಟ್ಟಿರುವ ಕಾಗದಪತ್ರಗಳ ಜೊತೆಗೆ ಈ ಲೇಖನವೂ ಇರಬೇಕೆಂದು ನನ್ನ ಆಸೆ. ಕ್ಷಮಿಸುವೆಯಲ್ಲವೇ? ಇದನ್ನು ಬರೆಯುವಾಗ

ಭಾವನೆಗಳಿಂದ ಭಾರವಾಗಿದ್ದೇನೆ.

ನಿನ್ನನ್ನು ಕುರಿತು ಬರೆಯಲು ಸಾಧ್ಯವೇ? ಇಲ್ಲ. ಖಂಡಿತವಾಗಿಯೂ ಸಾಧ್ಯವಿಲ್ಲ. ತಾಯಿತನದ ಹಿರಿಮೆಯನ್ನು ಮಾತುಗಳಲ್ಲಿ ಹಿಡಿದಿಡುವುದು ಕಷ್ಟವೆಂದು ನಾನು ಹೀಗೆ ಹೇಳುತ್ತಿಲ್ಲ. ಆ ಕಾಲ ಮುಗಿಯಿತೆಂದು ತೋರುತ್ತದೆ. ಈಗ ತಾಯಿತನ ಅಂತಹ ಗೌರವಪಾತ್ರ ಸಂಗತಿಯಾಗಿ ಉಳಿದಿಲ್ಲ. ತಾವು ಮಕ್ಕಳನ್ನು ಪಡೆದಿದ್ದು ಅಪರಾಧವೆನ್ನುವಂತೆ ವರ್ತಿಸುವ ತಾಯಿಯರಿದ್ದಾರೆ. ಆದರೂ ಪ್ರತಿಯೊಬ್ಬರಿಗೂ ತಾಯಿ ಇದ್ದಾಳೆ. ಟೆಸ್ಟ್‌ಟ್ಯೂಬ್ ಮಕ್ಕಳ ಕಾಲ ಇನ್ನೂ ಬಂದಿಲ್ಲ. ಹಲವು ಬಗೆಯ ತಾಯಿಯರಿದ್ದಾರೆ. ಮಕ್ಕಳನ್ನು ಪ್ರೀತಿಸುವ, ಶಿಕ್ಷಿಸುವ ತಾಯಿಯರಿಂದ ಹಿಡಿದು ಅವರ ಹುಟ್ಟಿನಲ್ಲಿ ಅನುಭವಿಸಿದ ನೋವಿಗಾಗಿ ಪ್ರತಿಫಲವನ್ನು ಬಯಸುವ ಅಮ್ಮಂದಿರವರೆಗೆ. ತಾಯಿತನ ಒಂದು ಚಿರಂತನ ಸತ್ಯ ಮತ್ತು ದಿನದಿನವೂ ಜರುಗುವ ಸರ್ವೇ ಸಾಧಾರಣ ಸಂಗತಿ. ಹಾಗಾದರೆ ನನ್ನಂತಹ ಅರವತ್ತಾನ್ಲಲ್ಕು ವರ್ಷಗಳ ಹೆಂಗಸು, ಎಂಬತ್ತರ ಹಣ್ಣುವಯಸ್ಸಿನಲ್ಲಿ ತೀರಿಕೊಂಡ ತಾಯಿಗಾಗಿ ಏಕೆ ಕಣ್ಣೀರು ಹರಿಸಬೇಕು? ಆದರೆ ಅಮ್ಮಾ, ಇದು ಕೇವಲ ದುಃಖವಲ್ಲ. ನಾನು ಚಿಂತಿಸುತ್ತೇನೆ, ನೆನಪುಮಾಡಿಕೊಳ್ಳುತ್ತೇನೆ. ಆ ನೆನಪುಗಳು ಆರು ದಶಕಗಳಲ್ಲಿ ಹರಡಿಕೊಂಡಿವೆ. ನನ್ನ ಮನಸ್ಸಿನಲ್ಲಿ ಅವು ಚಿಮ್ಮಿದ ಹಾಗೆ ಲೇಖನಿಯಿಂದ ಬರೆಯುತ್ತೇನೆ. ಏಕೆಂದರೆ ನಿನ್ನ ಈ ಮಗಳಿಗೆ ಇದೊಂದು ದುರಭ್ಯಾಸ. ತನ್ನಲ್ಲಿ ಮೂಡಿದ ಭಾವನೆಗಳನ್ನು, ಆಲೋಚನೆಗಳನ್ನು ಬರೆದಿಡುವುದು. ಅವಳು ಒಬ್ಬ ಸಾಹಿತಿ. ನನಗೆ ಗೊತ್ತು. ನೀನು ಈ ಬರೆಹವನ್ನು ಓದಲಾರೆ. ಆದರೆ ಈ ಕೆಲಸ ಮಾಡುವುದು ನನಗೆ ಏಕೆ ಅನಿವಾರ್ಯವಾಗಿದೆಯೆಂದು ನೀನು ಬಲ್ಲೆ. ನೀನೇ ಹೇಳುತ್ತಿದ್ದ ಹಾಗೆ ಸಾವು ಎಲ್ಲ ತಿಳಿವಳಿಕೆಯ ಬಾಗಿಲುಗಳನ್ನೂ ತೆರೆಯುತ್ತದೆ.

ತಾಯಿ ಮತ್ತು ಮಗುವಿನ ನಡುವೆ ಇರುವ ಆಳವಾದ ಭಾವನಾತ್ಮಕ ಸಂಬಂಧ ನನಗೆ ಚೆನ್ನಾಗಿ ಗೊತ್ತು. ಅದು ಮಗು ತಾಯ ಬಸಿರಿನಲ್ಲಿರುವಾಗಲೇ ಮೊದಲಾಗುತ್ತದೆ. ನಾನೂ ಎಂಟು ಮಕ್ಕಳ ತಾಯಿಯಲ್ಲವೇ? ನಾವು ಮಕ್ಕಳ ಬರವಿಗಾಗಿ ಉತ್ಕಟವಾದ ಪ್ರೀತಿ, ಕಾತರ ಮತ್ತು ಸಂಭ್ರಮದಿಂದ ಕಾಯುತ್ತೇವೆ. ಅವರೊಂದಿಗೆ ಹಲವು ಬಗೆಗಳಲ್ಲಿ ಒಡನಾಡುತ್ತೇವೆ. ಸ್ಪರ್ಶ, ನೋಟ, ಕನಸು, ನನಸು ಎಲ್ಲ ಅವರದೇ ಆಗುತ್ತದೆ. ನಾವು ಅವರ ವಶವಾಗಿ ಬಿಡುತ್ತೇವೆ. ಅದು ಹರಕೆ ಹಾರೈಕೆಗಳಲ್ಲಿ ಮುಳುಗಿರುವ ಕಾಲ. ತನಗೆ ಇನ್ನು ಮಕ್ಕಳು ಬೇಡವೆಂದು ತೀರ್ಮಾನಿಸಿರುವ ಹೆಣ್ಣು ಕೂಡ, ಬಸಿರಿನಲ್ಲಿ ಚಲಿಸತೊಡಗುವ ಶಿಶುವಿನಿಂದ ರೋಮಾಂಚಿತಳಾಗುತ್ತಾಳೆ. ಅಮ್ಮಾ, ನಾನು ನಿನ್ನ ಹಿರಿಯ ಮಗುವಲ್ಲ. ನಾನು ಹುಟ್ಟುವುದಕ್ಕೆ ಮೊದಲೇ ನೀನು ಇಬ್ಬರು ಮಕ್ಕಳನ್ನು ಕಳೆದುಕೊಂಡಿದ್ದೆ. ಆದ್ದರಿಂದ ನಾನೇ ನಿನ್ನ ಮುದ್ದು ಮಗುವಾದೆ. ಗರ್ಭದೊಳಗಿನ ಶಿಶು ಗಂಡೋ ಹೆಣ್ಣೋ ಎನ್ನುವ ಸಂಗತಿ ನಿನ್ನನ್ನು ಬಾಧಿಸಲಿಲ್ಲ. ದೇವಾಲಯದಲ್ಲಿ ನೀಡಲಾದ ಬೆಣ್ಣೆ ಪ್ರಸಾದವನ್ನು ತಿನ್ನುವಾಗ, ಗಂಡು ಮಗುವನ್ನು ಅನುಗ್ರಹಿಸುವ ವಿಶೇಷ ಪ್ರಾರ್ಥನೆ ಮಾಡುವಾಗ ನಿನ್ನ ಅಂತರಂಗದಲ್ಲಿ ಇದ್ದುದು

ಒಂದೇ ಬಯಕೆ: ತಾಯಿಯಾದರೆ ಸಾಕು; ಮಗು ಬದುಕಿ ಉಳಿದರೆ ಸಾಕು. ಶಿಶುಜನನಕ್ಕೆ ಅರ್ಧ ಗಂಟೆ ಮೊದಲು ದೇವಿಯ ಪಾದಪದ್ಮಗಳಲ್ಲಿ ಸಾಷ್ಟಾಂಗ ನಮಸ್ಕಾರ ಮಾಡಿದಾಗಲೂ ನೀನು ಬಯಸಿಬೇಡಿದ್ದು ಇಷ್ಟೇ: "ಮಗು ಬದುಕಿ ಬಾಳಲಿ, ಜಾಣೆಯಾಗಲಿ."

ಸರಿ, ನಿನಗೆ ಮಗುವಾಯಿತು. ಹೆಣ್ಣುಮಗು. ನಿನ್ನ ಹಾಗೆ ಹಾಲುಬಣ್ಣದವಳಲ್ಲ. ಸುಂದರಿಯೂ ಅಲ್ಲ. ಆದರೆ ಅವಳು ಸದಾ ಸರ್ವದಾ ಶುಚಿಯಾಗಿರಲು, ಯಾರೆದುರಿಗೂ ಅವಮಾನಿತೆಯಾಗದಿರಲು ಬಹಳ ಪ್ರಯತ್ನಿಸಿದಳು. ನಿಜ, ನಿನ್ನ ಹಲವು ಬಯಕೆಗಳನ್ನು, ಪ್ರಾರ್ಥನೆಗಳನ್ನು ನಾನು ನಡೆಸಿಕೊಡಲಿಲ್ಲ. ಆದರೆ ಒಂದು ವಿಷಯದಲ್ಲಿ ಮಾತ್ರ ನಿನಗೆ ನಿರಾಶೆಯಾಗಲಿಲ್ಲ. ನಾನು ಜಾಣೆಯಾದೆ. ನೀನು ಯಾವಾಗಲೂ ಹೇಳುತ್ತಿದ್ದಂತೆ, ನನ್ನ ನೆನಪಿನ ಶಕ್ತಿ ಅಪಾರ. ಮಣಿಪ್ರವಾಳದ ನಾಲ್ಕು ಶ್ಲೋಕಗಳನ್ನು ಕಂಠಪಾಠ ಮಾಡಬೇಕೆಂದು ನೀನು ಕೇಳಿದರೆ, ನಾನು ಹದಿನೈದು ಪದ್ಯಗಳನ್ನು ಒಪ್ಪಿಸಿಬಿಡುತ್ತಿದ್ದೆ. ಅಮ್ಮಾ, ನೀನು ಕಲಿಸಿದ್ದೆಲ್ಲ ನನ್ನ ಸಂಪತ್ತಾಯಿತು. ಈಗಲೂ ಅದೇ ನನ್ನ ತಿಳಿವಳಿಕೆಯ ತಳಹದಿ. ನಾನು ಕಲಿತ ಇನ್ನುಳಿದ ಗಿಳಿಪಾಠ ಮರೆವಿನ ಉಗ್ರಾಣದಲ್ಲಿ ಮಾಯವಾಗಿದೆ. ನನ್ನ ಬಾಲ್ಯದಲ್ಲಿ ನಾವು ಹಂಚಿಕೊಂಡ ಶ್ಲೋಕಗಳೆಷ್ಟು? ಸಮಸ್ಯಾಪೂರಣಗಳೆಷ್ಟು? ನೀನು ಒಂದು ಕಥೆ ಹೇಳಿ ಮುಗಿಸುವುದೇ ತಡ, ಅದನ್ನು ಮರಳಿ ಒಪ್ಪಿಸುವ ಸರದಿ ನನ್ನದು. ಆದರೆ ನಾನು ಲೇಖಕಿಯಾಗಬಹುದೆಂಬ ವಿಚಾರ ನಿನ್ನ ಕನಸುಗಳಲ್ಲಿಯೂ ಸುಳಿದಿರಲಿಲ್ಲ. ಅದು ನಿನ್ನ ಗುರಿಯೂ ಆಗಿರಲಿಲ್ಲ.

ನಿನ್ನ ಬದುಕೆಲ್ಲವೂ ಭಯದ ನೆರಳಿನಲ್ಲಿಯೇ ಕಳೆಯಿತು. ಅದು ಮನುಷ್ಯರ ಭಯ. ಯಾರು ಏನೆಂದುಕೊಳ್ಳುತ್ತಾರೋ, ಏನು ಹೇಳುತ್ತಾರೋ ಎಂಬ ಕೊನೆಮೊದಲಿಲ್ಲದ ಭಯ. ಇತರರ ಮಾತುಗಳಿಗೆ, ಆಲೋಚನೆಗಳಿಗೆ ಬೆಲೆಕೊಡಬಾರದೆಂದು ನಾನು ಹೇಳಿದಾಗ ನಿನಗೆ ನೋವಾಯಿತು. ಆದರೆ ನನಗೆ ಜ್ಞಾನವನ್ನು ನೀಡಲು ಮಾತ್ರ ನೀನು ಎಂದೆಂದಿಗೂ ಹೆದರಲಿಲ್ಲ. ನೀನು ಕೊಟ್ಟ ಪುಸ್ತಕಗಳು, ನನಗೆಂದು ತೆಗೆದಿಟ್ಟ ನಿಯತಕಾಲಿಕೆಗಳು ನನ್ನ ಬಾಲ್ಯದ ಸಂಗಾತಿಗಳಾಗಿದ್ದವು. ಭಾಷಾಪೋಷಿಣಿ, ಲಕ್ಷ್ಮೀಬಾಯಿ, ರಸಿಕರಂಜನಿ, ಆತ್ಮ ಪೋಷಿಣಿ.... ಮೊದಲ ಸಂಚಿಕೆಯಿಂದ ಅಂದಿನವರೆಗೆ ಜೋಡಿಸಿದ "ಸ್ವದೇಶಾಭಿಮಾನಿ"ಯ ಸಂಚಿಕೆಗಳೂ ನನಗಾಗಿ ಹಾದಿಕಾಯುತ್ತಿದ್ದವು. ಸರ್ಕಾರದ ಕೋಪವನ್ನು ಹೆದರದೆ ಎದುರಿಸಿದ ಅದರ ಧೀರ ಸಂಪಾದಕ ಮತ್ತು ಅವನ ಕುಟುಂಬವರ್ಗ ಎಲ್ಲರ ಗೌರವಕ್ಕೆ ಪಾತ್ರರಾಗಿದ್ದರು. ಈ ವಿಷಯ ಮನೆಮನೆಯಲ್ಲಿ ಆವೇಶಭರಿತ ಚರ್ಚೆಯ ವಿಷಯವಾಗಿತ್ತು. ನಿನ್ನ ಮೂರು ವರ್ಷದ ಮಗಳು ಕೂಡ "ಛೇ ಛೇ, ಆ ಸಂಪಾದಕರನ್ನು ಗಡೀಪಾರು ಮಾಡಬಾರದಿತ್ತು" ಎಂದು ಉದ್ಗಾರ ತೆಗೆಯುತ್ತಿದ್ದಳು. "ಪರಪ್ಪುರಂ", "ಉದಯಭಾನು" ಮುಂತಾದ ಬಹಿಷ್ಕೃತ ಗ್ರಂಥಗಳನ್ನೂ ನೀನು ಕಾದಿರಿಸಿದ್ದೆ. ಮಗಳು ವಯಸ್ಸಿಗೆ ಬಂದಮೇಲೆ ಓದಲೆಂದು. ಇಂತಹ ಪುಸ್ತಕಗಳ ಸಹವಾಸ ನಿನ್ನ ಮಗಳನ್ನು ಅಪಾಯ ತುಂಬಿದ ಸೀಮೆಗಳಲ್ಲಿ ಸಂಚರಿಸಲು

ಅಣಿಗೊಳಿಸಿತೇನು? ಕ್ರಾಂತಿಕಾರಿಯಾಗಲು ನೆರವಾಯಿತೇನು?

ನೀನು ನನ್ನೊಂದಿಗೆ ಸೀತೆ ಸಾವಿತ್ರಿ ಯಶೋದೆ ಶೀಲವತಿಯರನ್ನು ಕುರಿತು ಮಾತನಾಡಿದೆ. ನಾವು ಅರಣ್ಯದಲ್ಲಿ ಆಟವಾಡಿದೆವು. ಬಾಲಕೃಷ್ಣ ನಮ್ಮ ಸಂಗಾತಿ. ಮಣಿಪ್ರವಾಳಂ ಕೃತಿಯ ಘಟನೆಗಳು ನನ್ನ ಕನಸು ಮನಸುಗಳನ್ನು ಆವರಿಸಿದ್ದವು. ನನ್ನ ಜಗತ್ತು ಎಂದರೆ ಸ್ವಪ್ನ, ಸಂವಾದ ಮತ್ತು ಕಲ್ಪನೆಯ ಅಭಿವ್ಯಕ್ತಿ. ಈ ಮೋಹಕಲೋಕದ ಮೇಲೆ ಹೊರ ಜಗದ ವಾಸ್ತವತೆಯು ಮಾಡುವ ಆಕ್ರಮಣಗಳನ್ನು, ಹಾಗೆಂದು ಗುರುತಿಸುವ ಸಾಮರ್ಥ್ಯ ಕೂಡ ನನಗೆ ಇರಲಿಲ್ಲ.

ನಾನು ಬೆಳೆದೆ. ನೀನು ಹೆದರಿಕೆಯಿಂದ ನಡುಗುವುದನ್ನು ಮತ್ತೆಮತ್ತೆ ಗಮನಿಸಿದೆ. ನಿಷೇಧಗಳಿಗೆ ಹೆದರುವುದು ನಿನ್ನ ಸ್ವಭಾವವೇ ಆಗಿತ್ತು. ನನ್ನದೂ ನಿನ್ನ ಹಾಗೆಯೇ ದಟ್ಟವಾದ, ನೀಳವಾದ ಕೂದಲು. ಅಲ್ಲಿ ಮಲ್ಲಿಗೆ ಗುಲಾಬಿಗಳನ್ನು ಮುಡಿಸಬೇಕೆಂದು ನಿನ್ನ ಹಂಬಲ. ಅದು ಸಾಧ್ಯವಿಲ್ಲವೆಂಬ ನೋವು. ಆ ದಿನಗಳಲ್ಲಿ ಮದುವೆಯಾಗದ ನಂಬೂದ್ರಿ ಹುಡುಗಿಯೊಬ್ಬಳು ಹೂಮುಡಿಯುವ ಆಲೋಚನೆ ಮಾಡುವುದು ಕೂಡ ಪಾಪವೆಂದು ಪರಿಗಣಿತವಾಗಿತ್ತು. ಆ ಹಕ್ಕು ಅವಳ ಪತಿಯದು. ಮದುವೆಯಾದ ನಾಲ್ಕು ದಿನಗಳ ನಂತರ, ಮೊದಲ ರಾತ್ರಿಯ ಏಕಾಂತದಲ್ಲಿ ನಡೆಯಬೇಕಾದ ಕೆಲಸವದು.

ಸಂಪ್ರದಾಯಶೀಲತೆ ನಿನ್ನ ಬದುಕಿನ ಸಾರ್ವಭೌಮ ಶಕ್ತಿ. ಅವಮಾನ ಸಂಭವ ಅದರ ನಿರಂತರ ನಿರೀಕ್ಷೆ. ಆಗ ನಾನು ಮನೆಯಲ್ಲಿ ಉದ್ದನೆಯ ಲಂಗ ರವಿಕೆಗಳನ್ನು ತೊಡುತ್ತಿದ್ದೆ. ಆದರೆ ಸೋದರಮಾವಂದಿರ ಮನೆಗೆ ಹೋಗುವಾಗ ಅವುಗಳನ್ನು ತೆಗೆದು, ಓಲೆಗರಿಯ ಲಂಗೋಟಿ ಮತ್ತು ತೆಳುವಾದ ಮುಂಡುಗಳನ್ನು ಧರಿಸಭೇಕೆಂದು ನೀನು ಒತ್ತಾಯ ಮಾಡುತ್ತಿದ್ದೆ. ಏಕೆಂದರೆ ನಿನಗೆ ಅಜ್ಜಿಯರ ಭಯ. ನನ್ನನ್ನು ಶಾಲೆಗೆ ಕಳಿಸಬೇಕೆಂಬ ನಿನ್ನ ಹಂಬಲವಂತೂ ಕನಸಾಗಿಯೇ ಉಳಿಯಿತು. ನಿನ್ನ ಚಿಕ್ಕ ಅಜ್ಜ ಬದುಕಿದ್ದಾಗ ನಿನ್ನನ್ನು ಶಾಲೆಗೆ ಕಳಿಸಿದ್ದರು. ಅವರ ಮಾತಿಗೆ ಎದುರಾಡುವುದು ಯಾರಿಗೂ ಸಾಧ್ಯವಿರಲಿಲ್ಲ. ಅವರಿಗೆ ಸ್ಮಾರ್ತನ್ ಅಥವಾ ವೈದಿಕನ್ ಆಗುವ ಅಧಿಕಾರವಿತ್ತು. ಆದರೆ ನೀನು ಹೋಗಿದ್ದು ಮೇಲು ಜಾತಿಯ ಮಕ್ಕಳಿಗೆ ಮೀಸಲಾದ, ದೇವಾಲಯದ ಅಂಗಳದಲ್ಲಿ ನಡೆಯುತ್ತಿದ್ದ ಶಾಲೆಗೆ ನಿನ್ನ ಮಗಳ ಬದುಕು ಬೇರೆ ಬಗೆಯದು. ಅವಳು ಈ ಕಾಡಿನ ಕೋಟೆಯಲ್ಲಿ ಹುಟ್ಟಿದವಳು. ಅಲ್ಲಿಯೇ ತನ್ನ ಜೀವನವನ್ನು ಕಳೆಯಬೇಕಾಗಿತ್ತು.

ಪ್ರತಿದಿನ ಮನೆಪಾಠಗಳು ಮುಗಿದ ಕೂಡಲೆ ನಿನ್ನ ಬಳಿಗೆ ಓಡಿಬರುತ್ತಿದ್ದೆ. ನಮಗಿದ್ದ ಸಂಗಾತಿಗಳು ನಾವು ಮಾತ್ರ. ನನಗೆ ನೀನು. ನಿನಗೆ ನಾನು. ನಾವು ಆಡುತ್ತಿದ್ದ ಅಪರೂಪದ ಆಟ ನೆನಪಿದೆಯೇ? ನೀನು ಒಂದು ಪದ್ಯವನ್ನು ಹೇಳುತ್ತಿದ್ದೆ. ಅದರ ಶೈಲಿಯಿಂದಲೇ ಕವಿ ಯಾರೆಂದು ಊಹಿಸುವುದು ನನ್ನ ಕೆಲಸ. ನಂತರ, ಪದ್ಯ ಹೇಳುವ ಸರದಿ ನನ್ನದು. ಊಹೆ ನಿನ್ನದು. ಹೀಗೆ ನಮ್ಮ ಕೋಣೆಯಲ್ಲಿ ಕವಿಗಡಣ ನೆರೆಯುತ್ತಿತ್ತು. ವೆಣ್ಮಣಿ, ಶಿವೊಳ್ಳಿ,

ಒರವಂಕಾರ, ನಾಡುವಂ, ಕುಂಜುಕುಟ್ಟಂ, ಉಳ್ಳೂರ್, ವಲ್ಲತ್ತೋಳ್.... ಹೀಗೆಯೇ ಹಲವರು. ಕವಿತೆಯ ಸ್ವರೂಪದಿಂದಲೇ ಕವಿಯ ಗುರುತು ಹಿಡಿಯುವುದು ನನಗೆ ಸುಲಭವಾಗಿತ್ತು. ಆದರೆ ಒಮ್ಮೊಮ್ಮೆ ನೀನು ನಿನ್ನವೇ ಕವಿತೆಗಳನ್ನೋ ತಂದೆಯವರ ಕವಿತೆಗಳನ್ನೋ ಹೇಳಿಬಿಡುತ್ತಿದ್ದೆ. ಆಗ ನನಗೆ ಊಹಿಸುವುದು ಅಸಾಧ್ಯವಾಗುತ್ತಿತ್ತು. ಹೀಗೆಯೇ ದಿನಗಳು ಕಳೆದವು.

ಅಜ್ಜನ ಸಾವಿನ ತರುವಾಯ ತಂದೆಯವರು ಕುಟುಂಬದ ಮುಖ್ಯಸ್ಥರಾದರು. ಅಜ್ಜಿ ತೀರಿಕೊಂಡ ನಂತರ ನೀನು ಯಜಮಾನಿಯಾದೆ. ಈಗ ಅದನ್ನು ನೆನಪು ಮಾಡಿಕೊಂಡರೆ ಅಳಬೇಕೆನ್ನಿಸುತ್ತದೆ, ನಗಬೇಕೆನ್ನಿಸುತ್ತದೆ. ನಿನ್ನಂತಹ ಸುಕೋಮಲ, ಪುಕ್ಕಲು ಹೆಂಗಸು ಅಷ್ಟು ದೊಡ್ಡ ಅವಿಭಕ್ತ ಕುಟುಂಬವನ್ನು ಆಳುವುದು ಹೇಗೆ ಸಾಧ್ಯ? ಬಂಧುಗಳು, ಅತಿಥಿಗಳು, ಸೇವಕರು ತುಂಬಿದ ದಿನಚರಿ. ಪ್ರತಿದಿನವೂ ಹೊತ್ತುಹೊತ್ತಿಗೆ ಎರಡು ಮೂರು ತಪ್ಪಲೆ ಅನ್ನ ಬೇಯಿಸುವುದು ನಿನ್ನ ಕೆಲಸ. ನಿನ್ನನ್ನು ಹೊರತುಪಡಿಸಿ ಬೇರೆ ಯಾರೂ ಅಡಿಗೆ ಮನೆಯೊಳಗೆ ಕಾಲಿಡುವಂತಿರಲಿಲ್ಲ,. ನೀನು ಅಲ್ಲಿಂದ ಹೊರಟರೆ ಹೆಚ್ಚೆಂದರೆ ದೇವರ ಮನೆಯವರೆಗೆ ಹೋಗಬಹುದಿತ್ತು. ಅದರ ಜೊತೆಗೆ ಪ್ರತಿ ವರ್ಷ ಹೊಸ ಮಗು ಬೇರೆ. ಹೊಟ್ಟೆಯೊಳಗೆ ಒಂದು ಮಗು, ಮೊಲೆ ಕುಡಿಯುವ ಮಗು ಇನ್ನೊಂದು. ಇವರೊಂದಿಗೆ ದುಡಿಯುವುದು ನಿನ್ನ ಪಾಡು.

ನಿಧಾನವಾಗಿ ನಮ್ಮ ದಾರಿಗಳು ಬೇರೆಯಾದವು. ನಿನ್ನದು ಅಡಿಗೆಮನೆಯ ಅಂತರಾಳಕ್ಕೆ. ನನ್ನದು ಓದುವ ಕೊಠಡಿಗೆ. ನಾನು ಓದುವ ಪುಸ್ತಕಗಳೂ ಬದಲಾದವು. ಹಗಲು ಇರುಳು ಓದಿದೆ, ಆಲೋಚಿಸಿದೆ, ಕನಸುಕಂಡೆ. ಮೊದಲ ಬಾರಿಗೆ ನಮ್ಮ ಅಭಿಪ್ರಾಯಗಳು ಬೇರೆಬೇರೆಯಾದವು. ನಂತರದ ಕೆಲವು ವರ್ಷಗಳು ನಿನಗೆ ನಾನು ಅರ್ಥವಾಗಲಿಲ್ಲ. ನಿನ್ನನ್ನು ನಾನು ಅರ್ಥಮಾಡಿಕೊಳ್ಳಲಿಲ್ಲ. ನೀನು ಹೆದರಿಕೆಯಿಂದ ಪರಿಪಾಲಿಸುತ್ತಿದ್ದ ಸಂಪ್ರದಾಯಗಳ ಎದುರು ಪ್ರತಿಭಟಿಸುವ ಕೆಚ್ಚನ್ನು ನಾನು ಸಂಪಾದಿಸಿದೆ. ನೀನು ತಿಳಿಯದೆ, ಉದ್ದೇಶಿಸದೆ ಒಂದು ಕಟ್ಟುಪಾಡನ್ನು ಮೀರಿದಾಗಲೂ ಏನಾಗುವುದೋ ಎಂದು ಕಂಪಿಸುತ್ತಿದ್ದೆ. ನೆನಪಿದೆಯೆ ನಿನಗೆ? ಆ ಪೂಜಾರಿಗೆ ಡಿಕ್ಕಿ ಹೊಡೆಯಲಿದ್ದ ದಿನ! ಅಕ್ರಂದನ ಮಾಡುತ್ತ ಪಲಾಯನ ಮಾಡಿದ ದಿನ.

ಮನೆಗೆಲಸದ ಒತ್ತಡದಿಂದ ದಿನಕ್ಕೆ ನೂರುಬಾರಿ ಅಡಿಗೆಮನೆಯಿಂದ ಅಂಗಳಕ್ಕೆ ಅಲ್ಲಿಂದ ಅಡಿಗೆಮನೆಗೆ ಲಾಳಿಹೊಡೆಯುವುದು ನಿನಗೆ ಅನಿವಾರ್ಯವಾಗಿತ್ತು. ಸುಮಾರು ಒಂದು ಫರ್ಲಾಂಗ್ ದೂರ. ಒಂದು ದಿನ, ಕಿಟ್ಟನ್ ಪೊಟ್ಟಿ ನೈವೇದ್ಯದ ಅನ್ನವನ್ನು ತೆಗೆದುಕೊಂಡು ಒಳಗೆ ಬಂದರು; ಆತುರವಾಗಿ ಹೋಗುತ್ತಿದ್ದ ನೀನು ಅವರಿಗೆ ಎದುರಾದೆ. ಇನ್ನೇನು ಡಿಕ್ಕಿ ಹೊಡೆಯಬೇಕು. . ಅನಾಹುತ ತಪ್ಪಿತು.

ಇಬ್ಬರಿಗೂ ಆಘಾತ. ಏನು ಮಾಡುತ್ತಿರುವೆನೆಂಬ ಪರಿವೆಯೇ ಇಲ್ಲದೆ ಅಯ್ಯೋ ಎಂದು

ಚೀರುತ್ತಾ ನೀನು ಅಲ್ಲಿಂದ ಓಡಿದೆ. ನಿನಗೋ ಇನ್ನಿಲ್ಲದ ಆತಂಕ. ಪರಪುರುಷನೊಬ್ಬ ನಿನ್ನನ್ನು ಮುಟ್ಟಿದನೆಂದೇ? ನಿನ್ನ ಮುಖವನ್ನು ನೋಡಿದನೆಂದೇ? ಆ ಯಾತನೆ ತುಂಬಿದ "ಅಯ್ಯೋ" ನಿನ್ನ ಒಂದು ಭಾಗವೇ ಆಗಿತ್ತು.

ನಾನು ಬರೆಯಬೇಕೆಂದು ನಿನ್ನ ಆಸೆ. ಆದರೆ ನನ್ನ ಬವರಣಿಗೆ ನಿನ್ನ ಕಣ್ಣಿಗೆ ಬೀಳದಂತೆ ನಾನು ಎಚ್ಚರ ವಹಿಸುತ್ತಿದ್ದೆ. ಏಕೆಂದರೆ ತಪ್ಪುಮಾಡುತ್ತಿರುವೆನೆಂಬ ಭಾವನೆ ನನ್ನಲ್ಲಿ ಬೇರೂರಿತ್ತು. ಅದರಲ್ಲೂ ನಾನು ಬರೆದಿದ್ದು ನಿನಗೆ ಇಷ್ಟವಾಗುವುದಿಲ್ಲವೆಂದು ನನ್ನ ಆತಂಕ. ಒಂದು ದಿನ ಮನೆಪಾಠದ ಮೇಷ್ಟ್ರು ನನ್ನ ಕೆನ್ನೆಗೆ ಹೊಡೆದರು. ಏಕೆಂದರೆ ನಾನು ಮಾಡಿದ ಲೆಕ್ಕಗಳು ತಪ್ಪಾಗಿದ್ದವು. ಆಮೇಲೆ ಅವರಿಗೆ ನಾನು ಬರೆದ ಕವಿತೆಗಳ ಕಂತೆಯೇ ಸಿಕ್ಕಿತು. ಅಪ್ಪ ಮತ್ತು ಅವನ ಸೋದರರು ಅವುಗಳ್ನು ಓದಿ, ಗೇಲಿಮಾಡಿ, ನಕ್ಕು ನಲಿದ ಮೇಲೆ ನಿನಗೆ ಕೊಟ್ಟರು. ಕೆಲಸ ಮುಗಿಸಿದ ನಂತರ ಓದಲೆಂದು ಅವುಗಳನ್ನು ಹಾಸಿಗೆಯ ಕೆಳಗೆ ಬಚ್ಚಿಟ್ಟೆ ನೀನು. ಆದರೆ ನಾನು ಅವುಗಳಿಗಾಗಿ ಬೇಟೆಯಾಡಿದೆ.ಸುಟ್ಟುಹಾಕಿದೆ. ದುಃಖ ಮಯಿಯಾದ ನೀನು "ಅಷ್ಟು ಜನ ಅವುಗಳನ್ನು ಓದಿದರು. ಆದರೆ ನನ್ನಿಂದ ಏಕೆ ಬಚ್ಚಿಟ್ಟೆ?" ಎಂದು ಕೇಳಿದೆ. ಇಡೀ ಜಗತ್ತು ನನ್ನ ಶತ್ರುವೆಂದು ನಾನು ತಿಳಿದಿದ್ದ ದಿನಗಳವು. ನನ್ನ ಅಭಿಪ್ರಾಯಗಳು ನಿನ್ನವಕ್ಕಿಂತ ಬೇರೆಯಾದಾಗ ನಾನು ರಹಸ್ಯಮಯತೆಯ ಚಿಪ್ಪಿನಲ್ಲಿ ಅವಿತುಕೊಳ್ಳುತ್ತಿದ್ದೆ. ನನಗೆ ಬೇರೆ ದಾರಿ ಇರಲಿಲ್ಲ. ಅಮ್ಮಾ, ನನಗೆ ಬೇರೆ ರೀತಿಯ ಬದುಕು ಬೇಕಾಗಿತ್ತು. ಹೆಚ್ಚು ಸ್ವತಂತ್ರ ಬದುಕು. ಅಂತರ್ಜನಂ ಜೀವನದ ಕೊಡೆನೆರಳಿನಿಂದ ಸೂರ್ಯಪ್ರಕಾಶದ ಕಡೆಗೆ ಚಲಿಸುವ ಹಂಬಲ ನನ್ನದು. ಕೊನೆಗೊಂದು ದಿನ ಆ ಚಲನೆ ನನಗೆ ಸಾಧ್ಯವಾದಾಗ ನಿನ್ನ ಅಂತರಂಗದ ಆಳಗಳಲ್ಲಿ ದುಃಖದ ಚಿಲುಮೆಯೇ ಚಿಮ್ಮಿರಬೇಕು. ಯಾರು ಏನಾದರೂ ಹೇಳಲಿ, ಮನಸ್ಸಿಗೆ ಬಂದಿದ್ದನ್ನು ಮಾಡಿಯೇ ತೀರುವ ನನ್ನ ಹಟ ನಿನಗೆ ತಡೆಯಲಾಗದ ನೋವು ತಂದಿರಬೇಕು.

ತರುಣ ಪೀಳಿಗೆಯ ಪ್ರಸಿದ್ಧ ಲೇಖಕಿಯೊಬ್ಬರ ಸಾಲುಗಳು ಮತ್ತೆಮತ್ತೆ ನೆನಪಾಗುತ್ತವೆ: ನನ್ನ ತಾಯಿಗೆ ನನ್ನನ್ನು ಕಂಡರೆ ಅಚ್ಚರಿ. ಮಂಗನನ್ನು ಮಗುವಾಗಿ ಪಡೆದ ಜಿಂಕೆಯ ಹಾಗೆ. ಅದನ್ನು ನೋಡಿ ನನಗೆ ನಗುಬರುತ್ತದೆ. ನಿಜ, ಅಮ್ಮಾ ನಿಜ. ಆ ನಗು ನಾನು ಅನುಭವಿಸುತ್ತಿರುವ ದ್ವಂದ್ವವೂ ಹೌದು.

ಅಂದು ಅಂತರ್ಜನಂ ಸಂಘದ ಸಭೆ. ಒಂದು ಸಮೂಹಚಿತ್ರವನ್ನು ತೆಗೆಯಬೇಕಿತ್ತು. ಅಪ್ಪ ನಿನ್ನನ್ನು ಬಲವಂತವಾಗಿ ಎಳೆದುಕೊಂಡು ಹೋಗಿದ್ದರು. ನಿನ್ನ ಮುಖದಲ್ಲಿ ನಾಚಿಕೆ ಮತ್ತು ನೋವುಗಳ ಮಿಲನ. ನನಗಿನ್ನೂ ನೆನಪಿದೆ. ಇನ್ನೊಂದು ದಿನ ಅಪ್ಪ ನಿನ್ನ ಕಂಚಿನ ಬಳೆಗಳನ್ನು ಮುರಿದುಹಾಕಿ ಬಂಗಾರದ ಬಳೆಗಳನ್ನು ತಂದುಕೊಟ್ಟರು. ನೀನು ಬಿಕ್ಕಿ ಬಿಕ್ಕಿ ಅತ್ತೆ. ಅವರು ನಿನ್ನ ಮಂಗಳಸೂತ್ರವನ್ನೇ ಕಿತ್ತುಹಾಕಿದರು ಎನ್ನುವಹಾಗೆ. ಕೊನೆಗೂ ಚಿನ್ನದ ಬಳೆಗಳ ಜೊತೆಗೆ ಕಂಚಿನ ಬಳೆಗಳನ್ನೂ ಧರಿಸಿಕೊಳ್ಳಲು ಅನುಮತಿ ದೊರೆಯುವವರೆಗೂ

ನೀನು ಊಟಮಾಡಲಿಲ್ಲ.

ಅಪ್ಪನಿಗೆ ಖಾಯಿಲೆ ಬಂದಾಗ ನೀನು ಪರದೆ ಮುಚ್ಚಿದ ಕಾರಿನಲ್ಲಿ ಕೊಲ್ಲಮ್‌ಗೆ ಹೋಗಿದ್ದು ನನಗೆ ನೆನಪಾಗುತ್ತಿದೆ. ಅಲ್ಲಿಗೆ ಹೋಗುವುದೇ ತಡ, ನೀನು ಬಾವಿಯಲ್ಲಿ ಇಳಿದು ಸ್ನಾನಮಾಡಿದೆ. ಆ ಪ್ರಯಾಣವು ನಿನ್ನನ್ನು ಮಲಿನವಾಗಿಸಿದೆ ಎನ್ನುವಹಾಗೆ. ಬಾವಿಯಾದರೂ ಅಷ್ಟೆ, ಕೆರೆಯಾದರೂ ಅಷ್ಟೆ. ನಿನಗೆ ಭಯದ ಲವಲೇಶವೂ ಇರಲಿಲ್ಲ. ಬಾಲ್ಯದಲ್ಲಿ ನಿನ್ನನ್ನು ಜಲಕನ್ಯೆಯೆಂದು ಕರೆಯುತ್ತಿದ್ದರಲ್ಲವೇ?

ನಾನು ಒಳಮನೆಯ ವಾಸವನ್ನು ನಿರಾಕರಿಸಿ ಹೊರಬಂದ ದಿನ ನೀನು ತಲೆತಲೆ ಚಚ್ಚಿಕೊಂಡೆ. ಕಣ್ಣೀರಿನ ಹೊಳೆಹರಿಸಿದೆ. ನಿನ್ನ ಮಗಳು ಸತ್ತುಹೋದಳು ಎನ್ನುವ ಹಾಗೆ ದುಃಖಿಸಿದೆ ಅಥವಾ ಅವಳನ್ನು ಜಾತಿಯಿಂದ ಹೊರಹಾಕಿದರು ಎನ್ನುವಂತೆ.....

ಎಷ್ಟೊಂದು ನೆನಪುಗಳು ನನ್ನ ಹೃದಯವನ್ನು ಇರಿಯುತ್ತಿವೆ. ನಿಧಾನವಾಗಿ ನಿನಗೆ ಅದೆಲ್ಲಾ ಅಭ್ಯಾಸವಾಯಿತು. ಕಾಲಮಹಿಮೆಯನ್ನು ನೀನು ಅರ್ಥ ಮಾಡಿಕೊಂಡೆ. ಒಮ್ಮೆ ಪಾಪಕಾರ್ಯವೆಂದು ನೀನೇ ಭಾವಿಸಿದ್ದ ಹಲವು ಕ್ರಿಯೆಗಳಲ್ಲಿ ತೊಡಗುವುದು ನಿನಗೆ ಸಾಧ್ಯವಾಯಿತು. ಒಂದು ದಿನ ನೀನು ಅದನ್ನು ಹೀಗೆ ತೋಡಿಕೊಂಡೆ. "ಹೌದು, ಆ ದಿನ ನಾನು ನಿನ್ನನ್ನು ಬಹಳ ನೋಯಿಸಿದೆ. ನಿನಗೆ ಒಳ್ಳೆಯದಾಗಲೆಂದೇ ನನ್ನ ಹಂಬಲ. ಹೋಗಲಿ ಬಿಡು. ಈಗ ಎಲ್ಲರೂ ಸಂತೋಷವಾಗಿದ್ದೇವೆ." ಪರವಾಗಿಲ್ಲ ಅಮ್ಮಾ. ನಾನೂ ನಿನ್ನನ್ನು ಇತಿಮಿತಿಯಿಲ್ಲದೆ ನೋಯಿಸಿದೆ. ನಾವಿಬ್ಬರೂ ನೋವನ್ನು ಹಂಚಿಕೊಂಡೆವು. ಆದರೂ ನಿನ್ನ ಯಾತನೆಯೇ ಹೆಚ್ಚು ಆಳವಾದುದೆಂದು ತೋರುತ್ತದೆ. ಏನೇ ಆಗಲಿ, ನಾರಾಯಣ ಗುರು ಅವರ ಆದರ್ಶವನ್ನು ಸಾಧಿಸಿದೆವೆನ್ನುವುದೇ ನಮಗೆ ಸಮಾಧಾನ. . "ನೀನು ನಿನ್ನ ಸಂತೋಷಕ್ಕಾಗಿ ಮಾಡಿಕೊಳ್ಳುವುದೆಲ್ಲವೂ ಅಂತಿಮವಾಗಿ ಎಲ್ಲರಿಗೂ ಸಂತೋಷ ಕೊಡಬೇಕು."

ತಂದೆಯ ಸಾವಿನ ನಂತರ ನಿನ್ನದು ಸನ್ಯಾಸಿಯ ಬದುಕು. ಮಕ್ಕಳಿಗಾಗಿ ಮೀಸಲಾದ ಮನಸ್ಸು. ಕ್ರಮೇಣ ಎಲ್ಲ ಮಾನವರೂ ನಿನ್ನ ಮಕ್ಕಳಾದರು. ಪ್ರಾಣಿಗಳು, ಪಕ್ಷಿಗಳು, ಮರ ಬಳ್ಳಿಗಳು ಎಲ್ಲ ದಿಕ್ಕುಗಳಲ್ಲೂ ನಿನ್ನ ಒಲುಮೆಯ ಹೊನಲು ಹರಿಯಿತು. ಎಷ್ಟೋ ಸಲ ನಿನಗೆಂದು ಬಡಿಸಿದ ಅನ್ನವನ್ನು ಬೇರೆ ಯಾರಿಗೋ ಕೊಟ್ಟು ನೀನು ಉಪವಾಸವಿರುತ್ತಿದ್ದೆ. ಅವರ ಹಸಿವು ನಿನ್ನದಕ್ಕಿಂತ ಹೆಚ್ಚೆಂದು ತೋರಿದರೆ ಸರಿ. ಮತ್ತೊಂದು ಬಾರಿ ಅಡಿಗೆ ಮಾಡಿಕೊಂಡು ಉಣ್ಣುವುದು ಉಪವಾಸದ ನಿಯಮಗಳಿಗೆ ವಿರುದ್ಧವೆಂದು ನಮಗೆ ವಿವರಣೆ ಕೊಡುತ್ತಿದ್ದೆ. ಒಮ್ಮೆ, ನಾನು ಹುಡುಗಿಯಾಗಿದ್ದಾಗ ನೀನು ಐದು ದಿನಗಳ ಸತತವಾದ ಉಪವಾಸಮಾಡಿದೆ. ಸೋಮವಾರ, ಏಕಾದಶಿ, ಪ್ರದೋಷ, ಹುಣ್ಣಿಮೆ ಮತ್ತು ಶಿವರಾತ್ರಿ. ಒಂದರ ನಂತರ ಒಂದು ಬಂದಿದ್ದವು. ಆ ಐದು ದಿನಗಳೂ ನೀನು ಮಾಮೂಲಿನಂತೆ ಅಡಿಗೆಮಾಡಿ ಎಲ್ಲರಿಗೂ ಬಡಿಸಿದೆ. ಮೂರು ತಪ್ಪಲೆ ಅನ್ನ. ಎಲ್ಲ ಬಗೆಯ ಜನರೂ ನಿನ್ನ

ಆತಿಥ್ಯದ ಸವಿಯನ್ನು ಅನುಭವಿಸುತ್ತಿದ್ದರು. ಅಪರಾಧಿಗಳು. ಸೆರೆಮನೆಯಿಂದ ತಪ್ಪಿಸಿಕೊಂಡು ಬಂದವರು, ಉನ್ನತ ದರ್ಜೆಯ ಅಧಿಕಾರಗಳು, ಜನತೆಯ ಪ್ರತಿನಿಧಿಗಳು, ಬಡವರು, ಬಲ್ಲಿದರು. ನಿನ್ನ ಸಾವಿನ ಸುದ್ದಿಯನ್ನು ಕೇಳಿದ ದಿನ ಶಾಲಾಮಕ್ಕಳು ಮನಕರಗುವಂತೆ ಅತ್ತರು. ಅವರಲ್ಲಿ ಒಬ್ಬ ಹೇಳಿದ: ''ನಮ್ಮ ಯೋಗಕ್ಷೇಮ ಕೇಂದ್ರ ಇನ್ನು ಇಲ್ಲ''

ನನ್ನ ಷಷ್ಟಿಪೂರ್ತಿಯ ದಿನ ನಿನ್ನ ಕೆಲವು ಕವಿತೆಗಳನ್ನು ಪ್ರಕಟಿಸಬೇಕೆಂದು ನಾನು ಇಷ್ಟ ಪಟ್ಟೆ. ಆ ವೇಳೆಗೆ ನೀನು ಹುಡುಗಿಯಾಗದ್ದಾಗ ಬರೆದ ಅನೇಕ ಕವಿತೆಗಳು ಕಳೆದು ಹೋಗಿದ್ದವು. ನಿನ್ನ ಮಟ್ಟಿಗೆ ಕವಿತೆಗಳೆಂದರೆ ಪ್ರಾರ್ಥನೆಯ ಸಮಯದಲ್ಲಿ ಅರ್ಪಿಸುವ ಹೂವುಗಳು. ಪ್ರತಿದಿನವೂ ಪೂಜಾಸಮಯದಲ್ಲಿ ದೇವರೆದುರು ಕಣ್ಣುಮುಚ್ಚಿಕೊಂಡು ನಿಲ್ಲುತ್ತಿದ್ದಂತೆ, ನಿನ್ನ ಹೃದಯದಲ್ಲಿ ಪ್ರಶಂಸಾಗೀತಗಳು ಅರಳುತ್ತಿದ್ದವು. ಅವುಗಳಲ್ಲಿ ಕೆಲವು ಪೂಜೆ ಮುಗಿಯುವ ಹೊತ್ತಿಗೆ ಮರೆತು ಹೋಗುತ್ತಿದ್ದವು. ಉಳಿದವು ದಾಖಲೆಯಾಗುತ್ತಿದ್ದವು. ಅನೇಕ ಕವಿತೆಗಳು ಕಾಶಿ ವಿಶ್ವನಾಥ, ಅನ್ನಪೂರ್ಣ ಮತ್ತು ರಾಮರನ್ನು ಹೊಗಳುವ ಪದ್ಯಗಳು. ಆಧ್ಯಾತ್ಮವಲ್ಲದೆ ಇತರ ವಿಷಯಗಳ ಬಗ್ಗೆಯೂ ನೀನು ಬರೆಯುತ್ತಿದ್ದೆ. ನಿನ್ನ ಎಂಬತ್ತೆರಡನೆಯ ವಯಸ್ಸಿನಲ್ಲಿ ಧರ್ಮ ಮತ್ತು ಜಾತಿಗಳ ಆಚೆಗಿನ ತತ್ವಗಳನ್ನು ಕುರಿತು ಒಂದು ಗೀತೆಯನ್ನು ಬರೆದಿದ್ದೆ. ಅದರ ಧ್ವನಿಮುದ್ರಣ ಕೂಡ ನಮ್ಮ ಬಳಿ ಇದೆ.

ನೀನು ಹುಟ್ಟಿದ್ದು ಮೇದಂ ತಿಂಗಳಿನಲ್ಲಿ. ಅಕ್ಷಯ ತದಿಗೆಯಂದು. ರೋಹಿಣಿ ನಕ್ಷತ್ರ. ನಿನ್ನ ಶತಾಭಿಷೇಕದ ವೇಳೆಗೆ ಆ ವರ್ಷದ ಸಪ್ತಾಹ ಮುಗಿದಿತ್ತು. ಆ ದಿನ ನಾವೆಲ್ಲರೂ ಒಟ್ಟಿಗೆ ಕುಳಿತಿದ್ದೆವು. ನಾಲ್ಕು ಪೀಳಿಗೆಗಳು. ನೀನು, ನಿನ್ನ ಮಕ್ಕಳು, ಮೊಮ್ಮಕ್ಕಳು ಮತ್ತು ಮರಿಮಕ್ಕಳು. ಇದ್ದಕ್ಕಿದ್ದಂತೆ ನಿನ್ನಲ್ಲಿ ಒಂದು ಬದಲಾವಣೆಯನ್ನು ಗುರುತಿಸಿದೆ. ನನ್ನ ಕಣ್ಣುಗಳು ತುಂಬಿಬಂದವು. ಸಾವಿರ ಪೂರ್ಣಚಂದ್ರರನ್ನು ನೋಡಿದ ಆ ಕಣ್ಣುಗಳಲ್ಲಿ ವಿವರಿಸಲಾಗದ ಏನೋ ಏನೋ ಭಾವನೆ ಅಡಗಿತ್ತು. ನೀನು ನಮ್ಮೆಲ್ಲರ ಜಗತ್ತಿನಿಂದ ದೂರ ಸರಿದಿದ್ದೆ. ನೋವು ನಲಿವುಗಳಿಂದ ಆಚೆ. ನೀನು ಹೇಳಿದೆ. ''ಸಾಕು, ಇನ್ನು ಬೇಡ. ಇಲ್ಲಿಗೆ ಮುಗಿಸೋಣ.''

ಹೌದು. ಅದು ನಿಜ. ನೀನು ಸಾಯಲು ಸಿದ್ಧವಾಗಿದ್ದೆ. ಹುಟ್ಟಿಗೆ ಹೇಗೋ ಹಾಗೆಯೇ ಸಾವಿಗೂ ಒಂದು ಪರಿಪಕ್ವ ಸ್ಥಿತಿ ಇದೆ. ವಯಸ್ಸು ಮತ್ತು ಅನುಭವಗಳು ಮಾಗಿದ ಸ್ಥಿತಿ ತಾನಾದರೂ ಸರಿ, ಇತರರಾದರೂ ಸರಿ. ಆ ಹಂತದಲ್ಲಿ ಸಾಯುವುದೇ ಸರಿಯೆಂದು ನಾನು ತಿಳಿದಿದ್ದೇನೆ. ನಿನಗೂ ಸಾವು ಬೇಕಾಗಿತ್ತು. ಹಾಗಾದರೆ ಒಂದು ವಾರ ಏಕೆ ಜೀವ ಹಿಡಿದು ಕೊಂಡಿದ್ದೆ? ಕೇವಲ ಕೆಲವು ಹನಿ ತೀರ್ಥ ಕುಡಿದು. ನಮಗೆ ಯಾರಿಗೂ ಹೇಳದೆ, ಎಲ್ಲ ಆಹಾರವನ್ನೂ ನಿರಾಕರಿಸಿದೆ. ನಿನಗೆ ಹೃದಯದ ತೊಂದರೆ ಇತ್ತು. ದೈಹಿಕವಾಗಿ ಅಷ್ಟೊಂದು ದುರ್ಬಲೆಯಾಗಿದ್ದೆ. ಯಾವ ಪಾಪವನ್ನೂ ಮಾಡದ ನೀನು ನಿರೋಗಿಯಾಗಿ ಸಾಯುವೆಯೆಂಬ ಖಚಿತ ನಂಬಿಕೆ ನಿನ್ನದು. ರೋಗವು ಪಾಪದ ಪರಿಣಾಮವೆಂದು ನಮಗೆ ಎಷ್ಟೋಬಾರಿ

ಹೇಳಿದ್ದೆ. ನಾವು ಬಹಳ ಪ್ರಯತ್ನಿಸಿದೆವು. ರಾಮಕೃಷ್ಣ ಪರಮಹಂಸ, ರಮಣ ಮಹರ್ಷಿ ಮತ್ತು ಇತರ ಹಲವು ಮಹನೀಯರು ರೋಗಗ್ರಸ್ತರಾಗಿ, ನರಳಿದರೆಂದು, ವೈದ್ಯರ ಚಿಕಿತ್ಸೆಗೆ ಒಪ್ಪಿಗೆ ನೀಡಿದ್ದರೆಂದು ಹೇಳಿದೆವು.

ಕೊನೆಕೊನೆಗೆ ಆಧುನಿಕ ವೈದ್ಯಶಾಸ್ತ್ರದ ಪ್ರಯತ್ನಗಳಿಗೆ ನೀನು ಅನುವು ಮಾಡಿಕೊಟ್ಟೆ. ಅದರ ಚುಚ್ಚುಮದ್ದುಗಳು ನಿನ್ನ ರಕ್ತನಾಳಗಳಲ್ಲಿ ಹೊಸ ಜೀವವನ್ನು ತುಂಬಿದವು. ಇದರ ನಡುವೆ ನೀನು ಅನಂತವನ್ನು ಕುರಿತು, ವಿಶ್ವನಿಯಾಮಕ ಶಕ್ತಿಯನ್ನು ಕುರಿತು ಚಿಂತಿಸುತ್ತಿದ್ದೆ. ದೇಹದ ಬಾಧೆಗಳನ್ನು ಮರೆತಿದ್ದೆ.ನೀನು ನೀರಮೇಲೆ ತೇಲುವ ಕಡ್ಡಿಯ ಹಾಗೆ ಹಗುರವಾಗಿ ಮಲಗಿದ್ದೆ. ಕೊನೆಯ ಒಂದು ತಿಂಗಳು ನೀನು ಬಾಲ್ಯಾವಸ್ಥೆಗೆ ಮರಳಿದಂತಿತ್ತು. ಆ ಕಾಲದ ಹಲವು ಕಥೆಗಳನ್ನು ಹೇಳಿದೆ. ನಿನ್ನ ತಾತ. ಅವರ ತಮ್ಮಂದಿರು. ಅವರೆಲ್ಲರೂ ಮಹಾ ವಿದ್ವಾಂಸರು ಹಾಗೂ ಕವಿಗಳು. ಅವರಲ್ಲಿ ಒಬ್ಬರು ಮಹಾರಾಜರಿಂದ ವೀರಶೃಂಖಲೆಯನ್ನು (ಬಂಗಾರದ ಹಾರ) ಪಡೆದವರು. ಇನ್ನೊಬ್ಬ ಮಹಾಪಂಡಿತ ತನ್ನ ಶಿಷ್ಯರಿಗೆ ಹೇಳಿಕೊಡುತ್ತಿದ್ದ ಕವಿತೆಗಳನ್ನು ಅವರಿಗಿಂತ ಮೊದಲೇ ನೀನು ಒಪ್ಪಿಸಿದ್ದು. ಬಹುಮಾನವಾಗಿ ಪಡೆದ ಬಂಗಾರದ ಜರಿಯಂಚಿನ ಸೀರೆ. ನಿನ್ನ ತಂದೆ ನಿನ್ನ ತಾಯಿಯನ್ನು ಮದುವೆಯಾದ ವೃತ್ತಾಂತ. ಅವನು ನಿನ್ನ ದೊಡ್ಡಮ್ಮನ ಮದುವೆಗೆ ಅಳಿಯನ ಜೊತೆಗೆ ಗೆಳೆಯನಾಗಿ ಬಂದವನು. ಮನೆಯೊಳಗಿನ ಯಾವುದೋ ಕೋಣೆಯಲ್ಲಿ ಚಿಕ್ಕ ಹುಡುಗಿಯೊಬ್ಬಳು ಹಾಡುವುದು ಕೇಳಿಸಿತು. ದನಿಗೆ ಮರುಳಾದ ಈತ ಅವಳನ್ನೇ ಹುಡುಕಿ ಮದುವೆಯಾದ. ನೀನು ಮತ್ತು ನಿನ್ನ ಗೆಳತಿಯರು ಬರೆದ, ಹಾಡಿದ ಕವಿತೆಗಳ ವಿಷಯವೂ ಬಂತು. ಹಾಗೆಯೇ ನಿನ್ನ ಬಾಲ್ಯಕಾಲ ಸಖಿಯಾದ ಲಕ್ಷ್ಮಿ ಕುಟ್ಟಿಯ ಮಾತು.

ರೋಗ ಮತ್ತು ಮುಪ್ಪಿನಿಂದ ಸವೆದುಹೋಗಿರುವ ದೇಹಗಳಿಗೆ ಬಿಡುಗಡೆ ನೀಡುವ, ಶೀಘ್ರ ಮರಣದಾಯಕ ಮದ್ದುಗಳನ್ನು ಕೊಡುವುದೇ ಸೂಕ್ತವೆಂದು ನೀನು ಹೇಳಿದಾಗ ವೈದ್ಯರಿಗೆ ಷಾಕ್ ಆಯಿತು.

ನೀನು ಹಲವು ವರ್ಷಗಳಿಂದ ಸಂಗ್ರಹಿಸಿ ಅಟ್ಟದ ಮೇಲೆ ಕೂಡಿಟ್ಟಿದ್ದ ತುಲಸೀ ಕಾಷ್ಠಗಳಿಂದಲೇ ನಿನ್ನನ್ನು ದಹಿಸಬೇಕೆಂಬ ಅಪೇಕ್ಷೆಯನ್ನು ನನಗೆ ಹೇಳಿದೆ. ಹಿಂದೊಮ್ಮೆ ಓಲೆಗರಿಯ ಗ್ರಂಥಗಳನ್ನು ಸಂಗ್ರಹಿಸುತ್ತಿದ್ದ ಹಳೆಯ ಪೆಟ್ಟಿಗೆಯಲ್ಲಿ ಗಂಧದ ತುಂಡು ಗಳಿದ್ದವು. ಕೊನೆಯ ಪವಿತ್ರ ಸ್ನಾನಕ್ಕಾಗಿ ಸಾಕಷ್ಟು ಗಂಗಾಜಲವನ್ನೂ ನೀನು ಸಂಗ್ರಹಿಸಿದ್ದೆ. ಎಲ್ಲವೂ ಆದಷ್ಟು ಬೇಗ ಮುಗಿದು ಹೋಗಬೇಕೆಂದು ನಿನ್ನ ಅಪೇಕ್ಷೆ. ತಾಯಿಯ ಅಗಲಿಕೆಯ ನೋವನ್ನು ತೀವ್ರವಾಗಿ ಅನುಭವಿಸುವುದು ನಾನು ಮಾತ್ರವೇ ಎಂದು ನೀನು ಭಾವಿಸಿದ್ದೆ. ಈ ವಿಷಯಗಳನ್ನು ಹಂಚಿಕೊಂಡ ನಂತರ ನೀನು ಹೇಳಿದೆ: "ಹೋಗು. ನನ್ನ ಹಣೆಯಲ್ಲಿ ಹಾಗೆ ಬರೆದಿದ್ದರ ಮತ್ತೆ ನೋಡೋಣ. ನನಗೆ ಮರುಹುಟ್ಟು ಬಂದಾಗ." ನನಗೆ ಅನುಮತಿ ದೊರೆಯಿತು.

ಅಮ್ಮಾ, ಈ ವಿಧಿಯೆಂದರೇನು? ಅದನ್ನು ಯಾರು ತೀರ್ಮಾನಿಸುತ್ತಾರೆ? ಹೇಳು. ಯಾವ ಶಕ್ತಿಯು ನನಗೆ ಸುದ್ದಿಯನ್ನು ತಲುಪಿಸಿತು? ೧೯೭೧ರ ಅಕ್ಟೋಬರ್ ಹದಿನಾರರ ರಾತ್ರಿ ಒಂದು ಗಂಟೆಯಲ್ಲಿ! ನೀನಿದ್ದ ಸ್ಥಳದಿಂದ ಒಂದು ನೂರ ಇಪ್ಪತ್ತೈದು ಮೈಲಿ ದೂರದಲ್ಲಿದ್ದ ಊರಿಗೆ!! ನೀನು ನನಗಾಗಿ ಕೂಗಿದ ಕ್ಷಣದಲ್ಲೇ ನನಗೆ ತಿಳಿಯಿತೆಂದು ಅಮೇಲೆ ಯಾರೋ ಹೇಳಿದರು. ನಾನು ಸೂರ್ಯೋದಯಕ್ಕೆ ಮುಂಚೆಯೇ ಹೊರಟೆ. ನಿನ್ನೆಡೆಗೆ ಓಡಿಬಂದೆ. ನಾನು ಬರುವ ವೇಳೆಗೆ ನೀನು ಸ್ನಾನಮಾಡಿ ಗಂಜಿ ಕುಡಿದಿದ್ದೆ. ನೀನು ಸಂತೋಷವಾಗಿದ್ದೆ. ನಿನ್ನ ಕೈ ಮರಿಮಗನ ತಲೆಯ ಮೇಲೆ ಆಶೀರ್ವಾದಪೂರ್ವಕವಾಗಿ ನೆಲೆಸಿತ್ತು. ನಾನು ಹೇಳಿದೆ.: "ಅಮ್ಮಾ, ಇಗೋ ನಾನು ಬಂದೆ."

"ಒಳ್ಳೆಯದು. ನೀನು ಬರುವೆಯೆಂದು ನನಗೆ ಗೊತ್ತು. ಹೇಳಬೇಕಾದ್ದು ಬಹಳ ಇದೆ. ಆದರೆ ನಾನು ಬಹಳ ದಣಿದಿದ್ದೇನೆ. ನನ್ನ ಜೀವನ ಕಥೆ ಮುಗಿಯಿತು. ನನಗೆ ಶೀಘ್ರಮರಣವನ್ನು ದಯಪಾಲಿಸುವುದಾದರೆ ಐದು ಸೇರು ಹಾಲು ಪಾಯಸದ ನೈವೇದ್ಯ ಕೊಡುವುದಾಗಿ ದೇವಿಗೆ ಹರಕೆ ಹೊತ್ತಿದ್ದೇನೆ. ನೀನು ಅದನ್ನು ತೀರಿಸಬೇಕು. ಹಾಗೆಯೇ ಕಾಳಿಗೆ ಒಂದು ಮುಂಡನ್ನು ಕೊಡಬೇಕು."

ನೀನು ಅಳಿಯನಿಗೆ ಹೇಳಿದೆ. "ನಾನು ಇಂದೋ ನಾಳೆಯೋ ಸಾಯುತ್ತೇನೆ. ಅಲ್ಲಿಯವರೆಗೆ ಇವಳು ಇಲ್ಲೇ ಇರಲಿ."

ನೀನು ಆ ದಿನವೇ ಕಣ್ಮರೆಯಾದೆ. ಅಮ್ಮಾ, ಮುಂದಿನ ಜನ್ಮದಲ್ಲಿಯೂ ನಿನ್ನ ಮಗಳಾಗಿಯೇ ಹುಟ್ಟುವೆನೆಂದು ಭಾಷೆ ಕೊಡುತ್ತೇನೆ. ನೀನು ಹೇಳುವುದನ್ನೆಲ್ಲಾ ಕೇಳಬೇಕು ನಾನು. ಅಮ್ಮಾ, ನೀನು ಮತ್ತೆ ನಿನ್ನ ಮಗಳಾಗಿ ಹುಟ್ಟುವ ಅದೃಷ್ಟ ನನಗೆ ದೊರೆಯುವುದೇನು? ಅಮ್ಮಾ ನೀನು ಮತ್ತೆ ಹುಟ್ಟಬೇಕೇನು? ಇಲ್ಲ. ನನಗೆ ಗೊತ್ತು. ನೀನು ಆ ವಿಶ್ವಮಾತೆಯೊಂದಿಗೆ ಒಂದಾಗಿಹೋಗುವವಳು. ಅದೇ ನಿನ್ನ ಹಂಬಲವಾಗಿತ್ತು. ಬರಲಿರುವ ಎಲ್ಲ ಜನ್ಮಗಳಲ್ಲೂ ಆ ತಾಯಿಯನ್ನೇ ನನ್ನ ತಾಯಿಯೆಂದು ನೋಡುವ ಸಾಮರ್ಥ್ಯವನ್ನು ನನಗೆ ದಯಪಾಲಿಸು.

ನಿನ್ನ ತುಟಿಗಳು ಭಗವಂತನ ನಾಮಸ್ಮರಣೆ ಮಾಡುತ್ತಿದ್ದವು. ಕೈಬೆರಳುಗಳು ಎಡೆಬಿಡದೆ ಎಣಿಸುತ್ತಿದ್ದವು. ನಿನಗೆ ಸಂಪೂರ್ಣ ಎಚ್ಚರವಿತ್ತು. ಅಂತರಂಗದ ಬೆಳಕಿನಿಂದ ನೀನು ದೀಪ್ತಳಾಗಿದ್ದೆ. ಸಂಜೆ ಐದು ಗಂಟೆಗೆ ಕಣ್ಣುತೆರೆದೆ. ಗಂಟೆ ಎಷ್ಟೆಂದು ಕೇಳಿದೆ. ಎಲ್ಲ ಬಾಗಿಲುಗಳನ್ನೂ ತೆಗೆಯಬೇಕು, ದೀಪಗಳನ್ನು ಹಚ್ಚಬೇಕು ಮತ್ತು ನಿನ್ನನ್ನು ನೆಲದಮೇಲೆ ಮಲಗಿಸಬೇಕು ಎಂದು ಕೇಳಿಕೊಂಡೆ. ಮುಳುಗುವ ಸೂರ್ಯನ ಬೆಳಕು ಕೋಣೆಯನ್ನು ತುಂಬಿತ್ತು. ಆಗಲೂ, ಅಮ್ಮಾ ನನಗೆ ಅರ್ಥವಾಗಲಿಲ್ಲ. ಯಾರೋ "ಮಲಯಾಳನಾಡು" ಪತ್ರಿಕೆಯನ್ನು ತಂದಿದ್ದರು. ಅದರಲ್ಲಿ ಮಾಧವಿಕುಟ್ಟಿಯ ಆತ್ಮಕಥೆ ಪ್ರಕಟವಾಗಿತ್ತು. ಅದು ನನ್ನ ಮಡಿಲಿನಲ್ಲಿ ಬಿದ್ದಿತ್ತು. ನಾನು ನಿನ್ನ ಕಡೆ ನೋಡುತ್ತಿದ್ದೆ. ಇದ್ದಕ್ಕಿದ್ದಂತೆ ಭೂಮಿ

ಕಂಪಿಸಿತು. ದಿಗಂತ ಚಲಿಸಿತು. ನನಗೂ ಹೃದಯರೋಗ ಇದೆ. ಬಹು ದೂರದ ಪ್ರಯಾಣ ಮಾಡಿಬಂದಿದ್ದೆ. ನೀನು ಪಿಸುಗುಟ್ಟಿದ್ದು ಏನು? ''ನೀರು'' ಎಂದೇ? ''ನಾರಾಯಣ'' ಎಂದೇ? ಒಂದು ಗುಟುಕು ಗಂಗಾಜಲವನ್ನು ಕುಡಿದೆ. ಒಮ್ಮೆ ಕಂಪಿಸಿದೆ. ದೀರ್ಘವಾಗಿ ಉಸಿರೆಳೆದು ಕೊಂಡೆ. ಅಲ್ಲಿಗೆ ಮುಗಿಯಿತು. ಆಮೇಲೆ ಸಂಪೂರ್ಣ ಮೌನ.

ಗುಂಪುಗುಂಪಾಗಿ ಜನರ ಆಗಮನ. ತಂತಿಗಳ ರವಾನೆ. ಮನೆಯ ಕಡೆ ಚಲಿಸಿದ ಕಾರುಗಳು. ಆಗಬೇಕಾದುದು ಆಗಿತ್ತು. ಮಕ್ಕಳಿಗೆ ಉಳಿದುದು ಒಂದೇ ಒಂದು ಜವಾಬ್ದಾರಿ. ಶವಸಂಸ್ಕಾರ. ಬಣ್ಣ ಹಾಕದ ಮುಂಡುವಿನಲ್ಲಿ ಸುತ್ತಿದ ನಿನ್ನ ದೇಹದ ಪಾದಗಳ ಬಳಿ ಕುಳಿತ ನಾನು ಭಾವ ಶೂನ್ಯಳಾಗಿದ್ದೆ. ಅಳುವುದು, ನಿಟ್ಟುಸಿರು ಬಿಡುವುದು, ಪ್ರಾರ್ಥನೆ ಯಾವುದೂ ಯಾವುದೂ ಬೇಡವೆನಿಸುತ್ತಿತ್ತು. ನೋವು ನಲಿವುಗಳಾಚೆಗಿನ ನಿರ್ಭಾವುಕ ಸ್ಥಿತಿ. ಯುಗಾಂತ್ಯದಲ್ಲಿ ಇರುವ ನಿಶ್ಚಲ ನೀರವತೆಯ ಹಾಗೆ. ತೀವ್ರ ಭಾವದ ಶಿಖರದಲ್ಲಿರುವುದು ಸಂಪೂರ್ಣ ಖಾಲಿತನ.

ನನ್ನ ಸುತ್ತಲೂ ಆವರಿಸಿರುವ ಬಿರುಗಾಳಿಯ ಅಬ್ಬರ ಕೇವಲ ಕಲ್ಪನೆಯೇನು? ನನ್ನ ರಕ್ತದ ಒತ್ತಡ ಅಪರಾಧಿಯೇನು? ಅಥವಾ, ಅಮ್ಮಾ ಅದು ನೀನು ಹೇಳುತ್ತಿದ್ದ ಹಾಗೆ ನಿನ್ನನ್ನು ಕರೆದೊಯ್ಯಲು ಬಂದ ದೇವದೂತರ ರಥಚಕ್ರದ ಧ್ವನಿಯೋ? ಯಾರಿಗೆ ಗೊತ್ತು? ನಾವು, ಮನುಷ್ಯರು ಕೇವಲ ಊಹಿಸಬಲ್ಲೆವು. ದೇವರು ಮನುಷ್ಯನಾಗುವ ಕ್ಷಣ. ಮತ್ತೆ ದೇವರಾಗಿ ಬದಲಾಗುವ ಕ್ಷಣ. ಅದು ಸಾವಿನ ಕ್ಷಣ. ನಿಜ, ಎಲ್ಲ ಮಾನವರೂ ದೇವರ ಅಂಶಗಳೇ! ಆದರೆ ಎಲ್ಲರೂ ದೇವರೊಳಗೆ ಸೇರಿಹೋಗಲು ಸಾಧ್ಯವೇನು? ಈ ಲೋಕದ ಗಡಿಗಳನ್ನು ದಾಟಿ ಅನಂತ ಜೀವನದ ಸೀಮೆಯೊಳಗೆ ಸೇರಿಹೋದ ಆತ್ಮವು ಮರಳಿ ಬರುವುದೇ?ಅಮ್ಮಾ ನನಗೆ ಇದೆಲ್ಲದರ ಬಗ್ಗೆ ಆಲೋಚನೆ ಮಾಡುವ ಆಸಕ್ತಿ ಇನ್ನು ಇಲ್ಲ. ಉತ್ತರ ಸಿಗುವುದೂ ಇಲ್ಲ. ಸರಿ, ಕಾಲದ ಆದಿಯಿಂದ ನಿರುತ್ತರವಾಗಿರುವ ಈ ಪ್ರಶ್ನೆಯು ಹಾಗೆಯೇ ಉಳಿಯಲಿ.

ಈ ಬರವಣಿಗೆಯನ್ನು ಮುಗಿಸುವುದಕ್ಕೆ ಮೊದಲು, ಆ ದಿನ ರಾತ್ರಿ ನಡೆದ ಬಹು ಲೌಕಿಕ ಘಟನೆಯೊಂದನ್ನು ನಾನು ಹೇಳಲೇಬೇಕು. ಕಾಳಿ, ಸಂಪ್ರದಾಯಗಳಲ್ಲಿ ಇನ್ನೂ ನಂಬಿಕೆ ಇಟ್ಟಿರುವ ಹರಿಜನರ ಹೆಂಗಸು. ಕಡು ಬಡವಿ. ಅಸ್ಪೃಶ್ಯತೆಯ ನಿಯಮಗಳು ಅಳಿಸಿಹೋಗಿ ಹಲಕಾಲ ಕಳೆದರೂ ಅವಳಿಗೆ ನಮ್ಮ ಹತ್ತಿರ ಬರಲು ಅಂಜಿಕೆ, ಮುಜುಗರ. ಅಂಗಳದಲ್ಲಿ ಅವಳು, ವೆರಾಂಡದಲ್ಲಿ ನೀನು. ಗಂಟೆಗಟ್ಟಲೆ ಮಾತುಕತೆ ನಡೆಯುತ್ತಿತ್ತು. ನಿನಗೆ ಅವಳೆಂದರೆ ವಿಶೇಷ ಅಕ್ಕರೆ. ನೀನು ಕಳೆದುಕೊಂಡ ಮೊದಲ ಮಗುವಿಗೆ ಅವಳದೇ ವಯಸ್ಸಿರಬೇಕು. ನಿನ್ನ ಸಾವಿನ ಸುದ್ದಿ ಕೇಳಿ ನುಚ್ಚುನೂರಾದ ಅವಳು ಓಡಿಬಂದಳು. ''ಒಡತಿ, ಒಡತಿ ನಾನು ಕೆಟ್ಟೆ.'' ಎನ್ನುತ್ತಾ ಅವಳು ಹಣೆಹಣೆ ಬಡಿದುಕೊಂಡು, ನೆಲದಮೇಲೆ ಹೊರಳಾಡುತ್ತಾ ಅತ್ತಳು. ಅವಳ ಬಂಧುಗಳು ಬಂದು ಕರೆದುಕೊಂಡುಹೋದರು. ನಮಗೂ

ಕಾಳಿಗೂ ಇದ್ದ ಬಾಂಧವ್ಯದ ಸ್ವರೂಪವೇನು? ನೀನು ಮರಳಿ ಹುಟ್ಟುವುದು ಅಂಥ ಜನರ ನಡುವೆಯೇನು?

ನಾನು ದೇವಿಗೆ ಪಾಯಸದ ನೈವೇದ್ಯವನ್ನು ಸಮರ್ಪಿಸಿದೆ. ಅಮ್ಮಾ, ಕಾಳಿಗೆ ಮುಂಡನ್ನೂ ಕೊಟ್ಟೆ. ಅಮ್ಮಾ, ನಿನ್ನೊಂದಿಗೆ ಒಂದು ಯುಗ ಮುಗಿಯಿತು. ನಾನು ಅದರ ಪ್ರತಿನಿಧಿಯಾಗುವೆನೆಂದು ತೋರುವುದಿಲ್ಲ. ಏಕೆಂದರೆ ಪ್ರತಿಯೊಂದು ಪೀಳಿಗೆಗೂ ಅದರದೇ ಆದ ಗುರುತು ಗೆರೆಗಳಿರುತ್ತವೆ. ಆದರೂ ಎಲ್ಲ ಕಾಲಕ್ಕೂ ಸಲ್ಲುವ, ತಾಯಿತನದ ಕರುಳು ಬಳ್ಳಿಯಲ್ಲಿ ನಾನೂ ಒಂದು ಕುಡಿ. ಕಾಲದ ಆದಿಯಲ್ಲಿ ಚಿಗುರೊಡೆದ ಈ ಬಳ್ಳಿ ನಿನ್ನವರೆಗೂ ಬೆಳೆದುಬಂತು. ಅಮ್ಮಾ, ಈಗ ಅದು ನನ್ನ ನರನಾಡಿಗಳನ್ನು, ಇಂದ್ರಿಯಗಳನ್ನು, ಜೀವನವನ್ನು ವ್ಯಾಪಿಸಿಬಿಟ್ಟಿದೆ. ತಾಯಿತನವು ಸಾರ್ವಕಾಲಿಕ ಸತ್ಯವೆಂದು ನನಗೆ ತಿಳಿದಿದೆ. ಆದ್ದರಿಂದ, ಇಗೋ, ಈ ಎಳ್ಳು, ನೀರು ಮತ್ತು ಹೂಗಳನ್ನು ನಿನಗೆ ಸಮರ್ಪಿಸಲು ಅನುಮತಿಕೊಡು. ಸತ್ಯವನ್ನು ಗ್ರಹಿಸಿರುವೆನೆಂಬ ಧೈರ್ಯದಿಂದ, ನಂಬಿಕೆಯಿಂದ ಈ ಕೊಡುಗೆ. ಈಗ ಇಲ್ಲವಾಗಿರುವ, ಎಲ್ಲ ಅಮ್ಮಂದಿರ ಆತ್ಮಗಳಿಗೆ. ಬದುಕಿರುವ ಎಲ್ಲ ಅಮ್ಮಂದಿರ ಪರವಾಗಿ. ಬಾ, ನನ್ನ ಅಮ್ಮನ ರೂಪದಲ್ಲಿ ಬಂದು ಇದನ್ನು ಸ್ವೀಕರಿಸು.

## ಓದಿಗೆ ನೆರವು

ಜಗತ್ತಿನಲ್ಲಿ ಜೀವಿಗಳಿಗೆ, ಅವರು ಸಾಕಾರಗೊಳಿಸಿಕೊಂಡ ಸಂಸ್ಕೃತಿಗಳಿಗೆ ಸ್ವಾಯತ್ತ ಗೊಳ್ಳಬೇಕೆಂಬ ಹಂಬಲವಿರುತ್ತದೆ, ಹಕ್ಕಿರುತ್ತದೆ ಎಂಬ ವಿಚಾರ ಒಳಗಿಂದೊಳಗೇ 'ಸ್ವಾಯತ್ತ' ಎಂಬುದನ್ನೂ ಜಾಗತೀಕರಣ ಗೊಳಿಸುವ ಸಾಧ್ಯತೆಯನ್ನು ಹೊಂದಿರಬಲ್ಲದು. ಏಕೆಂದರೆ ಮುಷ್ಟಿಯೊಳಗೆ ಐದು ಅಸಮಾನ ಬೆರಳಿರುತ್ತವೆ ಎಂಬುದು, ಐದು ವಿಭಿನ್ನ ಬೆರಳುಗಳು ಸೇರಿ ಮುಷ್ಟಿಗೊಳ್ಳುತ್ತದೆಂಬುದೂ ಒಂದೇ ವಾಸ್ತವವನ್ನು ನೋಡುವ ಎರಡು ತಿಳುವಳಿಕೆಗಳಾಗಿರುತ್ತವೆ. ಈ ಹಿನ್ನೆಲೆಯಲ್ಲಿ ನೋಡಿದಾಗ ದೇಶೀ ಪರಿಕಲ್ಪನೆ ಜಾಗತೀಕರಣ ವನ್ನು ಒಡೆಯುತ್ತಿದೆಯೋ, ಬಲಪಡಿಸುತ್ತಿದೆಯೋ ಎಂಬುದೊಂದು ಉದ್ಧಟ ಪ್ರಶ್ನೆಯಾಗಿ ಈ ಹೊತ್ತು ಕಾಣಬಹುದು. ಮಹಿಳಾ ಅಧ್ಯಯನದಲ್ಲಿ ಕೂಡ 'ದೇಶೀ ಪರಿಕಲ್ಪನೆ' ಚುರುಕು ಗೊಳ್ಳುತ್ತಿರುವ ಇಂದು ಅದರ ಅಂತಃಸತ್ವವನ್ನು ಪರೀಕ್ಷಿಸಿಕೊಳ್ಳಬೇಕಾದುದು ಅಧ್ಯಯನ ಶಿಸ್ತಿನ ಈ ಹೊತ್ತಿನ ಅಗತ್ಯವಾಗಿದೆ. ಈ ದಿಕ್ಕಿನಲ್ಲಿ ಹೊರಟ ಅಧ್ಯಯನಕ್ಕೆ ಸಾಮಗ್ರಿಯಾಗ ಬಹುದಾದ ಪುಸ್ತಕಗಳ ಒಂದು ಕಿರುಪಟ್ಟಿಯನ್ನು ನೀಡಿದೆ. ಆಯ್ದ ಕೆಲವು ಪುಸ್ತಕಗಳನ್ನು ಇಲ್ಲಿ ಪರಿಚಯಿಸಲಾಗಿದೆ.

ಜ್ಯೋತ್ಸ್ನಾ ಕಾಮತ್
**ಮಹಿಳೆ ಒಂದು ಅಧ್ಯಯನ**
ನವಕರ್ನಾಟಕ ಪ್ರಕಾಶನ
ಬೆಂಗಳೂರು ೧೯೯೯

ಲಜ್ಜಾಗೌರಿ, ಜೀವೋತ್ಪತ್ತಿಯ ಪ್ರತೀಕ, ಪ್ರಾಚೀನ ಸ್ತ್ರೀ ಶಿಕ್ಷಣ ಇತ್ಯಾದಿ ಐದು ಸಂಶೋಧನಾ ಲೇಖನಗಳನ್ನುಒಳಗೊಂಡ ಈ ಕೃತಿ ಅತ್ಯಂತ ಸೂಕ್ಷ್ಮವಾದ ನೆಲೆಯಲ್ಲಿ ವಸಾಹತುಶಾಹಿ ಚಿಂತನಾಕ್ರಮಗಳು ಭಾರತೀಯ ಸಮಾಜದ ಬಗ್ಗೆ ಆಧುನಿಕ ಜ್ಞಾನದ ಹೆಸರಿನಲ್ಲಿ ಕಟ್ಟಿ ಕೊಟ್ಟ 'ಮಿಥ್'ಗಳನ್ನು ಒಡೆಯುವ ಆಶಯವನ್ನು ಪ್ರಕಟಿಸುತ್ತದೆ. ಸಮಕಾಲೀನ ಭಾರತೀಯ ಮಹಿಳೆಯ ದುಸ್ಥಿತಿಯನ್ನು ಪರಂಪರಾಗತ ಲಕ್ಷಣವೆಂದು ಕಟ್ಟಿಕೊಟ್ಟ ಚಿಂತನೆಗೆ ಪರ್ಯಾಯವಾಗಿ ಭಾರತೀಯ ಪರಂಪರೆಯ ಕೆಲವು ಭಿನ್ನ ಸತ್ಯಗಳನ್ನು ಕಟ್ಟಿಕೊಡುವ ಕೆಲಸ ಇಲ್ಲಿ ನಡೆದಿದೆ.

ಶೈಲಜಾ ಹಿರೇಮಠ
**ಪಾತರದವರು**
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೧೯೯೯

ಭಾರತೀಯ ಪುರುಷ ಪ್ರಧಾನತೆ ರೂಪಿಸಿದ ಲಿಂಗ ತಾರತಮ್ಯವೆಂಬುದು ಹೆಣ್ಣನ್ನು

ಕೇವಲ ಲೈಂಗಿಕ ಪಾವಿತ್ರ್ಯತೆ ಮತ್ತು ನಿಷ್ಠೆಗೆ ಮಾತ್ರ ಒತ್ತಾಯಿಸಿದ್ದಲ್ಲ. ಅದಕ್ಕೆ ವಿರುದ್ಧವಾದ ಪ್ರತ್ರಿಯಗೆ ಕೂಡ ಒತ್ತಾಯಿಸುತ್ತ ಬಂದಿದ್ದು. ಈ ಒತ್ತಾಯದ ಹಿಂದೆ ಲಿಂಗ ರಾಜಕಾರಣ ವೊಂದೇ ಅಲ್ಲದೆ ಜಾತಿ, ಹಣ, ಅಧಿಕಾರ, ಧರ್ಮ, ಇತ್ಯಾದಿ ಅಂಶಗಳು ಸಕ್ರಿಯವಾಗಿ ದುಡಿದಿವೆ ಎಂಬ ಸಂಗತಿಗಳನ್ನು 'ಪಾತರದವರು' ಎಂಬ ಸ್ತ್ರೀಸಮುದಾಯದ ಕುರಿತ ಸಮಾಜಶಾಸ್ತ್ರೀಯ ಅಧ್ಯಯನದ ಮೂಲಕ ವಿವರಿಸಲು ಈ ಕೃತಿ ಯತ್ನಿಸುತ್ತದೆ.

ಗಾಯತ್ರಿ ನಾವಡ
**ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು**
ಸಿರಿ ಪ್ರಕಾಶನ, ಹೊಸಪೇಟೆ. ೧೯೯೯

ಭಾರತೀಯ ಸ್ತ್ರೀವಾದಿ ಅಧ್ಯಯನಗಳು ಮೌಖಿಕ ಪರಂಪರೆಯೆಡೆಗೆ ಚಲಿಸಬೇಕು ಎಂಬ ಆಶಯವನ್ನು ಹಲವಾರು ಲೇಖನಗಳ ಸಂಬಂಧ ಈಗಾಗಲೇ ಪ್ರಸ್ತಾಪಿಸಿರುವ ಲೇಖಕಿ ಇಲ್ಲಿ ಅದನ್ನು ಇನ್ನಷ್ಟು ವಿಸ್ತರಿಸಲೆತ್ನಿಸಿದ್ದಾರೆ. ಮೌಖಿಕ ಪರಂಪರೆಯಲ್ಲಿ ಹೆಣ್ಣಿನ 'ಮಾತು' ಇದೆ, ಲಿಖಿತ ಪರಂಪರೆಯಲ್ಲಿ ಹೆಣ್ಣಿನ 'ಮೂಕತೆ' ಇದೆ. ಮಾತೃರೂಪಿ ಸಂಸ್ಕೃತಿಯಲ್ಲಿ ಹೆಣ್ಣು 'ಅಸ್ತಿತ್ವ' ಪಡೆದಿದ್ದಾಳೆ. ಪಿತೃರೂಪಿ ವ್ಯವಸ್ಥೆಯಲ್ಲಿ ಹೆಣ್ಣು 'ಅದೃಶ್ಯ'ಳಾಗಿದ್ದಾಳೆ ಎಂಬ ನಂಬಿಕೆಗೆ ಹೇರಳವಾದ ಸಾಕ್ಷಿ ಪುರಾವೆಗಳನ್ನು ಒದಗಿಸುತ್ತ ಹೋಗುವ ಈ ಕೃತಿಯು ಜಾನಪದ ಸಾಹಿತ್ಯವನ್ನು ತನ್ನ ಆಕರವಾಗಿ ಮತ್ತು ಅಧ್ಯಯನ ಶಿಸ್ತಾಗಿಬಳಸಿಕೊಳ್ಳುತ್ತದೆ.

ಮೇಲಿನ ಮೂರು ಪುಸ್ತಕಗಳು ದೇಸಿ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಭಾರತೀಯ ಸ್ತ್ರೀವಾದವನ್ನು ನಿರ್ವಚಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗಿದ್ದು ಅವು ಸಾಹಿತ್ಯ ಹಾಗು ಸಮಾಜ ಶಾಸ್ತ್ರಗಳೆರಡರ ಅಧ್ಯಯನ ಶಿಸ್ತನ್ನು ಬೆರೆಸಿ ಬಳಸಿಕೊಳ್ಳುವ ಮಾದರಿಯದಾಗಿದೆ.

**Structures of Patriarchy**
Ed: Bina Agarwal
Kali for Women
New Delhi 1988

ಆಧುನೀಕರಣಗೊಳ್ಳುತ್ತಿರುವ ಏಷ್ಯಾ ಖಂಡದ ರಾಷ್ಟ್ರಗಳಲ್ಲಿ ಆಧುನಿಕ ಪ್ರಕ್ರಿಯೆಯ ಅಂಗವಾಗಿ ಕೈಗೊಳ್ಳಲಾಗಿರುವ ವಿವಿಧ ಕಾರ್ಯಕ್ರಮಗಳು ಹೇಗೆ ಪಿತೃಪ್ರಧಾನತೆಯನ್ನು ತಮ್ಮ ಆಧುನೀಕರಣದ ಸಂದರ್ಭದಲ್ಲಿಯೂ ಮುಂದುವರಿಸಿಕೊಂಡು ಹೋಗುತ್ತಿವೆ ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ. ಶ್ರೀಲಂಕಾ, ಮಲೇಶಿಯಾ, ಚೀನಾ, ಬಾಂಗ್ಲಾದೇಶ ಗಳಲ್ಲಿನ ಹಲವಾರು ಅಭಿವೃದ್ಧಿ ಯೋಜನೆಗಳನ್ನು ಕುರಿತ ವಿಮರ್ಶಾತ್ಮಕವಾದ, ಅಧ್ಯಯನವನ್ನೊಳಗೊಂಡ ಈ ಕೃತಿ ಭಾರತದ ಸಂದರ್ಭದಲ್ಲಿ ಹಸಿರು ಕ್ರಾಂತಿ ಇತ್ಯಾದಿ ಗ್ರಾಮೀಣಾಭಿವೃದ್ಧಿ ಯೋಜನೆಗಳು, ದೇವದಾಸಿ ನಿರ್ಮೂಲನಗಳಂತಹ ಸಮಾಜೋದ್ಧಾರದ ಕಾರ್ಯಕ್ರಮಗಳು ಹೇಗೆ ಪ್ರಗತಿಪರತೆಯ ಮುಖವಾಡ ಹೊತ್ತು ಮಹಿಳೆಯರ ಸಂಕಷ್ಟವನ್ನು ಮತ್ತಷ್ಟು ಹೆಚ್ಚಿಸುವುದೇ ಆಗಿದೆ ಎಂಬುದನ್ನು ಪ್ರಸ್ತಾಪಿಸುತ್ತದೆ.

**Women and Waste land Development in India**
Ed: Andrea M. singh
Neera Burra
New Delhi 1993

ದೇಶದಾದ್ಯಂತ ಹರಡಿರುವ ವಿವಿಧ ಬಗೆಯ ಬಂಜರು ಭೂಮಿಯ ಸದುಪಯೋಗದ ಕಾರ್ಯಕ್ರಮದಲ್ಲಿ ಮಹಿಳೆಗೆ ದೊರೆಯುವ ಪಾಲು ಯಾವ ಸ್ವರೂಪದ್ದು ಎಂಬುದರ ಪರಿಶೀಲನೆಯ ಮೂಲಕ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಮಹಿಳೆಯನ್ನು ತೊಡಗಿಸುವ ಹಾಗು ಆ ಮೂಲಕ ಮಹಿಳಾ ಅಭಿವೃದ್ಧಿಯನ್ನು ಸಾಧಿಸುವ ದಿಕ್ಕಿನಲ್ಲಿ ಭಾರತದ ಸಫಲತೆ ಎಷ್ಟು ಎಂಬುದನ್ನು ಚರ್ಚಿಸಲಾಗಿದೆ. ಮುಖ್ಯವಾಗಿ ಇಂತಹ ಯೋಜನೆಗಳ ಅನುಷ್ಠಾನದಲ್ಲಿ ಮಹಿಳೆ ಎದುರಿರುವ ಜಾತಿ, ವರ್ಗ, ಲಿಂಗ ಇತ್ಯಾದಿ ಹಲವಾರು ಅಡೆತಡೆಗಳನ್ನು ಕುರಿತಂತೆ ಇಲ್ಲಿ ಬೆಳಕು ಚೆಲ್ಲಲಾಗಿದೆ.

ಮೇಲಿನ ಐದು ಪುಸ್ತಕಗಳ ಸಂದರ್ಭದಲ್ಲಿ ಕನ್ನಡ ಹಾಗು ಇಂಗ್ಲೀಷ್ ಪುಸ್ತಕಗಳ ನಡುವೆ ಒಂದು ವ್ಯತ್ಯಾಸ ಎದ್ದು ಕಾಣುತ್ತವೆ. ಇಂಗ್ಲೀಷ್ ಪುಸ್ತಕಗಳು ಸಂಪೂರ್ಣವಾಗಿ ಸಮಾಜಶಾಸ್ತ್ರ ಅಧ್ಯಯನ ಶಿಸ್ತನ್ನು ಆಧರಿಸಿದ್ದಾಗಿದ್ದು ಅವು ಪ್ರಸ್ತುತದ ಸಮಸ್ಯೆಗಳಿಗೆ ಹೆಚ್ಚು ಒತ್ತು ನೀಡಿವೆ. ಕನ್ನಡದ ಕೃತಿಗಳು ಪರಂಪರೆ ಹಾಗು ಪ್ರಸ್ತುತದ ನಡುವೆ ಮಹಿಳೆಯ ಬದುಕನ್ನು ಗ್ರಹಿಸುತ್ತ ಭಾರತೀಯ ಪರಂಪರೆಯ ಬಗ್ಗೆ ಆಶಾದಾಯಕ ನಿಲುವನ್ನು ಪ್ರಕಟಿಸುವುದರೊಂದಿಗೆ ಮುಕ್ತಾಯಗೊಳ್ಳುತ್ತವೆ.

ಸಂ. ನಾಗಮಣಿ ಎಸ್. ರಾವ್.
**ಲೇಖ-ಲೋಕ**
ಕರ್ನಾಟಕ ಲೇಖಕಿಯರ ಸಂಘ
ಬೆಂಗಳೂರು ೧೯೯೯

ಮಂಗಳಾ.ಚಿ.ನ.
**ಮಾತೃಪೂಜೆ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೧೯೯೪

ಮಣಿಮಾಲಿನಿ.ವಿ.ಕೆ.
**ದ್ರೌಪದಿ ಸಮೀಕ್ಷೆ**
ಮುಂಬಯಿ ವಿಶ್ವವಿದ್ಯಾಲಯ, ೧೯೯೬

ಮನೋರಮಾ ಎಂ.ಭಟ್
**ದಕ್ಷಿಣ ಕನ್ನಡ ಜಿಲ್ಲೆಯ ಮೊದಲ ಲೇಖಕಿಯರು**
ಕರಾವಳಿ ಲೇಖಕಿಯರ ವಾಚಕಿಯರ ಸಂಘ
ಮಂಗಳೂರು ೧೯೯೬

ರಾಮಚಂದ್ರನ್. ಸಿ. ಎನ್.
ತ್ರಿವೇಣಿ
ಸಾಹಿತ್ಯ ಅಕಾಡೆಮಿ ನವದೆಹಲಿ ೧೯೯೯

Frederick Errington and Deborah Gewertz
**Cultural alternatives and a Feminist Anthropology**
Cambridge University Press
1987

Jagdish Chandra Jain and Margaret Walter
**Women in Ancient Indian Tales**
Mittal Publications
Delhi 1987

Nagesh H.V. P.S.Nair & Katti A.P.
**Widowhood in India**
Sri Dharmasthala Manjunatheshwara
Education Trust, Ujire 1988

Penelope Harvey and Peter Gow
**Ser and Violence**
Routledge, London
1989

Sunsan Menpul & Jane Bendall
**Sexuality and Subordination**
Routledge, London
1989

Malavika Karlekar
**Voices from within**
Oxford University Press
New Delhi 1991

Pámela J. Creedon
**Women in Mass Communication**
Sage publications
New Delhi 1993

Teresa Del Valle
**Gendered Anthropology**
Routledge London
1993

Vrinda Nabar
**Carse as Women**
Penguin Borlas India
1995
New Delhi

Barbara Southhard
**The Women's Movement and colonial politics in Bengal**
Mahohar, Delhi 1995

## ಈ ಸಂಚಿಕೆಯಲ್ಲಿ

ಎ.ಎಸ್. ದಿನೇಶ್
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ಶೈಲಜಾ ಹಿರೇಮಠ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ವೈ.ಸಿ. ಭಾನುಮತಿ
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು - ೫೭೦ ೦೦೬

ಚಂದ್ರಮತಿ ಸೋಂದಾ
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು - ೫೭೦ ೦೦೬

ಎಂ. ಉಷಾ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ಎಚ್.ಎಸ್. ಶ್ರೀಮತಿ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ಟಿ.ಆರ್. ಚಂದ್ರಶೇಖರ
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ಸಿದ್ದಗಂಗಮ್ಮ
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ಕಾ.ಗು. ಗಾಯಿತ್ರಿ ದೇವಿ
ಸಹಾಯಕ ಪ್ರಾಧ್ಯಾಪಕರು
ಸಾಮಾಜಿಕ ಮತ್ತು ಆರ್ಥಿಕ
ಬದಲಾವಣೆಯ ಅಧ್ಯಯನ ಸಂಸ್ಥೆ
ಬೆಂಗಳೂರು - ೫೬೦ ೦೭೨

ಮಹಿಳೆಯ ಅಸ್ಮಿತೆ, ಅಸ್ತಿತ್ವಗಳನ್ನು ಗುರುತಿಸುವ, ಅವಳ ಬದುಕನ್ನು ಸುಗಮವಾಗಿಸುವ ದಿಸೆಯಲ್ಲಿ ಚಿಂತನೆ ನಡೆಸುವ ಮಾಧ್ಯಮಗಳಿಗಾಗಿ ಹುಡುಕಾಟ ನಡೆಸಬೇಕಿದೆ. ಏಕೆಂದರೆ ಈವರೆಗೂ ಈ ಪುರುಷಪ್ರಧಾನ ಸಮಾಜಕ್ಕೆ ಮಹಿಳೆಯನ್ನು ದುಡಿಸಿಕೊಳ್ಳುವುದು ಹೇಗೆ ಎಂಬುದೇ ಚಿಂತೆಯಾಗಿದೆಯೇ ಹೊರತು ಅವಳ ಅಗತ್ಯಗಳನ್ನು ಗಮನಿಸಬೇಕೆಂದು ಅನಿಸಿದ್ದಿಲ್ಲ. ಇಂದಿನ ಜಾಗ್ರತ ಮಹಿಳೆ ತನ್ನ ವರ್ತಮಾನ, ಭವಿಷ್ಯಗಳನ್ನು ತಿದ್ದಿ ರೂಪಿಸುವ ಸಾಮರ್ಥ್ಯವನ್ನು ಕ್ರಮೇಣ ಪಡೆಯುತ್ತಿದ್ದಾಳೆ. ಈ ಹಂತದಲ್ಲಿ ಗಂಭೀರವಾದ ಚಿಂತನೆ, ಚರ್ಚೆ, ಸಲಹೆ, ಸೂಚನೆಗಳನ್ನು ಕೊಡುತ್ತಾ ಅವಳ ಪ್ರಯತ್ನಕ್ಕೆ ನೆರವಾಗುವ ಪತ್ರಿಕೆಗಳ ಅಗತ್ಯವನ್ನು ಪೂರೈಸುವ ಪ್ರಯತ್ನವಾಗಿ ಈ ಮಹಿಳಾ ಅಧ್ಯಯನ ಪತ್ರಿಕೆ ಕೆಲಸ ಮಾಡುತ್ತಿದೆ. ಇಲ್ಲಿನ ಚಿಂತನೆ, ಚರ್ಚೆಗಳು ತಾತ್ತ್ವಿಕ ನೆಲೆಯ ಶೋಧಗಳಲ್ಲಿರುವ ವಿದ್ವಾಂಸರೂ, ಕ್ರಿಯಾಕ್ಷೇತ್ರಗಳಲ್ಲಿರುವ ಕಾರ್ಯಕರ್ತರೂ ಪರಸ್ಪರ ಸಂವಾದ ನಡೆಸಲು ನೆರವಾಗುವಂತಿರಲಿ ಎಂಬ ಆಶಯದವಾಗಿವೆ.